ವೀರಭದ್ರ ಕವಿ ವಿರಚಿತ

# ಅರುವತ್ತು ಮೂವರು ಪುರಾತನರ ಪುರಾಣ

ಸಂಪಾದಕ

ಶಾಂತರಸ

ಭಾರತೀ ಪ್ರಕಾಶನ :: ರಾಯಚೂರು

Aruvattu Moovaru Puratanara Purana : by Veerabhadra Kavi, Ed. by Shantharasa Principal G. M. A. Junior College Raichur, Pub. by Bharathi Prakashana Raichur

1977 PP XXV + 326 Price : Rupees Twelve



★

ಭಾರತೀ ಪ್ರಕಾಶನ

ಜನವರಿ ೧೯೭೭

ಹಕ್ಕುಗಳು : ಸಂಪಾದಕ

ಮುಖಪುಟ : ಎಮ್. ಬಿ. ಪಾಟೀಲ ಹುಬ್ಬಳ್ಳಿ

ಬೆಲೆ : ಹನ್ನೆರಡು ರೂಪಾಯಿ



★

ಅಚ್ಚು : ಪಿ. ಬಸಣ್ಣ
ಜನತಾ ಪ್ರಿಂಟರಿ ಅರಬ್ ಮೊಹಲ್ಲಾ, ರಾಯಚೂರು

## ಪರಿವಿಡಿ

# ಪ್ರಕಾಶಕರ ಮಾತು

ಎಡೆದೊರೆ ನಾಡಿನ ಬಹುಸಮರ್ಥ ಕವಿ ಜಾಲಹಳ್ಳಿಯ ವೀರಭದ್ರ. ಆತನ ಕಾವ್ಯ ಅರುವತ್ತು ಮೂವರು ಪುರಾತನರ ಪುರಾಣವನ್ನು ಪ್ರಕಟಿಸಲು ನಮಗೆ ಸಂತೋಷವೆನಿಸುತ್ತದೆ. ಈ ಗ್ರಂಥ ಪ್ರಕಟನೆಗೆ ಹಲವರು ಹಲವು ವಿಧದಿಂದ ನೆರವಾಗಿದ್ದಾರೆ. ಅವರೆಲ್ಲರನ್ನು ನೆನೆಯುವೆವು. ನಮಗೆ ಅತಿಹೆಚ್ಚಿನ ನೆರವು ದೊರಕಿದ್ದು ಮಹಾದಾನಿಗಳಾದ ಜಾಲಹಳ್ಳಿಯ ಶ್ರೀ ವೀರಭದ್ರಪ್ಪ ಶೆಟ್ಟಿ ಅವರಿಂದ. ಅವರು ಈ ಗ್ರಂಥ ಪ್ರಕಟನೆಗೆ ಹಿಡಿಯುವ ಎಲ್ಲ ವೆಚ್ಚವನ್ನು ವಹಿಸಿಕೊಂಡು ಸಾರಸ್ವತ ಲೋಕಕ್ಕೆ ಮಹೋಪಕಾರವನ್ನು ಮಾಡಿದ್ದಾರೆ. ಅವರನ್ನು ಅಂತಃಕರಣಪೂರ್ವಕವಾಗಿ ನೆನೆಯುವೆವು.

ಜಾಲಹಳ್ಳಿಯ ಅನೇಕ ಸ್ನೇಹಿತರು ಹಿರಿಯರು ಸಹಾಯ ನೀಡಿದ್ದಾರೆ. ಅವರಲ್ಲಿ ಹೆಚ್ಚಿನ ಸಹಾಯ ದೊರಕಿದ್ದು ಹಿರಿಯರಾದ ಶ್ರೀ ಮಾಲಿಗೌಡರ ಅಮರೇಗೌಡರಿಂದ ಮತ್ತು ಶ್ರೀಕಂಟೆಯ್ಯ ಚೆನ್ನಯ್ಯ ಸಾಲಿಮಠ ನಾಲತ್ವಾಡ ಅವರಿಂದ. ಇವರೆಲ್ಲರಿಗೆ ನಮ್ಮ ನಮನಗಳು.

ಸುಂದರವಾದ ಮುಖಪುಟ ಚಿತ್ರ ಬರೆದುಕೊಟ್ಟ ನಾಡಿನ ಶ್ರೇಷ್ಠ ಚಿತ್ರಕಲಾವಿದರಾದ ಶ್ರೀ ಎಮ್.ಬಿ. ಪಾಟೀಲ ಹುಬ್ಬಳ್ಳಿ ಅವರಿಗೆ ನಮ್ಮ ನಮನಗಳು.

ಪ್ರೂಫ್ ತಿದ್ದುವಲ್ಲಿ ನೆರವಾದ ಕುಮಾರ ಬಸವಪ್ರಭು, ಕುಮಾರಿ ಭಾರತಿ ಮತ್ತು ಅಚ್ಚು ಚೆಲುವಾಗುವಂತೆ ಶ್ರಮಿಸಿದ ಕುಮಾರ ಗೌಡಪ್ಪ ಇವರನ್ನು ನಾವು ಸ್ಮರಿಸುವೆವು.

ಜನತಾ ಪ್ರಿಂಟರಿಯ ಒಡೆಯರು ಮತ್ತು ಸಿಬ್ಬಂದಿಯವರು ಬಹು ಆಸಕ್ತಿ ವಹಿಸಿ ಈ ಗ್ರಂಥವನ್ನು ಸುಂದರವಾಗಿ ಅಚ್ಚುಮಾಡಿದ್ದಾರೆ. ಅವರಿಗೆ ನಮ್ಮ ಕೃತಜ್ಞತೆಗಳು.

ಪ್ರಕಾಶಕರು

ದಾನಿಗಳ ಪರಿಚಯ

ಶರಣ ಸಂಸ್ಕೃತಿಯೇ ಮೈವೆತ್ತಂತಿರುವ

# ಶ್ರೀ ವೀರಭದ್ರಪ್ಪ ಶೆಟ್ಟಿ ಅವರು

ಸುಹೃದಯನಿಗೆ ಶ್ರೀಮಂತಿಕೆ ಶಿವನ ಕಾರುಣ್ಯವನ್ನು ಬರಿಸುತ್ತದೆ ಎಂಬ ಮಾತು ಜಾಲಹಳ್ಳಿಯ ಶ್ರೀ ವೀರಭದ್ರಪ್ಪ ಸೆಟ್ಟರನ್ನು ನೋಡಿದಾಗ ನೂರಕ್ಕೆ ನೂರು ಸತ್ಯವೆನಿಸುತ್ತದೆ. ಇವರ ಮನೆಯ ಲಕ್ಷ್ಮಿ ಚಂಚಲಳಲ್ಲ, ಕೆಡುಕಳಲ್ಲ, ಆಕೆ ವಿಶಾಲ ಹೃದಯಳು, ಅಂತಃಕರುಣಮಯಿ.

ತಂದೆ ಮತ್ತು ತಾಯಿ– ಎರಡೂ ಮನೆತನಗಳ ಶ್ರೀಮಂತಿಕೆ ಶ್ರೀ ವೀರಭದ್ರಪ್ಪನವರದು. ಇವೆರಡೂ ಮನೆತನಗಳು ಕಲ್ಯಾಣದ ಸಂಸ್ಕೃತಿಯನ್ನು ಉಸಿರಾಡಿಸುವಂಥವು; ವಿದ್ಯೆಗೆ, ವೀರಕ್ಕೆ, ದಾನಕ್ಕೆ, ದಾಸೋಹಕ್ಕೆ ಹೆಸರಾದ ಮನೆತನಗಳಿವು.

ವೀರಭದ್ರಪ್ಪನವರ ತಂದೆಯವರ (ಸೊಲಬಣ್ಣನವರ) ಮನೆತನದ ಕೀರ್ತಿ ಸುರಪುರ ನಾಡಿನಲ್ಲಿ ಮನೆಮನೆಗೂ ವ್ಯಾಪಿಸಿತ್ತು. ಸುರಪುರ ದೊರೆಗಳ ಆಸ್ಥಾನ ಶ್ರೇಷ್ಠಿಗಳು ಈ ಮನೆತನದವರು. ದೊರೆಗಳ ಆಸ್ಥಾನದಲ್ಲಿ ಈ ಶ್ರೇಷ್ಠಿಗಳಿಗೆ ಎಲ್ಲಿಲ್ಲದ ಗೌರವ. ಈ ಮನೆತನದವರು ವೀರತನಕ್ಕೆ ಹೆಸರಾದಂತೆ ಲಿಂಗಪೂಜೆಗೂ ಜಂಗಮ ನಿಷ್ಠೆಗೂ, ದಾಸೋಹಕ್ಕೂ ಹೆಸರಾದವರು; ಕೊಡುಗೈ ದೊರೆಗಳಾಗಿ ನಾಡಿನಲ್ಲಿ ಪ್ರಖ್ಯಾತಿ ಹೊಂದಿದವರು.

ವೀರಭದ್ರಪ್ಪ ಸೆಟ್ಟರ ತಾಯಿ ಜಾಲಹಳ್ಳಿಯವರು. ಅವರ ಹೆಸರು ಅಮರಮ್ಮ. ಅಮರಮ್ಮನ ತಂದೆ ಮಹಾದೇವಪ್ಪ ವಿನಯಶೀಲ, ಜಂಗಮ ಪ್ರೇಮಿ, ಲಿಂಗಪೂಜಾನಿಷ್ಠ, ಕಲಾವಿದರ ಪೋಷಕ. ಮಹಾದೇವಪ್ಪನ ಮನೆತನಕ್ಕೆ "ಹೊನ್ನಸೂರಿದವರು" ಎಂದು ಹೆಸರು. ನಿಜಕ್ಕೂ ಅವರು ಒಳ್ಳೆಯ ಕೆಲಸಕ್ಕೆ ಹೊನ್ನನ್ನು ಸೂರೆಮಾಡಿದವರೇ. ಮಹಾದೇವಪ್ಪನವರಿಗೆ ಅಮರಮ್ಮ ಏಕಮಾತ್ರ ಪುತ್ರಿ; ಆಕೆಯನ್ನು ಸುರಪುರದ ಆಸ್ಥಾನಶ್ರೇಷ್ಠ ಸೊಲಬಣ್ಣನಿಗೆ ಕೊಟ್ಟು ಮದುವೆ ಮಾಡಿ, ಮಹಾದೇವಪ್ಪ ತನ್ನ ಎಲ್ಲ ಆಸ್ತಿಯನ್ನು ಮಗಳಿಗೆ ಬಕ್ಷೀಸು ಕೊಟ್ಟ. ಸೊಲಬಣ್ಣ–ಅಮರಮ್ಮನವರ ಮಗನೇ ವೀರಭದ್ರಪ್ಪ ಶೆಟ್ಟಿ.

ಸುರಪುರದ ಶೆಟ್ಟರ ಮನೆತನದ ಶ್ರೀಮಂತನ ಮತ್ತು ಜಾಲಹಳ್ಳಿಯ ಹೊನ್ನಸೂರಿದವರ ಮನೆತನದ ದಾನಗುಣ– ಎರಡರ ಸಂಗಮವಾಗಿ ಶ್ರೀ ವೀರ ಭದ್ರಪ್ಪ ಬೆಳೆದರು. ಅವರು ಕರ್ನಾಟಕ ವಿಶ್ವವಿದ್ಯಾಲಯದ ಪದವೀಧರರು.

ಶ್ರೀ ವೀರಭದ್ರಪ್ಪನವರು ವಿನಯಶ್ರೀಯುಳ್ಳವರು. 'ಕೊಡುವುದನ್ನೇ ಕೊಡು' ಎಂದು ಪಡೆದು ಬಂದವರು. ಕೊಟ್ಟು ಮರೆತವರು. ಜಂಗಮ ದಾಸೋಹಕ್ಕೆ, ಮಠಮಾನ್ಯಗಳಿಗೆ, ಧರ್ಮಛತ್ರಗಳಿಗೆ, ಶಾಲೆ ಪ್ರಸಾದನಿಲಯಗಳಿಗೆ ವೀರ ಭದ್ರಪ್ಪನವರ ಕೊಡುಗೆ ಅಪಾರ. ಈ ಭಾಗದಲ್ಲಿ ಅನಾವೃಷ್ಟಿ ತಲೆದೋರಿದಾಗ ತಮ್ಮ ದವಸ ಧಾನ್ಯಗಳ ಕಣಜವನ್ನೇ ಬಡಜನರಿಗಾಗಿ ತೆರೆದಿಟ್ಟರು. ಆರ್ಥಿಕ ಮುಗ್ಗಟ್ಟಿನಿಂದ ಬಳಲುವ ಅನೇಕ ವಿದ್ಯಾರ್ಥಿಗಳಿಗೆ ಇವರು ನೆರವಿತ್ತು ಅವರ ಮುಂದಿನ ಓದಿಗೆ ದಾರಿ ಮಾಡಿಕೊಟ್ಟಿದ್ದಾರೆ.

ಶ್ರೀಮಂತಿಕೆಯ ಆಡಂಬರವಿಲ್ಲ; ಸಾದಾ ಉಡುಗೆ ತೊಡುಗೆ. ನೇರವಾದ ಸರಳ ನಡೆ, ಸೌಜನ್ಯ ತುಂಬಿದ ನುಡಿ. ಶ್ರೀಮಂತಿಕೆಯ ಒಡಲಲ್ಲಿದ್ದು 'ಆಸೆ' ಯ ನಂಜಿಗೆ ಬಲಿಯಾಗದ ಹಿರಿಯ ಜೀವ. ಗಳಿಸಿದ್ದೆಲ್ಲ ಶಿವನಿಗೆ, ಒಳ್ಳೆಯ ಕಾರ್ಯಕ್ಕೆ ಸಲ್ಲಲಿ ಎಂಬುದೇ ಇವರ ಜೀವಿತದ ಬಯಕೆ.

ಭಕ್ತಿ–ಜ್ಞಾನ–ಕಾಯಕ ತತ್ವಗಳ ತಿರುಳರಿತು, ದಾಸೋಹಂಭಾವನೆಯಿಂದ ಕೂಡಿ, ಸರಸ ಸ್ನೇಹ ಸಜ್ಜನಿಕೆಗಳ ತವರಾಗಿ, ತ್ಯಾಗದುಸಿರಾಗಿರುವ ಶ್ರೀ ವೀರ ಭದ್ರಪ್ಪ ಸೆಟ್ಟರು ಶರಣ ಸಂಸ್ಕೃತಿಯ ಸುಳಿವ ಶಾಸನವೆನಿಸಿದ್ದಾರೆ.

# ಸಂಪಾದಕನ ಮಾತು

## ಗ್ರಂಥ ಸಂಸ್ಕರಣ

ಜ– ಇದು ಕಾಗದದ ಪ್ರತಿ. ಜಾಲಹಳ್ಳಿಯಲ್ಲಿ ಕವಿಯ ಮನೆಯಲ್ಲಿ ದೊರಕಿದುದು. ಇದನ್ನು ಶಾ. ಶ. ೧೮೦೩ ರಲ್ಲಿ ಪ್ರತಿಮಾಡಲಾಗಿದೆ. ಈ ಪ್ರತಿಯ ಮುಕ್ತಾಯದಲ್ಲಿ ಹೀಗೆ ಬರೆದಿದೆ : ನೃಪಶಾಲಿವಾಹನ ಶಕ ವರುಷ ೧೮೦೩ ವಿಷುನಾಮ ಸಂ॥ ಉತ್ತರಾಯಣ ಶಿಶಿರ ರುತೌ ಫಾಲ್ಗುಣ ಮಾಸೆ ಶುಕ್ಲಪಕ್ಷೆ ತೃತೀಯ ತಿಥೌ ಇಂದುವಾಸರೆ ಉತ್ತರಾಭಾದ್ರನಕ್ಷತ್ರ ಸಾಧ್ಯನಾಮಯೋಗೆ ಗರಜಿವಾಕರಣೆ ಯೇತದ್ದಿವಸೆ ಹಗಲು ಒಂಭತ್ತು ತಾಸು ಕರ್ಕಾಟಕಲಗ್ನದಲ್ಲಿ ಪುರಾತನರ ಪೌರಾಣ ಲೇಖನ ಸಮಾಪ್ತ ಮಂಗಳ ಮಹಾ

ಹ – ಇದು ಕಾಗದದ ಪ್ರತಿ. ರಾಯಚೂರು ಜಿಲ್ಲೆ ಮಾನ್ವಿ ತಾಲೂಕಿನ ಹರ್ವಿಯಲ್ಲಿ ದೊರಕಿದುದು. ಇದನ್ನು ಶಾ. ಶ. ೧೮೨೪ ರಲ್ಲಿ ಪ್ರತಿಮಾಡಲಾಗಿದೆ. ಈ ಪ್ರತಿಯ ಮುಕ್ತಾಯದಲ್ಲಿ ಹೀಗೆ ಬರೆದಿದೆ : ಸ್ವಸ್ತಿ ಶ್ರೀ ವಿಜಯಾಭ್ಯುದಯ ನೃಪ ಶಾಲಿವಾಹನ ಶಕ ೧೮೨೪ ನೆಯ ಶುಭಕೃತು ಸಂ॥ರದ ಮಾರ್ಗಶೀರ್ಷ ಕೃಷ್ಣಪಕ್ಷ ಚೌತಿ ಗುರುವಾಸರೆ ಅರುವತ್ತು ಮೂವರು ಪುರಾತನ ಪುರಾಣ ಪರಿಸಮಾಪ್ತ ಮಾಚನೂರು ಕೊತ್ವಾಲ ಪಾಟೀಲ ಪರನಗೌಡನ ಪುದರ ಸಂಜಾತ ಕೆರೆಬಸಪ್ಪನು ತನ್ನ ಭಕ್ತಿಯಿಂದ ಹರ್ವಿ ಸಾಲಿ ರೇವಪ್ಪನವರಿಗೆ ಬರೆದು ಕೊಟ್ಟುಯಿದ್ದೇನೆ. ಇದರಲ್ಲಿ ಹಸ್ತ ದೋಷವು ಯೇನಿಕೆಯಿದ್ದರಾಯಿತೆ ಪುತ್ರಸಮಾನವೆಂದರಿದು ತಿದ್ದಿ ಕೊಂಡು ವೋದಬೇಕೆಂಬೊ ಭಕ್ತಮಾಹೇಶ್ವರರಿಗೆ ಪ್ರಾರ್ಥನ ಮಾಡುತ್ತೇನೆ ಸಕಲಭಕ್ತ ಮಾಹೇಶ್ವರರ ಪಾದಕ್ಕೆ ದೀರ್ಘದಂಡವತು

ಹು – ಇದು ಎಕ್ಸರ್ ಸೈಜ್ ಕಾಪಿಯಲ್ಲಿ ಬರೆದ ಪ್ರತಿ. ಶ್ರೀ ಶಂಕರ ಶಿವಾಚಾರ್ಯ ಮಹಾಸ್ವಾಮಿಗಳವರು ವೀರಭಿಕ್ಷಾವೃತ್ತಿಮಠ ಹುಬ್ಬಳ್ಳಿ ಇವರಿಂದ ದೊರಕಿದುದು. ಪ್ರತಿಮಾಡಿ ಏಳೆಂಟು ವರ್ಷಗಳಾಗಿರಬೇಕು

ಸದರಿ ಮೂರು ಪ್ರತಿಗಳಲ್ಲಿ ಹುಬ್ಬಳ್ಳಿಯ ಪ್ರತಿ ತೀರ ಅಶುದ್ಧವಾಗಿದೆ. ಆದುದರಿಂದ ಅದರಿಂದ ಹೆಚ್ಚಿನ ಉಪಯೋಗವಾಗಲಿಲ್ಲ. ಇದನ್ನು ಪಾಠಾಂತರಕ್ಕಾಗಿ ಬಳಸಿಕೊಳ್ಳಲಿಲ್ಲ.



ಅರವತ್ತು ಮೂವರು ಪುರಾತನರ ಚಿತ್ರಗಳಿರುವ ಪಾವುಡ

ಜಾಲಹಳ್ಳಿಯ ಪ್ರತಿ ಶುದ್ಧವಾಗಿದೆ; ಕವಿಯ ಹಸ್ತ ಪ್ರತಿಗೆ ತೀರ ಹತ್ತಿರವಾಗಿದೆ. ಇದರಂತೆ ಹರ್ಷಿಯ ಪ್ರತಿಯೂ ಶುದ್ಧವಾಗಿದೆ. ಜಾಲಹಳ್ಳಿಯ ಪ್ರತಿಯಿಂದಲೇ ಹರ್ಷಿಯ ಪ್ರತಿ ಹುಟ್ಟಿ ಬಂದಿವೆ ಎನಿಸುತ್ತದೆ; ಅವೆರಡರಲ್ಲಿ ಹೆಚ್ಚಿನ ವ್ಯತ್ಯಾಸವಿಲ್ಲ. ಜಾಲಹಳ್ಳಿ ಮತ್ತು ಹರ್ಷಿ ಎರಡು ಪ್ರತಿಗಳಿಂದ ಶುದ್ಧ ಪಾಠಗಳನ್ನು ಕಂಡುಕೊಳ್ಳಲು ಯತ್ನಿಸಲಾಗಿದೆ.

## ಅರುವತ್ತುಮೂವರು ಪುರಾತನರ ಚಿತ್ರದ ಪಾವುಡ

ಜಾಲಹಳ್ಳಿಯಲ್ಲಿ ಕವಿಯ ಮನೆಯ ಜಗುಲಿಯ ಮೇಲೆ ಇದ್ದ ಪುರಾಣದ ಗಂಟಿನಲ್ಲಿ ಸುಮಾರು ಮೂರು ಅಡಿ ಚೌಕಾಕಾರದ ಒಂದು ಪಾವುಡ ದೊರಕಿತು. ಅದರಲ್ಲಿ ಪುರಾತನರ ಚಿತ್ರಗಳಿವೆ.

ನಾನು ಮೊದಲಸಲ ಹೋಗಿ ನೋಡಿದಾಗ ಆ ಪಾವುಡ ಜೀರ್ಣವಾವಾದರೂ ಇನ್ನೂ ಚೆನ್ನಾಗಿತ್ತು. ಅದರ ಫೋಟೋ ತೆಗೆಸುವೆ, ಕೊಡಿರಿ ಎಂದು ಕೇಳಿದರೆ ಮನೆಯವರು ಕೊಡಲಿಲ್ಲ. ನಾಲ್ಕು ವರ್ಷಗಳ ಬಳಿಕ ಮತ್ತೊಮ್ಮೆ ಹೋಗಿ ನೋಡಿದಾಗ ಆ ಪಾವುಡ ತೀರ ಜೀರ್ಣವಾಗಿತ್ತು; ಮೈತುಂಬ ತೂತುಗಳಾಗಿದ್ದುವು; ಹರಿದು ಮುದ್ದೆಯಾಗಿತ್ತು; ಅದನ್ನು ನೋಡಿ ಜೀವ ಚುರ್ರೆಂದಿತು. ಬಹು ಪ್ರಯಾಸಪಟ್ಟು ಶ್ರೀ ವೀರಭದ್ರಪ್ಪ ಸೆಟ್ಟರು ಅದರ ಫೋಟೋ ತೆಗೆಸಿದರು; ಅದರ ಬಹು ಸ್ವಲ್ಪ ಭಾಗ (ಉಳಿದಷ್ಟೇ) ಫೋಟೋದಲ್ಲಿ ಬಂದಿತು. ಅದನ್ನು ಬ್ಲಾಕ್ ಮಾಡಿಸಿ ಇಲ್ಲಿ ಅಚ್ಚು ಮಾಡಲಾಗಿದೆ.

ಸುಮಾರು ಮೂರು ಅಡಿ ಚೌಕಾಕಾರದ ಪಾವುಡದಲ್ಲಿ ಬಹು ಸುಂದರವಾಗಿ ಬಣ್ಣಗಳಲ್ಲಿ ಚಿತ್ರಗಳನ್ನು ಬಿಡಿಸಲಾಗಿದೆ. ಮಧ್ಯದಲ್ಲಿ ನಂದಿ ಆರೂಢರಾದ ಪಾರ್ವತಿ ಪರಮೇಶ್ವರರು. ಸುತ್ತು ಸಣ್ಣ ಚೌಕ. ಅದರ ನಾಲ್ಕೂ ಕೋನಗಳಲ್ಲಿ ಹೂಗಳು. ಚೌಕದ ನಾಲ್ಕೂ ಕಡೆಗೆ ಮೂರು ಸಾಲುಗಳಲ್ಲಿ ಎರಡೆರಡು ನಂದಿ ಈಶ್ವರರು. ಕೊನೆಯ ಸಾಲುಗಳಲ್ಲಿ ಸುತ್ತು ಚೌಕಾಕಾರದಲ್ಲಿ ಅರುವತ್ತು ಮೂರು ಪುರಾತನರ ಚಿತ್ರಗಳು. ಪಾವುಡದ ಕೊನೆಯ ನಾಲ್ಕೂ ಮೂಲೆಗಳಲ್ಲಿ— ಪಂಚಲಿಂಗ ಐದು ಸರ್ಪದ ಹೆಡೆ, ಪಂಚಲಿಂಗ ಭ್ರಮರ, ಪಂಚಲಿಂಗ ಒಬ್ಬ ದೊರೆ, ಪಂಚಲಿಂಗ ಆನೆ – ಹೀಗೆ ಚಿತ್ರಗಳಿವೆ.

ಅರುವತ್ತು ಮೂವರು ಪುರಾತನರ ಚಿತ್ರಗಳಿಗೆ ಹೆಸರು ಬರೆದು ಕ್ರಮಸಂಖ್ಯೆ ಹಾಕಲಾಗಿದೆ. ಓದಲು ಬಂದ ಕೆಲವು ಹೆಸರುಗಳನ್ನು ಕ್ರಮ ಸಂಖ್ಯೆಯೊಂದಿಗೆ ಇಲ್ಲಿ ಕೊಟ್ಟಿದೆ.

| | | | |
|---|---|---|---|
| ಕಲಿಕಾಮ | ೧೭ | ಕಾರಿಕಾಲಮ್ಮೆ | |
| ಅಮರ ನೀತಿ | ೧೮ | ನಮಿತಾಂಡಿಯರು | ೪೨ |
| ಅರಿವಾಳ್ತಾಂಡ | ೧೯ | ಕಲಿ ಕಂಬರು | ೪೩ |
| ಮುರುಘರು | ೨೦ | ಕಡವಳ ನಂಬಿ | ೪೪ |
| ನಮಿನಂದಿ ಗಣನಾಥ | ೨೧ | ಏಣಾಧಿನಾಥರು | ೪೫ |
| ಸಾಂಖ್ಯತೊಂಡರು | ೨೨ | ಕಳಚೆಂಗ ಮೂರ್ತಿಗಳು | ೫೦ |
| ರುದ್ರಪಶುಪತಿ | ೨೩ | ಪೆರುಮಳೆ ಕುಸುಮರು | |
| ನಂಬಿಯಣ್ಣ | ೨೬ | ಕಲಿನಾಯನಾರು | ೫೫ |
| ಸೇದಿ ರಾಜಯ್ಯ | ೨೮ | ನಿಡುಮಾರಿದೇವರು | |

ಈ ಪಾವುಡ ಉತ್ತಮಸ್ಥಿತಿಯಲ್ಲಿ ದೊರಕಿದ್ದರೆ ಪುರಾತನರ ಎಲ್ಲ ಹೆಸರುಗಳು ದೊರಕುತ್ತಿದ್ದುವು; ಆ ಹೆಸರುಗಳೊಡನೆ ಕವಿಯು ಕಾವ್ಯದಲ್ಲಿ ಬಂದ ಹೆಸರುಗಳನ್ನು ಹೋಲಿಸಿ ನೋಡಬಹುದಿತ್ತು. ಅಲ್ಲದೆ ಒಂದುಕಾಲದ ಚಿತ್ರಕಲೆಯ, ಸಂಸ್ಕೃತಿಯ, ಕಲಾಭಿರುಚಿಯ ಇತಿಹಾಸ ಅದರಿಂದ ಗುರುತಿಸಬಹುದಾಗಿತ್ತು.

## ನಮನ

ಜಾಲಹಳ್ಳಿಯ ಶಾಲಾ ಮಠದಲ್ಲಿಯ ಅರುವತ್ತು ಮೂವರು ಪುರಾತನರ ಪುರಾಣದ ಹಸ್ತಪ್ರತಿ ದೊರಕಿಸಿಕೊಟ್ಟು ಮತ್ತು ಈ ಪುರಾಣದ ಪ್ರಕಟನೆಯ ಎಲ್ಲ ವೆಚ್ಚವನ್ನು ವಹಿಸಿಕೊಂಡು ಶ್ರೀ ವೀರಭದ್ರಪ್ಪ ಸೆಟ್ಟರು ಮಾಡಿದ ಉಪಕಾರ ಬಹು ದೊಡ್ಡದು; ನುಡಿಗೆ ನಿಲುಕದ್ದು. ಅವರನ್ನು ನಿರ್ಮಲಾಂತಃಕರಣದಿಂದ ಸ್ಮರಿಸುವೆ.

ಪುರಾಣದ ಹಸ್ತಪ್ರತಿಯನ್ನೂ ಅರುವತ್ತು ಮೂವರು ಪುರಾತನರ ಚಿತ್ರ ವಿರುವ ಪಾವುಡವನ್ನೂ ಇತ್ತು ನೆರವಿತ್ತವರು ವೀರಭದ್ರ ಕವಿಯ ಮರಿ ಮೊಮ್ಮಕ್ಕಳು –ಶ್ರೀಯುತರಾದ ನಾಗಲಿಂಗಯ್ಯ ಮತ್ತು ಚೆನ್ನವೀರಯ್ಯ. ಅವರಿಗೆ ನನ್ನ ನೆನಕೆಗಳು.

ಹರ್ಪಿ ಹಸ್ತಪ್ರತಿಯನ್ನು ದೊರಕಿಸಿಕೊಟ್ಟವರು ಹಿರಿಯರಾದ ಶ್ರೀ ಚೆನ್ನಬಸವ ಶಾಸ್ತ್ರಿಗಳು ಬೇಗವಾಟ ಅವರು. ಅವರಿಗೆ ನಾನು ಉಪಕೃತನು.

ಗ್ರಂಥ ಸಂಪಾದನ ಕಾರ್ಯದಲ್ಲಿ ಉಪಯುಕ್ತ ಸಲಹೆ ಸೂಚನೆಗಳನ್ನಿತ್ತು ಆಶೀರ್ವದಿಸಿದವರು ಶ್ರೀ ಶಂಕರಶಿವಾಚಾರ್ಯ ಮಹಾಸ್ವಾಮಿಗಳವರು ವೀರಭಿಕ್ಷಾ ವೃತ್ತಿ ಮಠ ಹುಬ್ಬಳ್ಳಿ ಅವರು. ಅವರಿಗೆ ಭಕ್ತಿಯಿಂದ ವಂದಿಸುವೆ.

ಕವಿಯ ಚರಿತ್ರೆಯನ್ನು ಅರಿಯುವಲ್ಲಿ ಸಹಾಯ ಮಾಡಿದವರು–ಶ್ರೀಯುತ ರಾದ ಜಾಲಹಳ್ಳಿಯ ಮಾಲೀಗೌಡರಾದ ಅಮರೇಗೌಡರು. ಇವರು ಜ್ಞಾನ ವೃದ್ಧರೂ ಕವಿಯ ಕಾವ್ಯವನ್ನು ವಿಶೇಷ ಅಭ್ಯಾಸ ಮಾಡಿದವರೂ ಆಗಿದ್ದಾರೆ. ಇವರಿಗೆ ನನ್ನ ನೆನಹುಗಳು.

ಸ್ನೇಹಿತರಾದ ಕಂಟೆಯ್ಯ ಚಿನ್ನಯ್ಯ ಸಾಲಿಮಠ ನಾಲತ್ತವಾಡ ಮತ್ತು ಶ್ರೀ ಎಸ್. ಆರ್. ಮುಂಡರಗಿ ಮಾಸ್ತರ ಹಮ್‌ದರ್ದ ಹೈಸ್ಕೂಲು ರಾಯಚೂರು ಇವರು ನನ್ನ ಕಾರ್ಯದಲ್ಲಿ ನೆರವಾಗಿದ್ದಾರೆ. ಅವರನ್ನು ಸ್ಮರಿಸದಿರಲಾರೆ.

ನನ್ನ ಆತ್ಮೀಯ ಸ್ನೇಹಿತರಾದ ಶ್ರೀ ಎಮ್. ಬಿ. ಪಾಟೀಲ ಹುಬ್ಬಳ್ಳಿ ಇವರು ನಾಡಿನ ಶ್ರೇಷ್ಠ ಚಿತ್ರಕಲಾವಿದರಲ್ಲಿ ಒಬ್ಬರು. ಅವರು ಸುಂದರವೂ ಅರ್ಥಪೂರ್ಣವೂ ಸಾಂಕೇತಿಕವೂ ಆದ ಮುಖಪುಟ ಚಿತ್ರವನ್ನು ಬರೆದುಕೊಟ್ಟು ಉಪಕರಿಸಿದ್ದಾರೆ. ಅವರನ್ನು ತುಂಬು ಹೃದಯದಿಂದ ನೆನೆವೆ.

ಈ ಗ್ರಂಥ ದೊರಕಿಸುವ ಕಾರ್ಯದಿಂದ ಹಿಡಿದು ಸಂಪಾದನ – ಪ್ರಕಾಶನ – ಆಗುವವರೆಗೆ ನನಗೆ ಹಲವು ವಿಧಗಳಿಂದ ನೆರವಿತ್ತವರು ಸರಸ ಸ್ನೇಹಜೀವಿಗಳಾದ ಶ್ರೀ ಚನ್ನಪ್ಪ ಉಪ್ಪಿನವರು. ಅವರನ್ನು ಪ್ರೀತಿಯಿಂದ ಸ್ಮರಿಸುವೆ.

ನಾನು ಏನೇ ಬರೆಯಲಿ, ಏನೇ ಸಂಪಾದಿಸಲಿ, ಆ ಕಾರ್ಯಕ್ಕೆ ಬೇಕಾಗುವ ಸಹಾಯವನ್ನು ಸದಾ ಒದಗಿಸುವವರು ಶ್ರೀಯುತರಾದ ಬೆಟ್ಟದೂರು ಚೆನ್ನಬಸವಪ್ಪ ವಕೀಲ, ಕಲಾವಿದ ಶಂಕರಗೌಡ ಬೆಟ್ಟದೂರು, ವೀರಣ್ಣಗೌಡ ನೀರಮಾನ್ವಿ ಮತ್ತು ಬಸವನಗೌಡ ಕರಡಗುಡ್ಡ ಇವರು. ಇವರನ್ನು ನೆನೆಯದೆ ಇರಲು ಹೇಗೆ ಸಾಧ್ಯ?

ಬಹು ಸುಂದರವಾಗಿ ಗ್ರಂಥವನ್ನು ಅಚ್ಚುಮಾಡಿಕೊಟ್ಟು ಮತ್ತು ಹಲವು ಪತ್ತು ವಿಧವಾಗಿ ನೆರವಿತ್ತ ಜನತಾ ಪ್ರಿಂಟರಿಯ ಒಡೆಯರಾದ ಶ್ರೀ ಪಿ. ಬಸಣ್ಣನವರಿಗೆ ನನ್ನ ಅಂತಃಕರಣದ ನೆನಕೆಗಳು.

— ಸಂಪಾದಕ

# ಪ್ರಸ್ತಾವನೆ

೧

ಅರುವತ್ತು ಮೂವರು ಪುರಾತನರ ಪುರಾಣವನ್ನು ಬರೆದ ಕವಿ ವೀರಭದ್ರ. ಈತನ ಊರು ಜಾಲಹಳ್ಳಿ. ಈ ಊರು ಈಗ ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನಲ್ಲಿದೆ.

ತನ್ನ ಹೆಸರು, ಊರ ಹೆಸರು, ತಂದೆಯ ಹೆಸರು ಮತ್ತು ಮನೆತನದ ಹೆಸರನ್ನು ಕವಿ ಪುರಾಣದಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ.

ಜಾಲಹಳ್ಳಿಗೆ ಕವಿ ಜಾಲೇಂದ್ರಪುರವೆಂದು ಕರೆದಿದ್ದಾನೆ. ೧ ಪಟ್ಟನ ಶಾಲಾ ಮಠಾಧ್ಯಕ್ಷರಾದ ಘನವೃಷಭಾರ್ಯ (ದೊಡ್ಡ ಬಸವಯ್ಯ) ಕವಿಯ ತಂದೆ. ೨

ಅರಿಯಲೀ ಸುಪ್ರಬಂಧಕ್ಕೆ ಪೆಸರಾವುದೆನ
ಲರವತ್ತು ಮುವ್ವರ್ಪ್ಪುರಾತನರ ಪೌರಾಣ
ಒರಿದಿದಕ್ಕಧಿಪರಾರೆನೆ ಪುರಾತನರಿದಕ್ಕಾಧಾರವಾವುದೆನಲೂ
ಹರಿದೇವನೊರೆದ ರಘಟಾಕಾರವಾಧಾರ
ಮುರುತರದ ಕಾವ್ಯಮಂ ಪೇಳ್ದಾತನಾರೆನ
ಲ್ವರ ವೀರಭದ್ರಾಖ್ಯನೀ ಕಥೆಗೆ ಮೊದಲಾವುದೆನೆ ಶರಧಿಯೊಪ್ಪಿರ್ದುದು ೩

ಮೇಲಿನ ಪದ್ಯದಿಂದ ಈ ಪುರಾಣ ಕರ್ತೃ ವೀರಭದ್ರನೆಂಬದು ಖಚಿತ ವಾಗುತ್ತದೆ.

ಇಂದಿಗೂ ಜಾಲಹಳ್ಳಿಯಲ್ಲಿ ಸಾಲಿಮಠ (ಶಾಲಾಮಠ) ಇದೆ; ಕವಿಯ ವಂಶಜರಿದ್ದಾರೆ; ಅವರು ಕವಿ ಹುಟ್ಟಿ ಬಾಳಿದ ಮನೆಯಲ್ಲಿಯೇ ಇದ್ದಾರೆ. ಕವಿ ಕುಳಿತು ಲಿಂಗಪೂಜೆ ಮಾಡಿದ, ಕಾವ್ಯ ಬರೆದ 'ದೇವರ ಮನೆ' ಎಂಬ ಕೋಣೆ ಆ ಮನೆಯಲ್ಲಿ ಇಂದಿಗೂ ಇದೆ. ಆದರೆ ಅದು ತೀರ ಜೀರ್ಣವಾಗಿ ಬೀಳುವಸ್ಥಿತಿ ಯಲ್ಲಿದೆ. ಇದೇ ದೇವರ ಮನೆಯ ಜಗುಲಿಯಲ್ಲಿ ಶಾ.ಶ. ೧೮೦೩ (ಕ್ರಿ.ಶ.೧೮೮೧)

---

೧ ಅರವತ್ತುಮೂವರು ಪುರಾತನರ ಪುರಾಣ ಸಂಧಿ ೧ ಪದ್ಯ ೧೦
೨ ಅದೇ ಸಂಧಿ ೧ ಪದ್ಯ ೧೧, ೧೨
೩ ಅದೇ ಸಂಧಿ ೧ ಪದ್ಯ ೧೭



ಕವಿಯ ಸಮಾಧಿ

ಆಚೆ ಈಚೆ ಕುಳಿತವರು ಕವಿಯ ಮರಿಮೊಮ್ಮಕ್ಕಳು

ಶ್ರೀ ನಾಗಲಿಂಗಯ್ಯ ಮತ್ತು ಶ್ರೀ ಚೆನ್ನವೀರಯ್ಯ

ರಲ್ಲಿ ಪ್ರತಿ ಮಾಡಿದ ಕವಿಯ ಅರುವತ್ತುಮೂವರು ಪುರಾತನರ ಪುರಾಣ ದೊರಕಿತು. ಈ ಪುರಾಣವಿದ್ದ ಬಟ್ಟೆಯ ಗಂಟಿನಲ್ಲಿಯೇ ಅರುವತ್ತುಮೂವರು ಪುರಾತನರ ಚಿತ್ರಗಳಿದ್ದ ಒಂದು ಚೌಕಾಕಾರದ ಬಟ್ಟೆ, ಬಸವಪುರಾಣದ ಹಸ್ತಪ್ರತಿ (ಕಾಗದಪ್ರತಿ), ಲಿಂಗಚಿದಮೃತ ಬೋಧೆಯ ಹಸ್ತಪ್ರತಿ (ಅಪೂರ್ಣ ಕಾಗದದ ಪ್ರತಿ) ಮತ್ತು ನಿಜಲಿಂಗಶತಕದ ಹಸ್ತಪ್ರತಿಗಳಿದ್ದುವು

ಕವಿಯ ಮತ್ತು ಕವಿಯ ತಂದೆಯ ಸಮಾಧಿಗಳು ಊರಿಗೆ ತುಸುದೂರದಲ್ಲಿರುವ ಮಳಿಮಂಠದಲ್ಲಿವೆ.

ಕವಿಯ ತಂದೆಯಿಂದ ಈ ವರೆಗಿನ ವಂಶಾವಳಿ ದೊರಕುತ್ತದೆ :




ವೀರಭದ್ರ ಕವಿಯ ಮರಿಮೊಮ್ಮಕ್ಕಳಾದ ಅಯ್ಯಮ್ಮ, ನಾಗಲಿಂಗಯ್ಯ ಮತ್ತು ಚೆನ್ನವೀರಯ್ಯ ಈಗ ಜಾಲಹಳ್ಳಿಯಲ್ಲಿದ್ದಾರೆ; ಕವಿ ಜೀವಿಸಿದ ಮನೆಯಲ್ಲಿಯೇ ಇದ್ದಾರೆ.

ಜಾಲಹಳ್ಳಿಯ ರಂಗಪ್ಪನಾಯಕ ಹೆಸರಾದ ನಾಯಕ ದೊರೆ, ಶೂರ, ವಿದ್ಯಾಪ್ರೇಮಿ, ಕವಿಕಲಾವಿದರಿಗೆ ಆಶ್ರಯದಾತ. ಕವಿಯ ತಂದೆ ದೊಡ್ಡಬಸವಯ್ಯ ಈ ರಂಗಪ್ಪನಾಯಕನ ವಿದ್ಯಾಗುರುವಾಗಿದ್ದ. ತಂದೆಯನ್ನು ಕುರಿತು ಕವಿ, "ಪಠನ ಶಾಲಾಮಠಾಧ್ಯಕ್ಷರು, ಪುಣ್ಯಪುಂಜರು, ಮಹಾದಯಾಪೂರ್ಣರು, ಶ್ರೀ ಪರಮಲಿಂಗ

ನಿಷ್ಕಾಪರರ್ಶಾನಿತರ್ಶ್ರಿಹಿತ ವೇದಾಂತ ಪೂಜ್ಯರು, ಪಾಪಕಾರ್ಯಧ್ವಂಸರು, ಅಮಿತ ಸುಜನಸ್ತುತ್ಯರು, ಆಪದವಿವರ್ಜಿತರು, ರಾಜಯೋಗಾನಂದ ವ್ಯಾಪಕರು ೧ ...." ಎಂದು ಹೊಗಳಿದ್ದಾನೆ.

ತಂದೆಯಂತೆ ವೀರಭದ್ರಕವಿ ಜಾಣ, ಪಂಡಿತ. ಆತನ ಮನೆತನದ ವೃತ್ತಿ ಓದು ಹೇಳುವುದು (ಶಿಕ್ಷಕ ವೃತ್ತಿ). ಪಠನ ಶಾಲಾಮಠ, ಸಾಲಿಮಠ ಎಂದು ಅವರ ಮನೆಗೆ ಹೆಸರು ಬಂದುದು ಈ ಕಾರಣದಿಂದಲೇ. ೨ ಕವಿ ಮನೆತನದ ವೃತ್ತಿಯನ್ನು ಮುಂದುವರಿಸಿದ.

ವೀರಭದ್ರ ಕವಿ ಯೋಗಾಭ್ಯಾಸ ಮಾಡಿದ್ದ. ಆತ ಅನೇಕ ವಿದ್ಯೆಗಳನ್ನು ಬಲ್ಲವನಾಗಿದ್ದ. ಕತ್ತಲೆಯಲ್ಲಿ ಓದುವ ಶಕ್ತಿ ಆತನಿಗಿತ್ತೆಂದು ತಿಳಿದುಬರುತ್ತದೆ. 'ಸುವಿವೇಕ ಸುಖಿ, ಸಾಧು ಕಿಂಕರ, ನವವಿಧ ಕರ್ಣಾಟ ಕವಿತಾ ಚತುರ' ಎಂದು ಕವಿ ತನ್ನನ್ನು ಕರೆದುಕೊಂಡದ್ದು ಒಣ ಹೆಮ್ಮೆಗಾಗಿ ಏನೂ ಅಲ್ಲ.

ವೀರಭದ್ರ ಕವಿಯ ಮಗ ನಾಗಲಿಂಗಯ್ಯ; ತಂದೆಯಂತೆ ಉಪಾಧ್ಯಾಯ, ಜ್ಞಾನಿ, ಪಂಡಿತ. ಆದರೆ ಕವಿಯಾಗಿರಲಿಲ್ಲ. ತಂದೆ ಮಾಡಿದ ಯೋಗಾಭ್ಯಾಸ ತಾನೂ ಮಾಡಿದ. ತಾನೂ ಕತ್ತಲೆಯಲ್ಲಿ ಓದುವ ಶಕ್ತಿ ಪಡೆಯಬೇಕೆಂದು ಹಂಬಲಿಸಿದ; ಆ ನಿಟ್ಟಿನಲ್ಲಿ ಸಾಧನೆಗೆ ತೊಡಗಿದ. ಸಾಧನೆಯಲ್ಲಿ ಏನೋ ತಪ್ಪಾಯಿತು; ಬುದ್ಧಿ ಭ್ರಮೆಯಾಯಿತು. ಧಾನ್ಯಕ್ಕೆ (ಭಿಕ್ಷಕ್ಕೆ) ಮನೆ ಮನೆಗೆ ಹೋದಾಗ "ಲಿಖಿನಿ ಲಿಖಿನಿ ಹೈ" ಎಂದು ಹೇಳುತ್ತಿದ್ದ. ಬರಬರುತ್ತ ತನ್ನೊಳಗೆ ತಾನಾದ; ಹೊರಗಿನ ಪ್ರಜ್ಞೆ ಇಲ್ಲದಾಯಿತು. ಲಿಂಗದೊಳಗಾಗುವಾಗ ತನ್ನ ಇಷ್ಟಲಿಂಗವನ್ನು ದವಡೆಯಲ್ಲಿ ಇಟ್ಟುಕೊಂಡಿದ್ದನಂತೆ.

ಈತನ ತರುವಾಯ ಪಠನ ಶಾಲಾ ಮಠದ ಪಾಂಡಿತ್ಯ ಬತ್ತಿಹೋಯಿತು.

## ೨

ಕವಿಯು ತಾನು ಜೀವಿಸಿದ ಕಾಲವನ್ನಾಗಲೀ ಅಥವಾ ತಾನು ಪುರಾಣ ಬರೆದು ಮುಗಿಸಿದ ಕಾಲವನ್ನಾಗಲೀ ಕಾವ್ಯದಲ್ಲಿ ಹೇಳಿಕೊಂಡಿಲ್ಲ. ಆದರೆ ಆತನ ಕಾಲ ನಿರ್ಣಯಕ್ಕೆ ಅಂತರ ಮತ್ತು ಬಾಹ್ಯ ಎರಡು ಪ್ರಬಲ ಪ್ರಮಾಣಗಳು ದೊರಕುತ್ತವೆ.

---

೧ ಆದೇ ಸಂಧಿ ೧ ಪದ್ಯ ೧೧

೨ ಕವಿಯ ಮೊಮ್ಮಕ್ಕಳ ಕಾಲಕ್ಕೆ ಮಠದ ಈ ವೃತ್ತಿ ನಿಂತುಹೋಯಿತೆಂದು ತಿಳಿದುಬರುತ್ತದೆ.

ತಾನು ಪುರಾಣ ಬರೆಯಲು ಮೂಲಕಾರಣವೇನು ಎಂಬುದನ್ನು ಕವಿ ಹೀಗೆ ಹೇಳಿಕೊಂಡಿದ್ದಾನೆ :

ನಾಗಭೂಷಣನೆಂಬ ಶಿವಯೋಗಿ ಸಂಚರಿಸು
ತಾಗಳುಂ ಬಂದು ಎಲೆ ವೀರಭದ್ರಾಖ್ಯ ಕೇ
ಳೀಗಳರುವತ್ತು ಮುವ್ವರ್ಪುರಾತನರ ಚರಿತೆಯು ವರ್ಣಕದೊಳಿಲ್ಲವು
ರಾಗದಿಂದೀ ಪ್ರಬಂಧವನು ಕೇಳ್ವರ್ಗೆ ಸೊಗ
ಸಾಗುವಂತತಿ ಮನೋಹರವಪ್ಪ ತೆರದಿ ನೀಂ
ಬೇಗನೆಸಗಲ್ಕಿನ್ನು ಸಂಕೃತಕೆಣೆಯಿಲ್ಲ ಮಗನೇ ರಚಿಯಿಸೈ ಎನಲ್ಕೇ ೧

ಪ್ರಾಜ್ಞ ಸನ್ನಾಗಭೂಷಣ ಮಹಾಯೋಗೀಂದ್ರ
ನಾಜ್ಞಾ ಪ್ರಸಾದದಿಂದಂ ಹರಿಹರಾಚಾರ್ಯ
ಸುಜ್ಞಾನದಿಂದೊರೆದ ರಘಟಾ ಪ್ರಬಂಧದ ಸುವಾಕ್ಯಪ್ರಸಾದದಿಂದಂ
ಅಜ್ಞಾರಹಿತ ಕೃತಿಪರ್ಪುರಾತಸರಿತ್ತ
ವಿಘ್ನ ಕಾರುಣ್ಯ ಪ್ರಸಾದದಿಂದ್ಯೆದೆ ಭಾ
ವಜ್ಞರುಂ ತಲೆದೂಗುವಂತೆ ರಚಿಯಿಸಿದಂ ಪುರಾತನರ ಪೌರಾಣವಂ ೨

ನಾಗಭೂಷಣ ಘನಮಠ ಶಿವಯೋಗಿಗಳು, "ಅರವತ್ತು ಮೂವರು ಪುರಾತನರ ಪುರಾಣ ವರ್ಣಕದೊಳಿಲ್ಲ, ನೀನು ಬರೆ" ಎಂದುದಕ್ಕೆ ತಾನು ಬರೆದುದಾಗಿ ಕವಿ ಸ್ಪಷ್ಟವಾಗಿ ಹೇಳಿದ್ದಾನೆ. ಇದೇ ವಿಷಯ ಮುಸ್ಕಿಯ ಬಸವಪ್ಪ ಶಾಸ್ತ್ರಿಗಳು ಬರೆದ ಘನಮಠದ ಶಿವಯೋಗಿಗಳ ಪುರಾಣದಲ್ಲಿ ಹೀಗೆ ಉಕ್ತವಾಗಿದೆ.

ಘನಮಠ ಶಿವಯೋಗಿಗಳು ಸಂಚರಿಸುತ್ತ ಜಾಲಹಳ್ಳಿಗೆ ಬಂದರು; ಅಲ್ಲಿ ಮಠವೊಂದರಲ್ಲಿ ಇಳಿದುಕೊಂಡರು. ಅನೇಕ ಜನ ಅವರ ದರ್ಶನಕ್ಕೆ ಬಂದರು. ಭಾಸುರಮಠದ ವೀರಭದ್ರ ಶಾಸ್ತ್ರಿಯು ಅವರ ದರ್ಶನ ಪಡೆದು "ತನಗೆ ಬಹು ಕಾಲದಿಂದಳವಟ್ಟ ರೋಗವೊಂದನು ಮತ್ತದರ ಸಂಕಟವ ಬಿಡದೆ ಬಿನ್ನವಿಸಿ, ತನುವನು ನಿರೋಗವೆಂದೆನಿಸಿ ಮನಕಾನಂದವನು ಕೊಡುವುದು" ಎಂದೆರಗಿದ. ಅದಕ್ಕೆ ಘನಮಠರು,

ಆದೊಡಿದಕೊಂದುಪಾಯುವನು ಪೇಳುವೆನು ನೀ
ನಾದರದೊಳಾಲಿಸೈ ಕಾಲಹರ ಕರ್ಮಹರ
ನಾದ ಮಾದೇವನಂ ತದ್ಭಕ್ತರಂ ಬಿಡದಲಾವರೀತಿಯೊಳಾದರು
ಈ ಧರೆಯೊಳರಿದು ಸೇವಿಪರಿಂಗೆ ಸಕಲ ರೋ
ಗಾದಿಗಳು ತೊಲಗಿ ಭೋಗಗಳೊದಗಿ ಮುಕ್ತಿಯುದು
ಸಾಧಿಸುವದದರಿಂದ ಹರಪುರಾತನ ಪುರಾಣವ ರಚಿಸು ನೀನೆಂದನು ೩

---

೧ ಅರವತ್ತುಮೂವರು ಪುರಾತನರ ಪುರಾಣ ಸಂಧಿ ೧ ಪದ್ಯ ೧೩

೨ ಅದೇ ಸಂಧಿ ೧ ಪದ್ಯ ೧೪

೩ ಮುಸ್ಕಿ ಬಸವಪ್ಪ ಶಾಸ್ತ್ರಿ : ಘನಮಠ ನಾಗಭೂಷಣ ಶಿವಯೋಗಿಗಳ ಪುರಾಣ ಸಂಧಿ ೧೦ ಪದ್ಯ ೨೦

ಹೀಗೆ ಅಪ್ಪಣೆ ಕೊಡಿಸಿ ಘನಮಠ ಶಿವಯೋಗಿ ಹೇರೂರಿಗೆ ಹೋಗಿ ಅಲ್ಲಿ ಕೆಲದಿನವಿದ್ದು, ಮುಂದೆ ಕೃಷ್ಣಾನದಿ ದಾಟಿ ಬಾಡ ಎಂಬ ಊರಿಗೆ ಹೋಗಿ ಅಲ್ಲಿಯ ಮೂಲಿಯ ಮಠದಲ್ಲಿ ಗುರು ಚೆನ್ನವೀರರೊಡನೆ ವಾಸ್ತವ್ಯ ಮಾಡಿದರು. ಕೆಲವು ದಿನಗಳು ಕಳೆದವು. ಒಂದು ದಿನ ವೀರಭದ್ರ ಕವಿ ಪುರಾಣವನ್ನು ರಚಿಸಿಕೊಂಡು ಬಾಡಕ್ಕೆ ಬಂದ. ಆತನ ರೋಗ ಸಂಪೂರ್ಣ ವಾಸಿಯಾಗಿತ್ತು.

ಕೆಲವು ದಿನಗಳ ಬಳಿಕ ಬಾಡದ ಮಠದಲ್ಲಿ ಈ ಪುರಾಣದ ಪ್ರವಚನವನ್ನು ಏರ್ಪಡಿಸಿದರು. ಎರಡು ತಿಂಗಳವರೆಗೆ ಪುರಾಣ ಪ್ರವಚನ ನಡೆಯಿತು.

ಅರುವತ್ತು ಮೂವರು ಪುರಾತನರ ಪುರಾಣ ಏಕೆ ರಚಿಸಿದೆನೆಂದು ಕವಿ ತನ್ನ ಕಾವ್ಯದಲ್ಲಿ ಹೇಳಿಕೊಂಡಿದ್ದಕ್ಕೂ ಲಿಂ. ಮಸ್ಕಿ ಬಸವಪ್ಪಶಾಸ್ತ್ರಿಗಳು ತಮ್ಮ ಪುರಾಣದಲ್ಲಿ ಹೇಳಿರುವದಕ್ಕೂ ಬಹಳಷ್ಟು ವ್ಯತ್ಯಾಸವಿದೆ.

ಮಸ್ಕಿ ಬಸವಪ್ಪಶಾಸ್ತ್ರಿಗಳವರ ಘನಮಠ ಶಿವಯೋಗಿಗಳ ಪುರಾಣದ ಸಾರವನ್ನು ಬರೆದ ಕಲ್ಯಾಣಪ್ಪ ಬ್ಯಾಳಿಯವರು, "ಶಿವಯೋಗಿಗಳು ಜಾಲಹಳ್ಳಿಗೆ ದಯಮಾಡಿಸಿದಾಗ ವೀರಭದ್ರ ಶಾಸ್ತ್ರಿಗಳೆಂಬವರು ವಚನ ಶಾಸ್ತ್ರಕ್ಕೆ ಅಪಹಾಸ್ಯ ಮಾಡಿದ್ದಕ್ಕಾಗಿ ಭಯಂಕರ ರೋಗದಿಂದ ಬಳಲುತ್ತಿದ್ದುದನ್ನು ಕಂಡು ಅವರ ಬಳಿ ಸಾರ್ದು ಅವರ ಮೈಗೆ ವಿಭೂತಿಯನ್ನು ಹಚ್ಚಿ ಆ ರೋಗವನ್ನು ಗುಣಪಡಿಸಿದರು. ಅಲ್ಲದೆ ಆ ಶಾಸ್ತ್ರಿಗಳಿಂದ ೬೩ ಪುರಾತನರ ಪುರಾಣವನ್ನು ಭಾಮಿನೀ ಷಟ್ಪದಿಯಲ್ಲಿ ಬರೆಸಿದರು"– ಎಂದು ಬರೆದಿದ್ದಾರೆ. ೧

ಈ ವಿಷಯಕ್ಕೆ ಶ್ರೀ ಸಿದ್ಧಯ್ಯ ಪುರಾಣಿಕರ ಅಭಿಪ್ರಾಯ ಹೀಗಿದೆ :

"ದೇವದುರ್ಗದ ತಾಲೂಕಿನ ಜಾಲಹಳ್ಳಿಯಲ್ಲಿ ವೀರಭದ್ರ ಶಾಸ್ತ್ರಿಗಳೆಂಬವರು ವಚನ ಸಾಸ್ತ್ರದ ಬಗ್ಗೆ ಅಪಹಾಸ್ಯಗೈದರು. ಅವರಿಗೆ ರೋಗವೊಂದು ಉತ್ಪನ್ನವಾಯಿತು. ಆ ರೋಗ ನಿವಾರಣೆಗಾಗಿ ಘನಮಠರ ಸಲಹೆಯಂತೆ ಸಾಸ್ತ್ರಿಗಳು ಪುರಾತನರ ಪುರಾಣವನ್ನು ಭಾಮಿನೀ ಷಟ್ಪದಿಯಲ್ಲಿ ರಚಿಸಿದರು; ರೋಗ ಮುಕ್ತರಾದರು." ೨

ಕವಿಯನ್ನುಳಿದು ಮೂವರು ಹೇಳುವುದರಲ್ಲಿ ಕವಿಗೆ ರೋಗವಿದ್ದ ಮಾತು ಸಾಮಾನ್ಯವಾಗಿದೆ. ಆದರೆ ವಚನ ಶಾಸ್ತ್ರವನ್ನು ಕವಿಯು ನಿಂದಿಸಿದನೆಂಬ ಮಾತು ಬಸವಪ್ಪಶಾಸ್ತ್ರಿಗಳ ಪುರಾಣದಲ್ಲಿಲ್ಲ. ಪುರಾಣದಲ್ಲಿಲ್ಲದ ಮಾತನ್ನು 'ಪುರಾಣದ

೧ ಅದೇ ಪುರಾಣದ ಸಾರ ಪುಟ ೨೦

೨ ಸಿದ್ಧಯ್ಯ ಪುರಾಣಿಕ : ಶರಣ ಚರಿತಾಮೃತ ಪುಟ ೭೯೪

ಸಾರ'ದಲ್ಲಿ ಬರೆವ ಕಲ್ಯಾಣಪ್ಪ ಬ್ಯಾಳಿಯವರ ಧೈರ್ಯ ಹೆಚ್ಚಿನದು. ಕವಿಯು ಮೈಗೆ ವಿಭೂತಿ ಹಚ್ಚಿ ರೋಗ ಗುಣಪಡಿಸಿದ್ದೂ ಕವಿ ವಚನಶಾಸ್ತ್ರಕ್ಕೆ ಅಪಹಾಸ್ಯಮಾಡಿದ್ದೂ ಇವೆರಡೂ ವಿಷಯಗಳು ಬಸವಪ್ಪಶಾಸ್ತ್ರಿಗಳ ಪುರಾಣದಲ್ಲಿಲ್ಲ. ಇಲ್ಲದ ವಿಷಯವನ್ನು ಪುರಾಣದ ಸಾರದಲ್ಲಿ ಏಕೆ ಸೇರಿಸಿದರೋ ? ತಾವು ಎಲ್ಲಿಯೋ ಕೇಳಿದ ವಿಷಯ ವನ್ನು ಕಲ್ಯಾಣಪ್ಪನವರು ಪುರಾಣದ ಸಾರದಲ್ಲಿ ತಂದು ತುರುಕಿದ್ದಾರೆ. ಹೀಗೆ ಮಾಡಿ ಅವರು ಮಸ್ಕಿ ಬಸವಪ್ಪಶಾಸ್ತ್ರಿಗಳಿಗೂ ವೀರಭದ್ರ ಕವಿಗೂ ದೊಡ್ಡ ಅಪಚಾರ ಮಾಡಿದ್ದಾರೆ. ಇಂಥ ವ್ಯಭಿಚಾರ ಸಾಹಿತ್ಯದಲ್ಲಿ ಆಗಬಾರದು.

ಕವಿ ವಚನಶಾಸ್ತ್ರಕ್ಕೆ ಅಪಹಾಸ್ಯ ಮಾಡಿದ್ದನ್ನು ಸಿದ್ಧಯ್ಯ ಪುರಾಣಿಕರು ಬರೆದಿದ್ದಾರೆ. ಅವರಿಗೆ ಯಾವ ಆಧಾರವೋ ತಿಳಿಯದು.

ವೀರಭದ್ರ ಕವಿ ವಚನ ಶಾಸ್ತ್ರಕ್ಕೆ ಅಪಹಾಸ್ಯ ಮಾಡಿವನೆಂದೂ ಆತನಿಗೆ ಕುಷ್ಟರೋಗ ಬಾತೆಂದೂ ಅದನ್ನು ಘನಮಠರ ಹೇಳಿಕೆಯಂತೆ ಪುರಾತನರ ಪುರಾಣ ಬರೆದು ಕಳೆದುಕೊಂಡನೆಂದೂ ಈ ಭಾಗದ ಜನ ಇಂದಿಗೂ ಅಂದಾಡಿಕೊಳ್ಳುತ್ತಾರೆ. ಆದರೆ ಇದಕ್ಕೆ ಪ್ರಬಲವಾದ ಆಧಾರಗಳಿಲ್ಲ. ಈ ಜನರ ಮಾತು ಕೇಳಿ ಬ್ಯಾಳಿ ಮತ್ತು ಪುರಾಣಿಕರು ಹಾಗೆ ಬರೆದಂತೆ ಕಾಣುತ್ತದೆ. ಆದರೆ ಬಸವಪ್ಪಶಾಸ್ತ್ರಿಗಳ ಪುರಾಣದಲ್ಲಿ ವಚನಶಾಸ್ತ್ರಕ್ಕೆ ಅಪಹಾಸ್ಯ ಮಾಡಿದ ವಿಷಯವಿಲ್ಲ. ಕಲ್ಯಾಣಪ್ಪ ಬ್ಯಾಳಿ ಮತ್ತು ಸಿದ್ಧಯ್ಯ ಪುರಾಣಿಕರು ಅದನ್ನು ಎತ್ತಿ ತೋರಿಸಿದ್ದಾರೆ. ಚಾಲ ಹಳ್ಳಿಯಲ್ಲಿ ಇಂದಿಗೂ ಹಳೆತಲೆಮಾರಿನವರಿದ್ದಾರೆ. ಅವರು ಈ ಮಾತುಗಳನ್ನು ಅಲ್ಲಗಳೆಯುತ್ತಾರೆ.

ತಾನು ವಚನಶಾಸ್ತ್ರಕ್ಕೆ ಅಪಹಾಸ್ಯಮಾಡಿದ್ದರೆ, ಅದಕ್ಕಾಗಿ ರೋಗ ಬಂದಿದ್ದರೆ, ಅದು ಘನಮಠರಿಂದ ದೂರಾಗಿದ್ದರೆ ಕವಿ ತನ್ನ ಕಾವ್ಯದಲ್ಲಿ ಮುಚ್ಚು ಮರೆಯಿಲ್ಲದೆ ಹೇಳಿಕೊಳ್ಳುತ್ತಿದ್ದ. ನಿಜವಾಗಿ ಹೀಗೆ ನಡೆದಿದ್ದು, ಕವಿ ಅದನ್ನು ಕಾವ್ಯದಲ್ಲಿ ಹೇಳದೆ ಬಿಟ್ಟಿದ್ದರೆ ಘನಮಠರು ಆ ಕಾವ್ಯವನ್ನೋದಿ ಸುಮ್ಮನಿರುತ್ತಿದ್ದಿಲ್ಲ; ಸುಳ್ಳು ಬರೆದ ಕವಿಯನ್ನು ಕ್ಷಮಿಸುತ್ತಿರಲಿಲ್ಲ. ಆ ವಿಷಯವನ್ನು ಕಾವ್ಯದಲ್ಲಿ ಒತ್ತಾಯಿಸಿ ಸೇರಿಸುತ್ತಿದ್ದರು.

ಕವಿ ವಚನಶಾಸ್ತ್ರಕ್ಕೆ ಅಪಹಾಸ್ಯ ಮಾಡಿದ್ದು, ಅದಕ್ಕಾಗಿ ಆತನಿಗೆ ರೋಗ ಬಂದದ್ದು ಸುಳ್ಳು. ಇದು ಜನರ ಸೃಷ್ಟಿ. ಈ ಸೃಷ್ಟಿಯನ್ನ ಕಲ್ಯಾಣಪ್ಪ ಬ್ಯಾಳಿ ಮುಂತಾದವರು ನಂಬಿ ಗ್ರಂಥಗಳಲ್ಲಿ ಬಳಸಿಕೊಂಡು ತಪ್ಪು ಕಲ್ಪನೆಗೆ ಎಡೆಮಾಡಿ ಕೊಟ್ಟರು. ಇವರು ಯಾರೂ ವೀರಭದ್ರ ಕವಿಯ ಅರುವತ್ತು ಮೂವರು ಪುರಾತನರ ಪುರಾಣವನ್ನು ಓದಿಲ್ಲ; ಓದಿದ್ದರೆ ಹೀಗೆ ಮಾಡುತ್ತಿರಲಿಲ್ಲ.

ಕವಿಯು ಕಾವ್ಯ ಬರೆಯಲು ಕಾರಣವಾದ ಘಟನೆ ಆತನ ಕಾಲ ನಿರ್ಣಯಕ್ಕೆ ಸ್ಪಷ್ಟವಾದ ಪ್ರಮಾಣವನ್ನು ಒದಗಿಸಿದೆ. ಕವಿಯ ಪುರಾಣದಲ್ಲಿ ಮತ್ತು ಮಸ್ಕಿ ಬಸವಪ್ಪಶಾಸ್ತ್ರಿಗಳ ಘನಮಠ ಶಿವಯೋಗಿಗಳ ಪುರಾಣದಲ್ಲಿ – ಎರಡೂಕಡೆ ಘನಮಠದಾರ್ಯರು ಜಾಲಹಳ್ಳಿಗೆ ಬಂದುದು, ಅವರು ಕವಿಗೆ ಪುರಾತನರ ಪುರಾಣ ಬರೆಯಲು ಹೇಳಿದುದು ಉಕ್ತವಾಗಿದೆ. ಘನಮಠದಾರ್ಯರು ಜಾಲಹಳ್ಳಿಗೆ ಯಾವಾಗ ಬಂದರು ?

ಘನಮಠದಾರ್ಯರು ಆಂಧ್ರಪ್ರದೇಶದ ಅತ್ರಾಫ್ ಬಲ್ದಾ (ಈಗಿನ ಹೈದರಾಬಾದು) ಜಿಲ್ಲೆಯ ದೋರ್ವಾಡ ಎಂಬ ಹಳ್ಳಿಯಲ್ಲಿ ಕ್ರಿ. ಶ. ೧೮೨೯ (ಶಾ. ಶ. ೧೭೫೧) ರಲ್ಲಿ ಜನಿಸಿದರು. ಅವರು ೨೧ ವರ್ಷ ವಯಸ್ಸಿನ ವರೆಗೆ ಗೃಹಸ್ಥರಾಗಿ ಜೀವನ ಮಾಡಿದರು. ಆ ಬಳಿಕ ಅವರು ವೈರಾಗ್ಯ ತಾಳಿ ಊರು ಬಂಧು ಬಳಗ ತೊರೆದು ಹೊರಟರು. ಕರ್ನಾಟಕಕ್ಕೆ ಬಂದರು. ಯರಗೋಳಮಠದ ರೇವಣಸಿದ್ಧಯ್ಯನವರಲ್ಲಿ ಕನ್ನಡ ಕಲಿತರು. ನಿರರ್ಗಳವಾಗಿ ಕನ್ನಡದಲ್ಲಿ ಕಾವ್ಯ ಕಟ್ಟುವ ಶಕ್ತಿ ಬಂದ ಬಳಿಕ ಅವರು ಅಲ್ಲಿಂದ ಸಂಚಾರಕ್ಕೆ ಹೊರಟರು. ಅನೇಕ ಊರುಗಳಿಗೆ ಹೋದರು; ಅನೇಕ ಕಡೆ ಪುರಾಣ ಪ್ರವಚನ ಮಾಡಿದರು; ಬಸವಣ್ಣನವರ ವಚನಗಳನ್ನು ವ್ಯಾಖ್ಯಾನಿಸಿ ಹೇಳಿದರು. ಸೊಲ್ಲಾಪುರ ಪ್ರಾಂತ ಮತ್ತು ಹೈದರಾಬಾದ ಕರ್ನಾಟಕದಲ್ಲಿ ಅವರ ಹೆಸರು ಮನೆಮಾತಾಯಿತು. ಹೀಗೆ ಪ್ರಸಿದ್ಧಿಯಾದ ಬಳಿಕ ಅವರು ಜಾಲಹಳ್ಳಿಗೆ ಬಂದಂತೆ ಕಾಣುತ್ತದೆ.

ಕ್ರಿ. ಶ. ೧೮೨೮ ರಲ್ಲಿ ಹುಟ್ಟಿ ೨೧ ವರ್ಷಗಳ ಬಳಿಕ ಎಂದರೆ ೧೮೪೯ರಲ್ಲಿ ಅವರು ಮನೆ ಬಿಟ್ಟರು. ಯರಗೋಳ ಮಠದಲ್ಲಿ ಅವರು ಸುಮಾರು ೫ ವರ್ಷದ ವರೆಗಾದರೂ ಕನ್ನಡ ಕಲಿತಿರಬೇಕು. ಐದು ವರ್ಷಗಳ ಬಳಿಕ ಎಂದರೆ ೧೮೫೪ರಲ್ಲಿ ಅವರು ಸಂಚಾರಕ್ಕೆ ಹೊರಟರು. ೧೦ ವರ್ಷಗಳವರೆಗೆ ಅಲ್ಲಲ್ಲಿ ಸಂಚರಿಸಿ ಸುಮಾರು ಕ್ರಿ. ಶ. ೧೮೬೪ ರಲ್ಲಿ ಅವರು ಜಾಲಹಳ್ಳಿಗೆ ಬಂದರು. ಆ ಬಳಿಕ ವರ್ಷವೊಪ್ಪತ್ತಿನಲ್ಲಿ ಎಂದರೆ ಕ್ರಿ. ಶ. ೧೮೬೫ (ಶಾ. ಶ. ೧೭೮೮) ರಲ್ಲಿ ವೀರಭದ್ರ ಕವಿ ಪುರಾಣ ಬರೆದು ಮುಗಿಸಿರಬೇಕು. ಅದೇ ವರ್ಷ ಬಾಡದಲ್ಲಿ ಪುರಾಣ ಪ್ರವಚನ ನಡೆದಿರಬೇಕು.

ಪುರಾಣ ಬರೆಯುವ ಕಾಲಕ್ಕೆ ವೀರಭದ್ರಕವಿ ಪ್ರೌಢನಾಗಿದ್ದು ಸುಮಾರು ೩೦ ವರ್ಷ ಮೀರಿದವನಾಗಿರಬೇಕು. ಎಂದರೆ ವೀರಭದ್ರಕವಿ ಕ್ರಿ. ಶ. ೧೮೩೫ ರ ಆಚೆಯವನಲ್ಲವೆಂದೂ ೧೯೦೦ ರ ಈಚೆಯವನಲ್ಲವೆಂದೂ ನಿರ್ಧರಿಸಬಹುದು[೧]

---

೧ ಡಾ॥ ಹಿರೇಮಲ್ಲೂರು ಈಶ್ವರನ್ ಮತ್ತು ಡಾ॥ ಆರ್. ಸಿ. ಹಿರೇಮಠ ಇವರಿಬ್ಬರಿಗೂ ವೀರಭದ್ರಕವಿಯ ಕಾಲ ನಿರ್ಣಯಕ್ಕೆ ಆಧಾರಗಳು ದೊರಕದ್ದರಿಂದ ಅವರು ಅನುಕ್ರಮವಾಗಿ ಕವಿಯ ಕಾಲ ಕ್ರಿ. ಶ. ೧೫೦೦ ಮತ್ತು ಕ್ರಿ. ಶ. ೧೭೦೦ ಎಂದು ಹೇಳುತ್ತಾರೆ.

ಶ್ರೀ

——————ಹರಿಹರಾಚಾರ್ಯ
ಸುಜ್ಞಾನದಿಂದೊರೆದ ರಘಟಾಪ್ರಬಂಧದ ಸುವಾಕ್ಯ ಪ್ರಸಾದದಿಂದಂ
——————
——————
——————————ರಚಿಯಿಸಿದಂ ಪುರಾತನರ ಪೌರಾಣಮಂ ೧
ಅರಿಯಲೀ ಸುಪ್ರಬಂಧಕ್ಕೆ ಪೆಸರಾವುದೆನ
ಲರುವತ್ತು ಮೂವ್ವರ್ಪುರಾತನರ ಪೌರಾಣ
ಪಿರಿದಿದಕ್ಕಧಿಪರಾರೆನೆ ಪುರಾತನರಿದಕ್ಕಾಧಾರವಾವುದೆನಲೂ
ಹರಿದೇವನೊರೆದ ರಘಟಾಕಾರವಾಧಾರ ೨

ನನ್ನ ಪುರಾಣಕ್ಕೆ ಆಧಾರ ಹರಿದೇವನೊರೆದ ರಗಳೆಗಳೇ ಎಂದು ಕವಿ ವೀರಭದ್ರ ಹೇಳಿಕೊಂಡಿದ್ದಾನೆ. ಇದು ಬಹುಮಟ್ಟಿಗೆ ಸತ್ಯ. ಆದರೆ ಇಲ್ಲಿ ಕೆಲವು ಸಮಸ್ಯೆಗಳಿವೆ :

---

( ಹಿಂದಿನ ಪುಟದ ಅಡಿಟಿಪ್ಪಣಿಯಿಂದ ಮುಂದುವರಿದುದು )

"ಗ್ರಂಥಾರಂಭದಲ್ಲಿ ಕವಿಯು ನಿಜಗುಣ ಶಿವಯೋಗಿಯನ್ನು ನೆನೆಯುವುದರಿಂದ ಆತನು ಸುಮಾರು ೧೫೦೦ ರಲ್ಲಿ ಇರಬಹುದೆಂದು ತೋರುತ್ತದೆ.

( ಡಾ॥ ಹಿರೇಮಲ್ಲೂರು ಈಶ್ವರನ್ : ಹರಿಹರನ ಕೃತಿಗಳು—ಒಂದು ಸಂಖ್ಯಾ ನಿರ್ಣಯ ಪುಟ ೫೧೫ )

"ಹರಿಹರನು ಪುರಾತನರ ರಘಟಾಪ್ರಬಂಧವೊಂದನ್ನು ರಚಿಸಿದನೆಂದೂ ಅದನ್ನು ಆಧರಿಸಿ ವೀರಭದ್ರಕವಿಯು ತನ್ನ ಅರುವತ್ತು ಮೂವರು ಪುರಾತನರ ಚಾರಿತ್ರವನ್ನು ರಚಿಸಿರುವೆನೆಂದೂ ಹೇಳಿಕೊಳ್ಳುತ್ತಾನೆ. ಇದರಿಂದ ವೀರಭದ್ರಕವಿ ೧೬ನೆಯ ಶತಮಾನದಲ್ಲಿ ಹರಿಹರನ ಪುರಾತನರ ರಘಟಾ ಪ್ರಬಂಧವನ್ನು ನೋಡಿದ್ದನೆಂದು ಅರ್ಥವಾಗುತ್ತದೆ."

( ಡಾ॥ ಆರ್. ಸಿ. ಹಿರೇಮಠ : ಹಂಪೆಯ ಹರಿಹರದೇವಕೃತ ಪುರಾತನರ ರಗಳೆಗಳು, ಪ್ರಸ್ತಾವನೆ ಪುಟ xxvi )

೧ ಅರವತ್ತು ಮೂವರು ಪುರಾತನರ ಪುರಾಣ ಸಂಧಿ ೧ ಪದ್ಯ ೧೪
೨ ,, ,, ,, ,, ,, ೧೭

ಹರಿಹರನ ರಗಳೆಗಳನ್ನು ಆತ ಯಾವ ಯಾವ ದೃಷ್ಟಿಯಿಂದ ಆಧಾರವಾಗಿಟ್ಟುಕೊಂಡಿದ್ದಾನೆ ? ಕಥೆ, ಪುರಾತನರ ಸಂಖ್ಯೆ — ಇವೆರಡು ದೃಷ್ಟಿಗಳಿಂದಂತು ವಿವೇಚನೆ ಅಗತ್ಯ. ಈ ವಿವೇಚನೆಗೆ ತೊಡಗುವುದಕ್ಕೆ ಮುಂಚೆ ಕವಿಯ ಕಾವ್ಯಶಕ್ತಿಯ ಬಗೆಗೆ, ಕವಿಯು ಕಾವ್ಯದ ದೃಷ್ಟಿಯಿಂದ ಹರಿಹರನನ್ನು ಅನುಕರಣ ಮಾಡಿದ ಬಗೆಗೆ ಒಂದೆರಡು ಮಾತು ಹೇಳುವುದು ಅಗತ್ಯವಿದೆ.

'ಸುವಿವೇಕ ಸುಖಿ, ಸಾಧು ಕಿಂಕರ, ನವವಿಧ ಕರ್ಣಾಟ ಕವಿತಾಚತುರ' ಎಂದು ಕವಿ ತನ್ನನ್ನು ಕರೆದುಕೊಂಡಿದ್ದಾನೆ. 'ನವವಿಧ ಕರ್ಣಾಟ ಕವಿತಾಚತುರ' ಎಂದು ಒಣ ಹೆಮ್ಮೆಯಿಂದ ಕರೆದುಕೊಂಡಿದ್ದಾನೆ ಎಂದೆನಿಸುವುದಿಲ್ಲ. ಪುರಾಣದಲ್ಲಿ ಬರುವ ಕೆಲವು ಪದ್ಯಗಳು ಕವಿಗೆ ಒಂದು ಹೆಚ್ಚಿನ ಶಕ್ತಿಯಿದೆ ಎಂದು ತೋರಿಸುತ್ತವೆ. ಆದರೆ ಕವಿ ತೀರ ಹರಿಹರನಿಗೆ ಜೋತುಬಿದ್ದು ತನ್ನ ಸ್ವಂತಿಕೆಯನ್ನು ಮರೆತುಬಿಟ್ಟಿದ್ದಾನೆ. ತನ್ನ ಸ್ವಂತಿಕೆಯನ್ನು ಮೆರೆದಿದ್ದರೆ ಆತ ನಿಜಕ್ಕೂ ನವವಿಧ ಕರ್ಣಾಟ ಚತುರನೇ ಆಗುತ್ತಿದ್ದ; ಆದರೆ ಅದನ್ನು ಮರೆತು, ಸಾಧ್ಯವಿದ್ದಲ್ಲೆಲ್ಲ ಹರಿಹರನನ್ನು ಅನುಕರಿಸುತ್ತಾನೆ. ಆತನ ಸಾಲುಗಳನ್ನೇ ತೆಗೆದು ತನ್ನ ಕಾವ್ಯದಲ್ಲಿ ಬಳಸಿಕೊಳ್ಳುತ್ತಾನೆ. ಅನಿವಾರ್ಯವಾದಲ್ಲಿ ತನ್ನ ಸ್ವಂತ ಬರವಣಿಗೆ ಬರೆಯುತ್ತಾನೆ. ಹೀಗಾಗಿ ಕಾವ್ಯ ಒಂದು ರೀತಿಯ ತೇಪೆಯಂತಾಗಿದೆ. ಲಲಿತ ರಗಳೆಯಾಗಿದ್ದರಂತೂ ಮುಗಿಯಿತು; ಕವಿಗೆ ಸುಗ್ಗಿ. ಹರಿಹರನ ಸಾಲುಗಳನ್ನು ಇದ್ದಕ್ಕಿದ್ದಂತೆ ಬಳಸಿಕೊಂಡುಬಿಡುತ್ತಾನೆ; ಏಕೆಂದರೆ ಲಲಿತರಗಳೆಯ ಸಾಲುಗಳು ವಾರ್ಧಕ ಷಟ್ಪದಿಯ ೧, ೨, ೪, ೫ ಪಾದಗಳಿಗೆ ಸರಿಹೋಗುತ್ತವೆ. ಮೂರನೆಯ ಮತ್ತು ಆರನೆಯ ಪಾದಗಳನ್ನು ಸ್ವಲ್ಪ ಬದಲುಮಾಡಿ ಹರಿಹರನ ಭಾವವನ್ನೇ ಅವೇ ಶಬ್ದಗಳೊಡನೆ ಅನುವಾದಿಸುತ್ತಾನೆ. ಮಂದಾನಿಲರಗಳೆ ಮತ್ತು ಉತ್ಸಾಹರಗಳೆಗಳಾದರೆ ಕವಿಯು ಭಾವವನ್ನು, ಶಬ್ದಗಳನ್ನು, ವಾಕ್ಯಖಂಡಗಳನ್ನು ಬಳಸಿಕೊಳ್ಳುತ್ತಾನೆ.

ಭಾವ ಭಾಷೆ ಸಾಲುಗಳು — ಮೂರರ ಅನುವಾದಕ್ಕೆ ಕೆಳಗಿನ ಪದ್ಯ ಉತ್ತಮ ನಿದರ್ಶನ : ಇದು ಷಟ್ಪದಿ;

ನಂಬಿ ಬಂದವನಾಗಿ ನಂಬಿ ಎಂದೇ ಇಟ್ಟು
ಇಂಬಿನಿಂ ಮಾತೆ ಪಿತರತಿ ಸಂತಸಂ ಬಟ್ಟು
ಮುಂಬರುವ ಮೋಹದಿಂದಿರುತಿರಲ್ಕಾನಂಬಿ ನಳನಳಿಸಿ ಬಳೆವುತಿರ್ದಂ
ಸಾಂಬನುರುಲೀಲೆಯ ದು ಶಿಶುವಾಗಿ ಬೆಳೆವಂತೆ
ಶಂಭುವಿನ ಭೋಗವಾರಾಗದಿಂ ಬೆಳೆವಂತೆ
ಕುಂಭಿನಿಯೊಳೆಸೆವ ತಿರಿನಾವಲೂರೊಳಗಾತ ಬಳೆವುತ್ತಲಿರುತಿರ್ದನು ೧

---

೧ ಅರವತ್ತು ಮೂವರು ಪುರಾತನರ ಪುರಾಣ ಸಂಧಿ ೨ ಪದ್ಯ ೧೧

ಇದು ರಗಳೆ :

ನಂಬಿ ಬಂದವನಾಗಿ ನಂಬಿಯೆಂದೇಯಿಟ್ಟು
ಇಂಬಿನಿಂ ಮಾತೆಪಿತರತಿ ಸಂತಸಂಬಟ್ಟು
ಇರುತಮಿರೆ ನಳನಳಿಸಿ ಬಳೆದನಾತಂ ನೋಡ
ಹರಲೀಲೆ ಶಿಶುವಾಗಿ ಬಳೆವಂದದಿಂ ನೋಡ
ಶಿವನ ಭೋಗಂ ರಾಗದಿಂದೆ ಬಳೆವಂದದಿಂ ೧

ಇದು ಷಟ್ಪದಿ :

ಭಕ್ತರೊಲ್ಲದೊಡೆನ್ನನೊಲುವರಾರಲೆ ನಂಬಿ
ಭಕ್ತರರಿಯದೊಡೆನ್ನನರಿವರಾರೆಲೆ ನಂಬಿ
ಭಕ್ತರುಗಳೆನ್ನನರ್ಚಿಸದಿರಲ್ಕಿನ್ನಾರು ಎನ್ನನರ್ಚಿಪರು ನಂಬಿ ೨

ಇದು ರಗಳೆ :

ಭಕ್ತರೊಲ್ಲದರೆನ್ನನೊಲ್ವರಾರ್ಯೆ ನಂಬಿ
ಭಕ್ತರರಿಯದರೆನ್ನನರಿವರಾರೆಲೆ ನಂಬಿ
ಭಕ್ತರರ್ಚಿಸದೆನ್ನನರ್ಚಿಸುವರಾರ್ ನಂಬಿ ೩

ವೀರಭದ್ರ ಹರಿಹರನ ಗದ್ಯವನ್ನೂ ಇದ್ದಕ್ಕಿದ್ದಂತೆ ಬಳಸಿಕೊಳ್ಳುತ್ತಾನೆ. ಇಲ್ಲಿಯ ಶಬ್ದಗಳನ್ನು ವಾಕ್ಯಗಳನ್ನು ವಾರ್ಧಕ ಷಟ್ಪದಿಯ ಚರಣಗಳಿಗೆ ಅಳವಡಿಸಿಕೊಳ್ಳುತ್ತಾನೆ; ಅದೇ ಭಾವ ಅನುವಾದಿಸುತ್ತಾನೆ.

ಇದು ಷಟ್ಪದಿ :

ನೆರೆ ಕಂಡವರ ಕಣ್ಣ ಮಣಿ ಮತ್ತೆ ಎತ್ತಿರ್ದ
ವರ ಹಸ್ತದಮೃತಫಳ ಒಪ್ಪಿದವರುರದೊಪ್ಪು
ಮಿರದೆ ಮುಟ್ಟಿರ್ದವರ ಮೈಪುಳಕವೈದೆ ಕೈಕೊಂಬುವರ ಧನವೆನಿಸಿರೇ
ಪರವೆಸಾಚಿಯುರನಪ್ಪುವ ತೋಳ್ಗಳಿವೆಯೆಂಬ
ತೆರದಿಂದೆ ತೋಳಾಡಿಸುತ್ತಂ ಮಹೇಶನೊಡ
ನುರುಜಗಳ ಮುಂದಾಡಿದಪೆನಮಂ ಪುಸಿಜಗಳವೆಂದು ತಾಂ ಸೂಚಿಪಂತೆ ೪

---

೧ ಡಾ॥ ಆರ್.ಸಿ. ಹಿರೇಮಠ: ಹರಿಹರದೇವಕೃತ ಪುರಾತನರ ರಗಳೆಗಳು
ಪುಟ ೧೨೩ ಸಾಲುಗಳು ೧೦೩ ರಿಂದ ೧೦೭

೨ ವೀರಭದ್ರ ಕವಿ : ಅ. ಮೂ. ಪು. ಪುರಾಣ ಸಂಧಿ ೩ ಪದ ೨೫

೩ ಡಾ॥ ಆರ್. ಸಿ. ಹಿರೇಮಠ : ಹರಿಹರದೇವಕೃತ ಪುರಾತನರ ರಗಳೆಗಳು
ಪುಟ ೮೮ ಸಾಲುಗಳು ೧೮೭, ೧೮೮, ೧೮೯

೪ ವೀರಭದ್ರ ಕವಿ : ಅ ಮೂ. ಪು ಪುರಾಣ ಸಂಧಿ ೨ ಪದ್ಯ ೧೨

ತೊದಳ ನುಡಿಗಳ ನುಡಿವುತಂ ದೇವನಂ ತನಗೆ
ಮುದದಿ ಕುಂಟಣಿಯೆನಿಸಿ ನಡೆಯಿಸುವ ತೆರನಿದೆಂ
ದದು ತೋರುವಂತೆ ಸಲ್ಲೀಲೆಯಿಂ ಮೆಲ್ಲಮೆಲ್ಲನೆ ದಟ್ಟಡಿಯನಿಡುತ್ತಂ
ಮೊದಲನರಿಯದ ಪಡೆದವರ್ತಾವೆನುತ್ತರ್ರಿದು
ಪದುಳದಿಂ ಮುದ್ದಾಡಿಸುವ ತಾಯಿ ತಂದೆಗಳ
ವದನಮಂ ನೋಡಿ ನಗುವಂತೆ ಸೌಂದರ ಪೆರುಮಳೆ ಮುಗುಳ್ನಗೆ ನಗುತ್ತಂ ೧

ಇದು ರಗಳೆ :

ಇಂತು ನಂಬಿಯಣ್ಣಂ ಶಿಶು ವೇಷದೊಳು ನಳನಳಿಸಿ ತೊಳತೊಳಗಿ ಕಂಡವರ ಕಣ್ಣಮಣಿ, ಎತ್ತಿದರ ಹಸ್ತದಮೃತಫಳಂ, ಮುಟ್ಟಿದರ ಮೆಯ್ಯಪುಳಕಂ, ಅಪ್ಪಿದರುರದೊಪ್ಪಂ, ಸಾಗಿಸುವರ ಸೋಗಿಲ ಧನಂ, ಕೈಕೊಂಬವರ ಕಡವರವೆನಿಸಿ, ಪರವೆನಾಚಿ ಸಂಕಿಲೆನಾಚಿಯುರನಪ್ಪುವ ತೋಳ್ಗಳಿವೆಂಬಂತೆ ತೋಳಾಡಿಸುತ್ತಂ, ಮುಂದೆ ಶಿವನೊಡನಾಡುವ ಜಗಳಂ ಪುಸಿ ಜಗಳವೆಂಬುದಂ ಸೂಚಿಸುವಂತೆ ತೊದಳ್ನುಡಿಗಳಂ ನುಡಿವುತ್ತಂ, ದೇವನಂ ತನಗೆ ಕುಂಟಣಿ ಮಾಡಿ ನಡೆಯಿಸುವ ಪರಿಯೀಪರಿಯೆಂಬುದಂ ತೋರುವಂತೆ ಮೆಲ್ಲಮೆಲ್ಲನೆ ದಟ್ಟಡಿಯಿಡುತ್ತಂ, ಪುಟ್ಟಿಸಿದರ್ ತಾವೆಂದು ಒಸೆದು ಮುದ್ದಾಡಿಸುವ ತಾಯ್ತಂದೆಗಳ ಮೊಗಮಂ ನೋಡಿ ನಗುವಂತೆ ಮುಗುಳ್ನಗೆ ನಗುತ್ತಂ ....... ೨

ಈ ಕವಿ ರಗಳೆಯನ್ನು ಷಟ್ಪದಿಗೆ ಒಗ್ಗಿಸಿಕೊಂಡಿದ್ದಾನೆ. ಚೆನ್ನಾಗಿಯೇ ಒಗ್ಗಿಸಿಕೊಂಡಿದ್ದಾನೆ. ಆದರೆ ರಗಳೆಯ ರಮ್ಯತೆ ಇಲ್ಲಿ ಇಲ್ಲ; ಆ ಭವ್ಯತೆ, ಆ ಉತ್ಸಾಹ, ಆ ರಭಸ ಇಲ್ಲಿ ಇಲ್ಲ. ಆದರೆ ಗೇಯತೆ ಇದೆ. ಶಬ್ದ ಶಬ್ದ ವಾಕ್ಯ ವಾಕ್ಯ ಅನುಕರಣ ಮಾಡಿದರೂ ಕಾವ್ಯ ಮಂಜುಳವಾಗಿ ಹರಿಯುತ್ತದೆ. "ಹರಿಹರನ ಭಕ್ತಿಯ ಉತ್ಕಟತೆಯಾಗಲೀ ಸ್ಫೂರ್ತಿಯ ಆವೇಶವಾಗಲೀ ಈ ಕಾವ್ಯದಲ್ಲಿ ವ್ಯಕ್ತವಾಗಿಲ್ಲ. ಆದರೂ ಸರಳವೂ ಗ್ರಾಹ್ಯವೂ ಆದ ಶೈಲಿಯಲ್ಲಿ ವೀರಭದ್ರನು ಕೃತಿ ರಚಿಸಿರುವುದರಿಂದ ಅದು ಪಂಡಿತರಿಗೂ ಪಾಮರರಿಗೂ ಮೆಚ್ಚುಗೆಯನ್ನುಂಟುಮಾಡಿರುತ್ತದೆ." ೩

ಹರಿಹರನನ್ನು ಅನುಕರಣೆ ಮಾಡಿದ್ದರೂ ಕವಿ ಅಲ್ಲಲ್ಲಿ ತನ್ನತನವನ್ನು ಮೆರೆದಿದ್ದಾನೆ; ಅಲ್ಲಿ ಕಾವ್ಯ ಸುಂದರವಾಗಿದೆ.

---

೧ ಅದೇ ಸಂಧಿ ೨ ಪದ್ಯ ೧೩

೨ ಡಾ॥ ಆರ್. ಸಿ. ಹಿರೇಮಠ : ಹರಿಹರದೇವಕೃತ ಪುರಾತನರ ರಗಳೆಗಳು ಪುಟ ೧೨೪

೩ ಡಾ॥ ಹಿರೇಮಲ್ಲೂರು ಈಶ್ವರನ್ : ಹರಿಹರನ ಕೃತಿಗಳು – ಒಂದು ಸಂಖ್ಯಾನಿರ್ಣಯ ಪುಟ ೫೨೧.

ಶಿವನ ಸಾಕಾರ ನಿರಾಕಾರದ ವರ್ಣನೆ ಕೆಳಗಿನ ಪದ್ಯದಲ್ಲಿ ಬಲು ಹೃದಯಂಗಮವಾಗಿ ಮೂಡಿ ಬಂದಿದೆ :

ಬಲವು ಭಕ್ತರಿಗಿತ್ತ ವಾಮವಂಬಿಕೆಗಿತ್ತ
ಚೆಲುವೆನಿಪ ರೂಪಂ ಚರಾಚರಂಗಳಿಗಿತ್ತ
ಸಲೆ ನಿರಂಗತ್ವವಂಗಜಗಿತ್ತ ಶೂನ್ಯತೆಯನಂಬರಕ್ಕಿತ್ತ ಮತ್ತಂ
ಕಳೆಯಿಂದಲಿಹನು ಇದ್ದಂತಿಹನು ಇಂತಪ್ಪ
ಬಲುಮೆಯುಹ ಇಂದ್ರಜಾಲದ ಮಹಿಮರಿನ್ನುಂಟೆ
ಭಳಿಭಳಿರೆ ದೇವ ದೇವೇಶನೆಂದು ಪೊಗಳ್ವರಿಂದೀಶನೆಸೆದಿರ್ದನು ೧

ವರ್ಷಾಕಾಲ, ಶರತ್ಕಾಲ, ಚಂದ್ರ– ಇವುಗಳ ಸೊಗಸಾದ ವರ್ಣನೆ ಇಲ್ಲಿದೆ:

ವಸುಧೆಯೊಳಗಖಿಳ ಸಸಿಯಂ ಬೆಳಸಿ ಕೀರ್ತಿಯಂ
ಪಸರಿಸಿದಳವಳು ವರ್ಷಾಕಾಲಮೆಂದೆಂಬ
ಕುಶಲಾಂಗನೆಯುಳದೇನರಿದಲ್ಲವೀ ನಿರಾಧಾರ ಮಾರ್ಗಾಂತರದೊಳು
ಸಸಿಯೊಂದನಂ ಬೆಳಸಲೀಕೀರ್ತಿ ಧರೆಯನುಂ
ಮುಸುಕಿಹುದು ಶರಧಿಯಂ ಮುಸುಕಿಹುದು ಗಿರಿಗಳಂ
ಮುಸುಕಿಹುದು ಸ್ಮೈಯೆನುತ್ತಂ ಶರತ್ಕಾಲ ಸಖಿಯಂ ಪೊಗಳ್ವೊಲಬ್ಜನೆಸೆದಂ ೨

ಸೂರ್ಯೋದಯದ ವರ್ಣನೆ ಇಲ್ಲಿದೆ :

ನರರಾಯುವೆಂಬ ರಾಶಿಯನಳೆವ ಕೊಳಗನೆನೆ
ನೆರೆಮಾಳ್ಪ ಸತ್ಕರ್ಮಗಳಿಗಿವಂ ಬಳಗನೆನೆ
ಧರೆಯ ಜೀವರ್ಗೆ ಸಂತಸವೀವ ಬೆಳಗನೆನೆ ದುಗುಡದಿಂ ಮೊಗವ ಮುಗಿದ
ಸರಸಿಂಜಗಳನು ನಗಿಸುವ ಚತುರ ಪುರುಷನೆನೆ
ವಿರಹದಿಂದುರಿವ ಚಕ್ರಂಗಳ್ಗೆ ಹರ್ಷವೆನೆ
ಭರದಿಂದೆ ಮೂಂದೆಯುರನೊಕ್ಕಲಿಕ್ಕುತ್ತುದಯಗಿರಿಯನೇರಿದನರ್ಕನು ೩

ಕವಿಗೆ ಈ ಪುರಾಣ ಬರೆದುದರಿಂದ ಹೆಮ್ಮೆ ಎನಿಸಿದೆ; ಜೀವನ ಸಾರ್ಥಕವೆನಿಸಿದೆ. ಈ ಪುರಾತನರನ್ನು ಹೊಗಳಿ ಹಾಡಿದ ಕಾರಣ ತನಗೆ ಭವಬಂಧನವಿಲ್ಲವೆಂದು ವಿಶ್ವಾಸದಿಂದ ಹೇಳಿಕೊಳ್ಳುತ್ತಾನೆ. ತಾನೂ ಆ ಪುರಾತನರ ಮಟ್ಟಕ್ಕೆ ಏರಿದವ ಎಂಬ ಭಾವ ಸುಳಿದು ಕೃತಕೃತ್ಯತೆಯಿಂದ ಹೃದಯ ತುಂಬಿ ಬರುತ್ತದೆ.

---

೧ ವೀರಭದ್ರ : ಅ. ಮೂ. ಪು. ಪುರಾಣ ಸಂಧಿ ೧ ಪದ್ಯ ೨೫
೨ ,, ,, ,, ೨ ,, ೫೭
೩ ,, ,, ,, ೩ ,, ೧೪

ಆಗ ಈ ಪದ್ಯ ಹೇಳುತ್ತಾನೆ; ಇದರಲ್ಲಿ ತನ್ನ ಹೆಸರಿನ ಅಕ್ಷರಗಳನ್ನು ಚಮತ್ಕಾರಿಕವಾಗಿ ಮೂಡಿಸಿದ್ದಾನೆ.

ಶ್ರೀ ಭವ್ಯರೂಪರಾದೀ ಪುರಾತನರೊಳಾಂ
ಶೋಭಿಸಿದ ಕಾರಣದಿ ಭವಬಂಧವೆನಗಿಲ್ಲ
ವಾಭಾವವೆಂತೆನಲು ಪೇಳ್ವೆ ಕೇಳುವ ಜನಕ್ಕಾನಂದವೆನಲು ಕೆಂಭಾ
ವೀ ಭೋಗಯೆನೆ ಅಮರ ನೀತಿಯೆನೆ ಭಕ್ತರೊಳು
ಪ್ರಾಬಲ್ಯರೆನಿಸುವಿರಿ ಭಕ್ತರೆನೆ ಮತ್ತೆಂದ
ಯಾಭರಿತನಾ ರುದ್ರಶಂಭುಯೆನೆ ಚನ್ನಯ್ಯ ಚೋಳಯೆನಲರಿವುದಿವರೊಳ್ ೧

ಳ

ಕಾವ್ಯವನ್ನು ಅನುಕರಿಸಿದಂತೆ ಕಥೆಯನ್ನು ಅನುಕರಿಸುವನಾದರೂ—ಅಲ್ಲಲ್ಲಿ ಕಥೆಯಲ್ಲಿ ಬಹಳಷ್ಟು ಬದಲಾವಣೆಮಾಡಿಕೊಂಡಿದ್ದಾನೆ; ಕೆಲವು ಕಡೆ ತೀರ ಸಂಕ್ಷಿಪ್ತಗೊಳಿಸಿದ್ದಾನೆ; ಕೆಲವು ಕಥೆಗಳನ್ನಂತೂ ಹೆಸರು ಹೇಳಿ ಮುಗಿಸುತ್ತಾನೆ. ಕೆಲವು ಕಡೆ ಹರಿಹರನ ಕಥೆಗಿಂತ ಪೂರ್ಣ ಭಿನ್ನವಾದ ಕಥೆ ಬರುತ್ತದೆ. ವಿಸ್ತಾರದ ಭಯದಿಂದ ಸಂಕ್ಷಿಪ್ತವಾಗಿ ಈ ವ್ಯತ್ಯಾಸವನ್ನು ಇಲ್ಲಿ ಹೇಳುವೆ.

ಇದು ರಗಳೆಯ ಕಥೆ :

ನಂಬಿಯಣ್ಣ ತಿರುವಾರೂರಲ್ಲಿರಲು ಓರ್ವ ವಿಳಾಸಿನಿ ಬಂದು ಬಿನ್ನವಿಸಿದಳು :

"ದೇವ ದೇವ ಚಿತ್ತೈಸುವುದೆನ್ನದೊಂದು ಬಿನ್ನಪವನಿಲ್ಲಿ ದೇವರ ದೇವನಪ್ಪ ಬೀದಿವೆಡಂಗ ಪೆರುಮಾಳೆಯನೋಲೈಪ ತಳಿಯಿಲಾರ ಕುಲದ ಪರಮ ಯೌವನೆಯಪ್ಪ ಪರವೆನಾಚಿಯರೆಂಬ ಕನ್ನೆ ಕನಕಲತೆಯಂತಿರ್ನಪಳಾಕೆಗೀಗಳೀಗಳಿಂದು ನಾಳೆ ಕುಸುಮಾಯುಧ ಪ್ರಥಮ ಪುಷ್ಪಿತಾಸಮಯುವದು ಕಾರಣದಿಂದವರ ನಿಳಯದೊಳು ಪುಷ್ಪಮಾಲಾಬಂಧವೆಂಬುದೊಂದು ಮನ್ಮಥಪರ್ವವಾ ಪರವೆಯರ ಹೂವಿನ ಪೆಡಗಯ್ಯಂ ಬಿಡುವಡೆ ಶಿವಬ್ರಾಹ್ಮಣರಲ್ಲದೆ ಬಿಡಲು ಬಾರದು ........................ ಇದಕ್ಕೆ ಪುರದ ಪಲಂಬರು ಶಿವಬ್ರಾಹ್ಮಣರ ಪೆಸರುಗೊಂಡೊಡೆ ಕೇಳದಂತಿಪ್ಪ ಪರವೆಯರು ನಿಮ್ಮಡಿಗಳ ನಾಮಗ್ರಹಣಂಗೊಡಲೊಡನಂತಂತೆ ಪುಳಕಿಸುತೆ ತಲೆವಾಗಿ ಲಜ್ಜಿತೆಯಾಗಿರಲವರ ಮಾತೆಪಿತರು ನಿಮ್ಮಡಿಗಳಿಗೆನ್ನಂ ಕಳುಪಿದರ್ ................ ನಿಮ್ಮಡಿಗಳಿಂದಿನ ಬೆಳತಿಗೆ ಬೆಳುದಿಂಗಳೊಳು ವಿಜಯಂಗೆಯ್ದು ಕನ್ನೆಯ ಮನೋರಥಮಂ ಮಾಳ್ಪುದೆಂದೊಳು ನುಡಿಯಿಂದೊಡಂಬಡಿಸಿ ಪೋಗಲ್" ೨

---

೧ ಅದೇ ಸಂಧಿ ೨೮ ಪದ್ಯ ೧೦

೨ ಆರ್. ಸಿ. ಹಿರೇಮಠ : ಹರಿಹರದೇವಕೃತ ಪುರಾತನರ ರಗಳೆಗಳು ಪುಟ ೧೬೯-೧೭೦

ಇವು ಷಟ್ಪದಿ :

ಅನಿತರೊಳಗಲ್ಲಿಗೊರ್ವಾಂಗನೆಯಳ್ಕೈತಂದು
ಜನನಾಥನಾದ ಸೌಂದರ ಭೂಪನೇಕಾಂತ
ದನುವರಿದು ಬಿನ್ನೈಸಿದಳು ದೇವ ಕೇಳೀಗ ಪರವೆನಾಟಯೆನಿಪ್ಪವ್ವ
ವನಿತಾಶಿರೋಮಣಿಯು ನಿನ್ನ ಮೇಲಕ್ಕರಂ
ಘನವಾಗಿ ಎನ್ನನಟ್ಟಿದಳವಳ ಸಂತಾಪ ,
ವೆನಿತೆಂದುಸುರಬಹುದು ಎನಿತು ವರ್ಣಿಸಲಹುದು ಕೇಳಯ್ಯ ಸೌಂದರೇಂದ್ರ ೧

ಕೋಲು ತಾಗಿದ ಹುಲ್ಲೆಯಂತೆ ಹೊರಳುತ್ತಿಹಳು
ಪಾಲುಗಾಣದೆ ಹಸಿದ ಹಂಸೆಯಂತರಸುವಳು
ಮೇಲನೊಂದರಿಯದೆ ವಿರಹದಿಂ ಬಳಲ್ದಿಹ ಚಕೋರಿಯಂತೊಪ್ಪಿರ್ಪಳು
ಆ ಲಲನೆಯುಳಬಳಿಗೆ ಇಂದು ಚಂದ್ರೋದಯದ
ಕಾಲಕ್ಕೈತಂದು ಸಂತಾಪಮಂ ತವಿಸಿ ನೀಂ
ಪಾಲಿಸುವುದೆಂದವಳು ಬೇಡಿಕೊಳಲಂತಾಗಲೆನುತೀತ ಮುದವಾಂತನು ೨

ಪುರಾಣದಲ್ಲಿ ಕುಸುಮಾಯುಧ ಪ್ರಥಮಪುಷ್ಪಿತ ಸಮಯದ ಸುದ್ದಿಯಿಲ್ಲ, ಪುಷ್ಪಮಾಲಬಂಧವೆಂಬ ಮನ್ಮಥ ಪರ್ವವಿಲ್ಲ, ತಳಿಯಲಾರ ಕುಲದ ತಂದೆ ತಾಯಿಗಳ ಹೆಸರಿಲ್ಲ. ಓರ್ವ ಅಂಗನೆ ನೇರವಾಗಿ ಬಂದು ಪರವೆ ನಿನ್ನಲ್ಲಿ ಅನುರಕ್ತಳಾಗಿದ್ದಾಳೆ, ನೀನು ಬಾ ಎಂದೊಡನೆ ಹಾಗೇ ಆಗಲಿ ಎಂದನಂತೆ ಸೌಂದರ. ಅಸಹಜ, ಹರಿಹರನಿಗೆ ಅಪಚಾರ.

ನಂಬಿಯಣ್ಣನ ಮದುವೆಯ ಸನ್ನಾಹವಿಲ್ಲ, ಪ್ರಮಾಣಪತ್ರವಿಲ್ಲ. ಎಲ್ಲವನ್ನೂ ಬಿಟ್ಟು ಕವಿ ಕಥೆಯನ್ನು ತೀರ ಮೊಟಕುಗೊಳಿಸಿ ನೀರಸಮಾಡಿದ್ದಾನೆ.

ಕುಲಶ್ಚರಿಯರ ಚರಿತ್ರೆಯಲ್ಲಿ ಅಜಗಜಾಂತರ ವ್ಯತ್ಯಾಸ; ಇಲ್ಲಿ ಕಥೆಯೇ ಬೇರೆಯಾಗಿದೆ.

ಎಡೆಗೆಳೆಯ ಪೆರುಮಾಳೆಯ ಕಥೆಯಲ್ಲಿ ರಾಜನೂ ಎಡೆಗೆಳೆಯ, ಇನ್ನೊಬ್ಬ ಭಕ್ತನೂ ಎಡೆಗೆಳೆಯ. ಆದರೆ ರಗಳೆಯಲ್ಲಿ ಕಳ್ಳತನಮಾಡುವ ಭಕ್ತನ ಹೆಸರು 'ದೃಢಭಕ್ತ' ಎಂದಿದೆ.

ಸಾಮವೇದಿಯ ಕಥೆಯಲ್ಲಿ ಶ್ವಪಚಯ್ಯನ ವಿಷಯವೇ ಇಲ್ಲ. ಕೆಲವೇ ಪದ್ಯಗಳಲ್ಲಿ ಕಥೆ ಮುಗಿದು ರುಚಿಯಿಲ್ಲದ್ದಾಗಿದೆ.

ವೇಳ್ಕೂಕತ (ಕೃತಾಂತ) ನ ಕಥೆ ರಗಳೆಯಂತೆ ಇಲ್ಲ; ಬಹಳ ವ್ಯತ್ಯಾಸವಿದೆ. ಆದರೆ ಈ ಕಥೆ ಕಥಾಗರ್ಭದ ಕಥೆಯಂತಿದೆ.

---

೧ ವೀರಭದ್ರಕವಿ ಅ. ಮೂ. ಪುರಾಣ ಸಂಧಿ ೨ ಪದ್ಯ ೫೧
ಅದೇ ,, ,, ,, ೫೨

ಕಲಿಕಂಬನ ಊರು ಪೆಣ್ಣಾಕಟ ಎಂದು ರಗಳೆ ಹೇಳಿದರೆ ಈ ಕವಿ ತಿರುವಾಲಿ ಎನ್ನುತ್ತಾನೆ. ರಗಳೆಯಲ್ಲಿ ಆತನ ಹೆಂಡತಿ ಧೀಮತಿ, ಷಟ್ಪದಿಯಲ್ಲಿ ಸುಮತಿಯಾಗಿದೆ. ಆಳಿನ ತಾಯಿ (ಶಿರಗಿ) ಮತ್ತು ಮಗ (ಮಲ್ಲ) ಇವರ ಹೆಸರು ರಗಳೆಯಲ್ಲಿಲ್ಲ.

ಅಪ್ಪೂತಿ ಕಥೆಯು ರಗಳೆಗಿಂತ ಬೇರೆಯಾಗಿದೆ. ಷಟ್ಪದಿಯಲ್ಲಿ ಮಗ ಸತ್ತ ವಿಷಯವಿಲ್ಲ; ಮೇಲಾಗಿ ಹಾಡುವವ ಅಪ್ಪೂತಿಯೇ. ಈ ಕಥೆಗೆ ಆಕರ ಯಾವುದೋ?

ಚಿರುಪುಲಿಯಾಂಡರ ಕಥೆ ಮೂಲಕ್ಕಿಂತ ಬಹಳ ವ್ಯತ್ಯಾಸಗೊಂಡಿದೆ.

ತಿರುಮೂಲರ ಕಥೆಯಲ್ಲಿಯೂ ಆಜಗಜಾಂತರ ವ್ಯತ್ಯಾಸವಾಗಿದೆ.

ಕುಲಚ್ಚಿರಿಯರ ಕಥೆ – ಮೂಲ ಕಥೆ ಎರಡಕ್ಕೂ ಸಂಬಂಧವೇ ಇಲ್ಲ.

ನಮಿನಂದಿಯ ಕಥೆಯಲ್ಲಿ ಮೂಲದಲ್ಲಿರುವ ಉತ್ತರಾರ್ಧದ ಕಥೆಯೇ ಇಲ್ಲ.

ತಿರುನೀಲನಕ್ಕರು ಕಥೆಯೂ ವ್ಯತ್ಯಾಸಗೊಂಡಿದೆ; ಉತ್ತರಾರ್ಧ ಷಟ್ಪದಿಯಲಿಲ್ಲ.

ಪಗಳ್ತೊಣೆಯಾಂಡಿಯ ಕಥೆ ಬಹಳ ಸಂಕ್ಷಿಪ್ತಗೊಂಡಿದೆ.

ತಿರುನೀಲಕಂಠಪಾಣ, ಕಲಿಕಾಮ, ಚಾರಮ, ಕುರುಂಬ, ಸೋಮಾಶಿಮಾರ, ನರಸಿಂಗಮೊನೆಯ, ಜಡೆಯ ನೈನಾರು, ಯಸ್ಯಜ್ಞಾನಿ – ಇವರ ಚರಿತ್ರೆಯನ್ನು ಕವಿ ಕೇವಲ ಹೆಸರು ಹೇಳಿ ಮುಗಿಸುತ್ತಾನೆ.

೫

ಹರಿಹರನ ರಗಳೆಗಳೆಷ್ಟು ? ಅದರಲ್ಲಿಯೂ ಆತ ಬರೆದ ಪುರಾತನರ ರಗಳೆಗಳು ಎಷ್ಟು ಎಂಬ ನಿರ್ಣಯಕ್ಕೆ ವೀರಭದ್ರಕವಿಯ ಅರುವತ್ತು ಮೂವರು ಪುರಾತನರ ಪುರಾಣ ಒಳ್ಳೆಯ ಸಹಾಯಕಾರಿಯಾಗಬಹುದೆಂದು ಡಿ. ಎಲ್. ನರಸಿಂಹಾಚಾರ್, ಡಾ|| ಆರ್. ಸಿ. ಹಿರೇಮಠ ಮತ್ತು ಡಾ|| ಹಿರೇಮಲ್ಲೂರು ಈಶ್ವರನ್ ಮೊದಲಾದವರು ಹೇಳಿದ್ದಾರೆ.

"ಷಟ್ಪದಿಯಲ್ಲಿ ರಚಿತವಾಗಿರುವ 'ಅರುವತ್ತು ಮೂವರ ಚರಿತ್ರೆ' ಎಂಬ ವೀರಭದ್ರ ಕವಿಕೃತವಾದ ಗ್ರಂಥವೂ ಸಾಂಗತ್ಯದಲ್ಲಿ ಶಿವಯೋಗಿ ಸೋಮೇಶನಿಂದ ರಚಿತವಾದ 'ಅರುವತ್ತು ಮೂವರ ಸಾಂಗತ್ಯ' ವೂ ಪ್ರಕೃತ ದೃಷ್ಟಿಯಿಂದ ಅಪಲೋಕನಾರ್ಹವಾದುವು" ಎಂದು ಡಿ. ಎಲ್. ನರಸಿಂಹಾಚಾರ್ ಹೇಳಿದ್ದಾರೆ.೧

---

೧ ಎಚ್. ದೇವೀರಪ್ಪ : ಶರಣಚರಿತಮಾನಸಂ : ಮುನ್ನುಡಿ ಪುಟ ೭

" ಹರಿಹರನು ಪುರಾತನರ ರಘಟಾ ಪ್ರಬಂಧವೊಂದನ್ನು ರಚಿಸಿದನೆಂದೂ ಅದನ್ನು ಆಧರಿಸಿ ವೀರಭದ್ರ ಕವಿಯು ತನ್ನ ಅರುವತ್ತು ಮೂವರು ಪುರಾತನರ ಚಾರಿತ್ರ್ಯವನ್ನು ರಚಿಸಿರುವನೆಂದೂ ಹೇಳಿಕೊಳ್ಳುತ್ತಾನೆ. ಇದರಿಂದ ವೀರಭದ್ರಕವಿ ೧೬ನೆಯ ಶತಮಾನದಲ್ಲಿ ಹರಿಹರನ ೬೩ ಪುರಾತನರ ರಘಟಾ ಪ್ರಬಂಧವನ್ನು ನೋಡಿದ್ದನೆಂದು ಅರ್ಥವಾಗುತ್ತದೆ. ಈ ಪ್ರಬಂಧ ಈ ಚಾರಿತ್ರ್ಯದಂತೆ ೬೩ ಪುರಾತನರ ರಗಳೆಗಳನ್ನು ಒಳಗೊಂಡಿರಬೇಕು " ಎಂದು ಡಾ|| ಆರ್. ಸಿ. ಹಿರೇಮಠರು ಹೇಳುತ್ತಾರೆ. ೧

" ವೀರಭದ್ರ ಕವಿಯು ೬೩ ಪುರಾತನರ ಹೆಸರನ್ನು ಸರಿಯಾಗಿ ಉಲ್ಲೇಖಿಸಿರುವನು. ಹರಿಹರ ವಿರಚಿತ ರಗಳೆಗಳನ್ನೂ ಈತನ ಕೃತಿಗಳನ್ನೂ ಸರಿಯಾಗಿ ಹೋಲಿಸಿ ನೋಡುವುದರಿಂದ ವೀರಭದ್ರಕವಿಗೆ ಹರಿಹರನ ರಗಳೆಗಳನ್ನು ಬಿಟ್ಟರೆ ಮತ್ತಿನ್ನಾವ ಕವಿಗಳ ಪುರಾತನರ ಕೃತಿಗಳ ಪರಿಚಯವಿದ್ದಂತೆ ಕಂಡುಬರುವದಿಲ್ಲ. ವೀರಭದ್ರ ಕವಿಯು ರಗಳೆಗಳನ್ನು ಧಾರಾಳವಾಗಿ ತನ್ನ ಕೃತಿರಚನೆಯಲ್ಲಿ ಬಳಸಿಕೊಂಡಿದ್ದಾನೆ. ಈ ಕವಿಗಳಿಬ್ಬರ ಕಾವ್ಯ ರಚನೆಯಲ್ಲಿಯೂ ಭಾವ ಭಾಷೆಯಲ್ಲಿಯೂ ಕಂಡುಬರುವ ಸಾಮ್ಯದ ಆಧಾರದ ಮೇಲಿಂದ ಹರಿಹರನ ರಗಳೆಗಳ ಕರ್ತೃತ್ವವನ್ನು ನಿರ್ದೇಶಿಸಲು ಬರುತ್ತದೆ.......".೨ ಎಂಬುದು ಡಾ|| ಈಶ್ವರನ್ನರ ಅಭಿಪ್ರಾಯ.

ಡಿ. ಎಲ್. ನರಸಿಂಹಾಚಾರ್ಯರು ವೀರಭದ್ರಕವಿಯ ಕಾವ್ಯ ನೋಡಿರದ ಕಾರಣ ಅವಲೋಕನಾರ್ಹವಾದುದು ಎಂದು ಹೇಳಿದ್ದಾರೆ; ಖಚಿತವಾಗಿ ಏನೂ ಹೇಳಿಲ್ಲ. ಡಾ|| ಆರ್. ಸಿ. ಹಿರೇಮಠರು ವೀರಭದ್ರಕವಿಯ ಕಾವ್ಯ ನೋಡಿದ್ದಾರೆ; ಆದರೆ ಪೂರ್ಣ ಅವಲೋಕಿಸಿಲ್ಲ. ಆದ್ದರಿಂದ ಅವರ ಅಭಿಪ್ರಾಯವೂ ಖಚಿತವಿಲ್ಲದುದಾಗಿದೆ. ಆದರೆ ಡಾ|| ಈಶ್ವರನ್ನರ ಮಾತು ಹೀಗಲ್ಲ. ಅವರು ವೀರಭದ್ರ ಕವಿಯ ಸಮಗ್ರ ಕಾವ್ಯ ನೋಡಿದ್ದಾರೆ; ಹರಿಹರನ ರಗಳೆಗಳು ಮತ್ತು ವೀರಭದ್ರ ಕವಿಯ ಕಾವ್ಯ ಇವುಗಳ ಹೋಲಿಕೆಗಾಗಿ ಉದಾಹರಣೆಗಳನ್ನು ಕೊಟ್ಟಿದ್ದಾರೆ-೩ ಉದಾಹರಣೆಗಳ ಬಳಿಕ " ಹೀಗೆ ಹರಿಹರಕೃತ ರಗಳೆಗಳನ್ನು ಕಂಡು ಹಿಡಿವ ಉದ್ದಿಶ್ಯಕ್ಕೆ ವೀರಭದ್ರನ ಕಾವ್ಯವು ಬಹಳ ಸಹಾಯ್ಯಕಾರಿಯಾಗುತ್ತದೆ " ಎನ್ನುತ್ತಾರೆ. ೪ ಈ ಮಾತನ್ನು ಒಪ್ಪಬಹುದು. ಆದರೆ " ವೀರಭದ್ರ ಕವಿಯು ೬೩ ಪುರಾತನರ ಹೆಸರನ್ನು ಸರಿಯಾಗಿ ಉಲ್ಲೇಖಿಸಿರುವನು " ಎಂಬ ಅವರ ಮೇಲಿನ ಮಾತನ್ನು ನಂಬಲಿಕ್ಕಾಗುವುದಿಲ್ಲ; ಅದು ಸತ್ಯವೂ ಅಲ್ಲ.

---

೧ ಡಾ|| ಆರ್. ಸಿ. ಹಿರೇಮಠ : ಹರಿಹರದೇವಕೃತ ಪುರಾತನರ ರಗಳೆಗಳು ಪುಟ xxvi

೨ ಡಾ|| ಹಿರೇಮಲ್ಲೂರು ಈಶ್ವರನ್ : ಹರಿಹರನ ಕೃತಿಗಳು–ಒಂದು ಸಂಖ್ಯಾ ನಿರ್ಣಯ ಪುಟ ೫೧೫

೩ ಅದೇ ಪುಟ ೫೧೬, ೫೧೭, ೫೧೮, ೫೧೯ ಮತ್ತು ೫೨೦

೪ ಅದೇ ಪುಟ ೫೨೧

ವೀರಭದ್ರಕವಿಯ ಕಾವ್ಯದಲ್ಲಿರುವ ಹೆಸರುಗಳನ್ನು ನೋಡಿದರೆ ದಿಗ್ಭ್ರಮೆಯಾಗುತ್ತದೆ. ಆತನಿಗೆ ಪುರಾತನರು ಯಾರು ಯಾರು ಎಂಬುದೇ ಸರಿಯಾಗಿ ತಿಳಿದಿಲ್ಲ. ಪುರಾತನರ ಬಗ್ಗೆ ಏನೂ ಅರಿಯದವರು ಆತನ ಕಾವ್ಯ ಓದಿ ಇವರೆಲ್ಲರೂ ಪುರಾತನರು ಎಂದು ನಂಬಿದರೆ, ಆ ಬಳಿಕ ನಂಬಿಗೆಗೆ ಇಂಬಿಲ್ಲದಂತಾಗುತ್ತದೆ. ಆತ ಹರಿಹರನನ್ನು ಎಷ್ಟರಮಟ್ಟಿಗೆ ಅನುಕರಿಸಿದ್ದಾನೆ ಎಂಬುದು ಕಥೆಯ ದೃಷ್ಟಿಯಿಂದ ಈಗಾಗಲೇ ಹಿಂದೆ ಮಾಡಿದ ವಿವೇಚನೆಯಿಂದ ಕಂಡುಬರುತ್ತದೆ. ಸಂಖ್ಯಾದೃಷ್ಟಿಯಿಂದ ಹರಿಹರನ ರಗಳೆಗಳೆಷ್ಟು ಯಾವುವು ಎನ್ನುವುದಕ್ಕೆ ವೀರಭದ್ರಕವಿಯಿಂದ ತುಸುಮಟ್ಟಿಗೆ ಸಹಾಯವಾದೀತೇ ಹೊರತು ಪುರಾತನರು ಯಾರು ಎಂಬುದು ಆತನಿಂದ ತಿಳಿಯುವುದಿಲ್ಲ. ನಮಗೆ ಅಲ್ಲಿ ದಾರಿ ತಪ್ಪುತ್ತದೆ. "ವೀರಭದ್ರ ಕವಿ ೬೩ ಪುರಾತನರ ಹೆಸರನ್ನು ಸರಿಯಾಗಿ ಉಲ್ಲೇಖಿಸಿರುವನು" ಎಂಬ ಡಾ॥ ಈಶ್ವರನ್ನರ ಮಾತು ಮೇಲುಮೇಲಿನದು; ಅವರು ಸಮಗ್ರಕಾವ್ಯವನ್ನು ಪರಿಶೀಲಿಸಿಲ್ಲ ಎನ್ನಿಸುತ್ತದೆ.

ಡಾ॥ ಈಶ್ವರನ್ನನವರು ನಮ್ಮ ಗ್ರಂಥದಲ್ಲಿ ಕೊಟ್ಟ ಪುರಾತನರ ಹೆಸರಿನ ಪಟ್ಟಿಯೊಂದಿಗೆ ವೀರಭದ್ರ ಕವಿ ಹೇಳುವ ಪುರಾತನರ ಹೆಸರಿನ ಪಟ್ಟಿಯನ್ನು ಹೋಲಿಸಿದರೆ ಬಹಳಷ್ಟು ವ್ಯತ್ಯಾಸ ಕಂಡು ಬರುತ್ತದೆ.

ಅಯ್ಯಡಿ, ಕಲಿನಾಯನಾರ, ನಿಡುಮಾರದೇವ, ಪಾಂಡ್ಯಮಹಾದೇವಿ, ದಂಡಿಭಕ್ತ, ಶಕ್ತಿನಾಯನಾರ್, ಸಿರಿಯಾಳ–ಡಾ॥ ಈಶ್ವರನ್ನರ ಪಟ್ಟಿಯಲ್ಲಿರುವ ಈ ಪುರಾತನರ ಚರಿತ್ರೆ ವೀರಭದ್ರ ಕವಿಯ ಕಾವ್ಯದಲ್ಲಿಲ್ಲ. ವೀರಭದ್ರ ಕವಿ ಹೇಳುವ ಚಿರುಪುಲಿಯಾಂಡನ ಹೆಸರು ಡಾ॥ ಈಶ್ವರನ್ನರು ಹೇಳುವ ಪಟ್ಟಿಯಲ್ಲಿಲ್ಲ; ಈ ಹೆಸರು ದೇವೀರಪ್ಪನವರ ಶಿವಶರಣ ಸಂಪುಟದಲ್ಲಿದೆ. ನಾಟ್ಯನಮಿತಾಂಡಿಯ ಚರಿತ್ರೆಯು ವೀರಭದ್ರನಲ್ಲಿದೆ; ಈ ಹೆಸರು ಡಾ॥ ಈಶ್ವರನ್ನರವರ ಪಟ್ಟಿಯಲ್ಲಿಲ್ಲ. ಶ್ರೀ ದೇವೀರಪ್ಪನವರ ಸಂಪಾದಿತ ಗ್ರಂಥಗಳಲ್ಲಿಯೂ ಇಲ್ಲ; ಡಾ॥ ಆರ್. ಸಿ. ಹಿರೇಮಠರು ಸಂಪಾದಿಸಿದ ಹರಿಹರನ ಪುರಾತನರ ರಗಳೆಗಳಲ್ಲಿಯೂ ಇಲ್ಲ. ಡಾ॥ ಹಿರೇಮಠರ ಗ್ರಂಥ ಅಪೂರ್ಣವಿದೆ; ಇದರಲ್ಲಿ ಎಲ್ಲ ಪುರಾತನರು ಒಳಗೊಂಡಿಲ್ಲ.

ಇನ್ನೊಂದು ಮೋಜಿನ ವಿಷಯವೆಂದರೆ ಕವಿ ವೀರಭದ್ರ ಪುರಾತನರು ಅಲ್ಲದವರನ್ನು ತನ್ನ ಕಾವ್ಯದಲ್ಲಿ ಸೇರಿಸಿಕೊಂಡಿದ್ದಾನೆ. ಉದ್ಭಟ, ಹಲಾಯುಧ, ಮಾದಾರ ಚೆನ್ನಯ್ಯ, ಕೆಂಭಾವಿ ಭೋಗಣ್ಣ, ಮಳೆಯರಾಜ, ಸಾಮವೇದಿ – ಈ ನೂತನ ಪುರಾತನರು ವೀರಭದ್ರ ಕವಿಯ ಪುರಾತನರ ಪುರಾಣದಲ್ಲಿ ಸೇರ್ಪಡೆಯಾಗಿದ್ದಾರೆ.

'ಕಲಿಗಣನಾಥ' ಎಂಬ ಒಬ್ಬ ಪುರಾತನನ ಕಥೆ ವೀರಭದ್ರ ಹೇಳುತ್ತಾನೆ. ಈತ ಪುರಾತನನೋ ನೂತನನೋ ತಿಳಿಯದು. ಈತನ ಹೆಸರು ಡಾ|| ಈಶ್ವರನ್ನರ ಪಟ್ಟಿಯಲ್ಲಿಲ್ಲ ಮತ್ತು ಡಾ|| ಹಿರೇಮಠರು ಮತ್ತು ಎಚ್. ದೇವೀರಪ್ಪನವರ ಸಂಪಾದಿತ ಗ್ರಂಥಗಳಲ್ಲಿಯೂ ಇಲ್ಲ.

ಇನ್ನೂ ಒಂದು ಮೋಜಿನ ಸಂಗತಿ ಎಂದರೆ – ಪ ರ ವೆ ನಾ ಚಿ ಯ ನ್ನು ವೀರಭದ್ರ ಕವಿ ಪುರಾತನರಲ್ಲಿ ಸೇರಿಸಿದ್ದಾನೆ. ಹಿಂದೆ ಯಾರೂ ಆಕೆಯನ್ನು ಪುರಾತನರಲ್ಲಿ ಸೇರಿಸಿಲ್ಲ. ಹಿಂದಿನವರ ಕಾವ್ಯಗಳಲ್ಲಿ ಯಸ್ಯಜ್ಞಾನಿ, ಜಡೆಯನಾಯನಾರು ಇವರಿಬ್ಬರು ಒಂದೇ ಸಂಖ್ಯೆ ಎಂದು ಪರಿಗಣಿತವಾಗಿದೆ; ಆದರೆ ವೀರಭದ್ರ ಇವರನ್ನು ಇಬ್ಬರೆಂದು ಪರಿಗಣಿಸುತ್ತಾನೆ.

ಮೇಲಿನ ಎಲ್ಲ ಕಲಸುಮೇಲೋಗರ ನೋಡಿದರೆ ವೀರಭದ್ರ ಕವಿಗೆ ೬೩ ಪುರಾತನರು ಯಾರು ಎಂಬ ಸರಿಯಾದ ಕಲ್ಪನೆ ಇರಲಿಲ್ಲವೆಂದು ತಿಳಿದುಬರುತ್ತದೆ.

ಆತ ಅಯ್ಯಡಿ, ಕಲಿಯನಾಯನಾರು, ನಿಡುಮಾರದೇವ, ಪಾಂಡ್ಯ ಮಹಾದೇವಿ, ದಂಡಿಭಕ್ತ, ಶಕ್ತಿನಾಯನಾರ್, ಸಿರಿಯಾಳ – ಈ ಏಳು ಪುರಾತನರನ್ನು ಕೈಬಿಟ್ಟಿದ್ದಾನೆ. ಉದ್ಭಟ, ಕಲಿಗಣನಾಥ, ಹಲಾಯುಧ, ಮಾದಾರ ಚೆನ್ನಯ್ಯ, ಕೆಂಭಾವಿ ಭೋಗಣ್ಣ, ಮಳೆಯರಾಜ, ಸಾಮವೇದಿ, ನಾಟ್ಯನಮಿತಾಂಡಿ, ಯಸ್ಯಜ್ಞಾನಿ, ಪರವೆನಾಚಿ – ಈ ಹತ್ತು ಜನ ಪುರಾತನರಲ್ಲದವರನ್ನು ಪುರಾತನರಲ್ಲಿ ಸೇರಿಸಿದ್ದಾನೆ. ಒಟ್ಟು ಸಂಖ್ಯೆ ೬೩ ಮಾಡಿದ್ದಾನೆ.

ಅಲ್ಲಲ್ಲಿ ಕಥೆಗಳಲ್ಲಿ ಬರುವ ಬದಲಾವಣೆ, ಊರ ಹೆಸರು, ವ್ಯಕ್ತಿಗಳ ಹೆಸರುಗಳ ಬದಲಾವಣೆ, ನಾಟ್ಯನಮಿತಾಂಡಿ ಮುಂತಾದವರ ಕಥೆಗಳು – ಇವುಗಳ ಅವಲೋಕನದಿಂದ ವೀರಭದ್ರಕವಿಗೆ ಹರಿಹರನೊಂದೇ ಆಧಾರವಲ್ಲ; ಆತ ಬೇರೆ ಮತ್ತೆ ಯಾರದೋ ಕಾವ್ಯಗಳನ್ನು ನೋಡಿರಬೇಕು ಎನಿಸುತ್ತದೆ. ಹರಿಹರನ ರಘಟಾ ಪ್ರಬಂಧವೇ ನನಗೆ ಆಧಾರವೆಂದು ಕಾವ್ಯದ ಮೊದಲಿಗೆ ಹೇಳಿಕೊಂಡಿದ್ದಕ್ಕೆ, ಆತನಿಗೆ ದೊರಕಿದ ರಘಟಾ ಪ್ರಬಂಧದ ಕಟ್ಟಿನಲ್ಲಿ ಹರಿಹರನವು ಅಲ್ಲದ ರಗಳೆಗಳು ಸೇರಿರಬೇಕು ಎಂದು ಊಹಿಸಬಹುದು.

ಒಟ್ಟಿನಲ್ಲಿ, ವೀರಭದ್ರಕವಿ ಹರಿಹರನನ್ನು ಅನುಕರಿಸಿದ್ದಾನೆ; ಆದರೆ ಸಂಪೂರ್ಣ ಅಲ್ಲ. ಹರಿಹರನ ರಗಳೆಗಳು ಯಾವುವು ಎಂದು ಕಂಡುಹಿಡಿಯಲು ಈತನಿಂದ ತುಸುಮಟ್ಟಿಗೆ ಸಹಾಯ ಆಗುವುದು; ಆದರೆ ಹರಿಹರನು ಬರೆದ ಪುರಾತನರ ಸಂಖ್ಯಾನಿರ್ಣಯಕ್ಕೆ ಈತನಿಂದ ಏನೂ ಸಹಾಯವಾಗುವುದಿಲ್ಲ. ಈತನಿಗೆ ಪುರಾತನರು ಯಾರು ಎಂಬುದು ಖಚಿತವಾಗಿ ಗೊತ್ತಿರಲಿಲ್ಲ.

—ಶಾಂತರಸ

ಶ್ರೀ ಗುರು ಬಸವಲಿಂಗಾಯನಮಃ

## ಸಂಧಿ : ೧

**ಸೂಚನೆ :**

ಶಿವನೊಲುಮೆಯಿಂ ಪ್ರಬಲರೆನಿಸಿ ಶಿವಮಯರೆನಿಸಿ
ಭುವನದೊಳಗವತರಿಸಿ ಮಹಿಮೆಯಂ ನಟಿಸಿ ತ
ಚ್ಛಿವನಂ ಪೊಗಳ್ಕೆವೆತ್ತರುವತ್ತು ಮುವ್ವರ್ಪುರಾತನರ ನಾಂ ವರ್ಣಿಪೆಂ

ಶ್ರೀಮದಗಜಾಮುಖಾಂಬುಜ ಭೃಂಗ ಭೃಂಗಿ ವೃಷ
ಭಾಮಲ ಶರಭ ಗಣ ಕುಲೋತ್ತುಂಗ ತುಂಗ ಗಿರಿ
ಧಾಮಾಗಮತುರಂಗರಂಗದಮರ ತರಂಗಿಣೀಧೃತ ಜಟಾ ಶೋಭಿತ
ತಾಮಸಾನ್ವಿತ ನಿಶಾಚರ ಸಂಘ ಸಂಘಾತ
ಕಾಮ ಕಾಲೋನ್ಮದ ವಿಭಂಗ ಭಂಗವಿದೂರ
ಸಾಮರ್ಥ್ಯಯುತ ಶಂಭುಲಿಂಗ ಸದಯಾಪಾಂಗನೊಲಿದು ರಕ್ಷಿಸಲೆಮ್ಮನು ೧

ಖಂಜನೀಸ್ತ್ರೀಕದಂಬಾನತ ವಿನೋದಿನೀ
ಖಂಜರೀಟಾಕ್ಷಿನೀ ಶಾಟಮದಭೇದಿನೀ
ಮಂಜುಳ ಮಹಾ ಮಂತ್ರ ಸದ್ರೂಪಿಣೀ ಜರಾಮರ ದುಃಖ ನಿರ್ಘಾತಿನೀ
ಅಂಜನಾಚಲತಮಾಲಭೃಂಗಭಾಸಿನೀ
ಭಂಜನಾಘೌಘ ಸನ್ಮುನಿ ಹೃನ್ನಿವಾಸಿನೀ
ಕಂಜಾರಿಧಾರಿಣೀ ಶ್ರೀಶಿವಾರ್ಧಾಂಗಿನೀ ಕಾತ್ಯಾಯನೀ ನಮಸ್ತೇ ೨

ಶ್ರೀಗುರುವರಂ ಸುಜನ ಸಂರಕ್ಷಣಂ ದಯಾ
ಸಾಗರಂ ಶಿಷ್ಯ ಸಮುದಯ ದಿವ್ಯ ಸುರಕುಜಂ
ಯೋಗಿಕುಲ ಹೃನ್ನಿವಾಸಂ ವಾಸವಾದ್ಯಮರ ವಿನಮಿತ ೧ಪಾದಾರವಿಂದಂ
ಭೂಗಗನ ದಿಗ್ಭರಿತ ಕೀರ್ತಿಪ್ರಭಾಮಯಂ
ಈಗಳೆನ್ನಯ ಮನೋವಾಕ್ಕಾಯ ಕಂಗಳಿಗೆ
ರಾಗದಿಂ ಮಂಗಳಂ ಸರಸಮುಂ ಸೌಖ್ಯಮುಮನಿತ್ತು ಸಲಹುಗೆ ಸಂತತಂ ೩

ಶರಣು ಶಿವ ಶಿವ ಸುಖಾನಂ೨ದಿ ನಂದೀಶಂಗೆ
ಶರಣು ಶಿವಪದಕಮಲಭೃಂಗ ಭೃಂಗೀಶಂಗೆ
ಶರಣು ಶಿವನಿಂದಕಾವಳಿ ಮದಧ್ವಂಸ ಘನವೀರ ವೀರೇಶ್ವರಂಗೆ
ಶರಣು ಭವಶರಧಿ[1]ತಾರಕ ತಾರಕಾರಿಂಗೆ
ಶರಣು ಶಾಶ್ವತ ವಿಜಿತ ವಿಘ್ನ ವಿಘ್ನೇಶಂಗೆ
ಶರಣೆನುತ ಸೆರಗೊಡ್ಡುತಿಷ್ಟಾರ್ಥಮಂ ಬೇಡುತಿವರ ನಾಂ ನುತಿಗೈವೆಸು ೪

ಕಾಯವಿಡಿದಾಕಾಯ ಗುಣವಿಲ್ಲ ನಿರ್ದೇಹ
ದಾಯ೩ತದೊಳಿರ್ದು ಶೂನ್ಯತೆಯೈದಲಿಲ್ಲ ಮ
ತ್ತೀಯತೀಂದ್ರ೪ನ೪ ಲೀಲೆ ಪೊಸತೆನುತ್ತಸಮ ಗುರು ಬಸವರಾಜೇಂದ್ರನಿಂದೆ
ಸ್ತೂಯಮಾನಂ ಪಡೆದು ಪರತರ ಗಣಾಳಿಗೆ ಸ
ಹಾಯನಾಗಿರ್ದ ಗುರುರಾಯ ಪೊರೆಯೆನ್ನುವಂ
ಮಾಯಾ ಮದೋತ್ಪಾಟನ ಪ್ರಭುವೆ ಮತ್ಪ್ರಭುವೆ ನಿಖಿಲ ಲೋಕೈಕ ವಿಭುವೆ ೫

---

೧ ಪಾ (ಹ)    ೨ ದ (ಹ)    ೩ + ದಾಯ (ಹ)    ೪ X (ಹ)

ಎನ್ನಯ ಮನೋಂಬುಜ ಸುಶಯ್ಯ ಬವಸಯ್ಯನಂ
ಎನ್ನಭಿಮತಾರ್ಥವೀವರಸ ಬಸವರಸನಂ
ಎನ್ನ ದುರಿತಗಳ ಕಳೆವೀಶ ಬಸವೇಶನಂ ಪರಮ ಮತ್ಪ್ರಾಣೇಶನಂ
ಎನ್ನ ಮಾನಾಭಿಮಾನಾರ್ಯ ಬಸವಾರ್ಯನಂ
ಎನ್ನ ಹರ್ಷಾಂಬುನಿಧಿ ಚಂದ್ರ ಬಸವೇಂದ್ರನಂ
ಎನ್ನ ಸೌಭಾಗ್ಯವೆನಿಪಣ್ಣ ಬಸವಣ್ಣನಂ ಪೊಗಳುತಾಂ ಕೃತಿವೇಳ್ವೆನು ೬

ಎನ್ನಾಳ್ವರೆನ್ನೊಡೆಯರೆನ್ನರಸುಗಳ್ಮತ್ತೆ
ನನ್ನಿಯಿಂದರಿವೊಡೆನ್ನಭಿಮಾನಿಗಳು ರಕ್ಷಿ
ಪುನ್ನತಿಯಲೆನ್ನ ಮಾತಾಪಿತರ್ತ್ತವೆ ನೋಡಲೆನ್ನ ಸರಸದ ಬಂಧುಗಳ್
ಎನ್ನ ಸಂತಸವಾರ್ಧಿಗಿಂದುಸ್ವರೂಪಿಗಳ್
ಎನ್ನ ಸಹಜಾನಂದ ಸುಖದ ಗುರುಗಳ್ ಶಿವನಿ
ಗಿನ್ನು ಬೇರಿಲ್ಲವೆನಿಪರುವತ್ತು ಮುವ್ವರ್ಪ್ಪುರಾತನರ ನಾಂ ಕೀರ್ತಿಪೆಂ ೭

ಆರ್ಯರಂ ಶಿವಮತಾಚಾರ್ಯರಂ ಕುಮತಜಿತ
ಶೌರ್ಯರಂ ಶರಧಿ ಗಾಂಭೀರ್ಯರಂ ಕಲ್ಯಾಣ
ಕಾರ್ಯರಂ ಕವಿಜನೋದಾರ್ಯರಂ ಭಕ್ತಿ ಸೌಂದರ್ಯರಂ ವಿರತಿ ಲೀಲಾ
ಚಾರ್ಯರಂ ಶಂಭು ಕೈಂಕರ್ಯರಂ ಮೇರು ಸಮ
ಧೈರ್ಯರಂ ಭಕ್ತತತಿವರ್ಯರಂ ವಾಕ್ಯ ಚಾ
ತುರ್ಯರಂ ಹಂಪೆಯರಸನ ಮಚ್ಚಿಸಿದ ಹರಿಹರಾಚಾರ್ಯರಂ ಬಲಗೊಂಬೆನು ೮

ಶರಧಿ ಮಥನದಿ ಪುಟ್ಟಿದಮೃತಮಂ ಸವಿದು ಜರೆ
ಮರಣಮಂ ಗೆಲಿದು ಸುಖಮಯರೆನಿಸಿದರ್ಸುರರು
ಧರೆಯೊಳು ತವಾನನಾಬ್ಧಿಯೊಳು ನಿರ್ಮಥನದಿಂ ಕವಿತೆಯೆಂಬಮೃತಮುದಿಸಿ
ನೆರೆಪುಣ್ಯಜೀವಿಯೊಳ್ಬೆರೆಸಿ ತಜ್ಜೀವಮಂ
ಪರಮನೆಂದೆನಿಸಿ ಪರಮಹಾಮಂದೆಂಬ ಸು
ಸ್ಥಿರತೆಯಾನಂದದೊಳೇಕವಾದ ಸುಖವನೆನಗೀವುದೈ ನಿಜಗುಣವಿಭೋ ೯

ಉದಯಾದ್ರಿಯಂತೆ ನಾಳೀಕಸಂಭವನಂತೆ
ಸದರುಣ ಕಲಾಮಯಂ ಘನದಂತೆ ಕವಿತೆಯಂ
ತಧಿಕ ವೈವರ್ಣಾನ್ವಿತಂ ಚಂದ್ರದರ್ಶನ ವಗನಂಧಿಯಂತೆ ನಳಿನದಂತೆ
ವಿದಿತ ವರ್ಧನ ರಸಾಂಚಿತವೆನಿಸಿ ಭೂಮಂಡ
ಲದೊಳಮಿತ ಚಾತುರ್ಯವೆನಿಸಿ ಕರ್ನಾಟಜನ
ಪದವೆಸೆದಿರಲ್ಕದರೊಳತಿ ಪೆಸರ್ವಡೆದು ಜಾಲೇಂದ್ರಪುರವೆಂದಿರ್ದುದು ೧೦

ಆ ಪುರದೊಳಿಹ ಪಠನಶಾಲಾಮಠಾಧ್ಯಕ್ಷ
ರಾ ಪುಣ್ಯಪುಂಜರು ಮಹಾದಯಾಪೂರ್ಣರು
ಶ್ರೀಪರಮಲಿಂಗನಿಷ್ಠಾಪರರ್ನಿತರ್ವಿಹಿತ ವೇದಾಂತ ಪೂಜ್ಯರು
ಪಾಪಕಾರ್ಯಧ್ವಂಸರಮಿತ ಸುಜನಸ್ತುತ್ಯ
ರಾಪದ ವಿವರ್ಜಿತರು ರಾಜಯೋಗಾನಂದ
ವ್ಯಾಪಕರುಮೆನಿಸಿ ಘನವೃಷಭಾರ್ಯರೆನಿಸುವಭಿಧಾನದಿಂದಿಂತಿರ್ಪರು ೧೧

ಅವರ ತನುಸಂಜಾತನೆನಿಸಿ ವಸುಧಾತಲದಿ
ಶಿವನ ಸಾಕಾರರಹ ಸಕಲ ಮಾಹೇಶ್ವರ
ಪ್ರವಿಮಲ ಪದಾಬ್ಜಂಗಳೊಳಗೊಪ್ಪುತಿರುತಿರ್ದ ಮಕರಂದ ರೇಣುವೆನಿಸಿ
ಸುವಿವೇಕ ಸುಖಿಯೆನಿಸಿ ಸಾಧು ಕಿಂಕರನೆನಿಸಿ
ನವವಿಧ ಕರ್ಣಾಟ ಕವಿತಾ ಚತುರನೆನಿಸಿ
ತವೆವೀರಭದ್ರಾಖ್ಯನೆನಿಸಿ ಸಂತಸದೊಳಿಂತೊಪ್ಪುತ್ತಲಲ್ಲಿರಲ್ಕೆ ೧೨

ನಾಗಭೂಷಣನೆಂಬ ಶಿವಯೋಗಿ ಸಂಚರಿಸು
ತಾಗಳುಂ ಬಂದು ಎಲೆ ವೀರಭದ್ರಾಖ್ಯ ಕೇ
ಳೀಗಳರುವತ್ತು ಮುವ್ವರ್ಪುರಾತನರ ಚರಿತೆಯು ವರ್ಣಕದೊಳಿಲ್ಲವು
ರಾಗದಿಂದೀ ಪ್ರಬಂಧವನು ಕೇಳ್ವರ್ಗೆ ಸೊಗ
ಸಾಗುವಂತತಿ ಮನೋಹರವಪ್ಪ ತೆರದಿ ನೀಂ
ಬೇಗನೆಸಗಲ್ನಿನ್ನ ಸುಕೃತಕೆಣೆಯಿಲ್ಲ ಮಗನೇ ರಚಿಸಯಿಸೈ ಎನಲ್ಕೇ ೧೩

---

೧ ನಿ(ಹ) ೨ ರ್ಪು (ಹ) ೩ ತ ಚಾತುರ್ಕ (ಹ) ೪ ನೆನೆ (ಹ) ೫ X (ಹ)

ಪ್ರಾಜ್ಞ ಸನ್ಮಾಗಭೂಷಣ ಮಹಾಯೋಗೀಂದ್ರ
ನಾಜ್ಞಾಪ್ರಸಾದದಿಂದಂ ಹರಿಹರಾಚಾರ್ಯ
ಸುಜ್ಞಾನದಿಂದೊರೆದ ರಘಟಾಪ್ರಬಂಧದ ಸುವಾಕ್ಯ ಪ್ರಸಾದದಿಂದಂ
೧ಆಜ್ಞಾ೧ರಹಿತ ಕೃತಿಪರ್ಪುರಾತನರಿತ್ತ
ವಿಘ್ನ ಕಾರುಣ್ಯ ಪ್ರಸಾದದಿಂದೈದೆ ಭಾ
ವಜ್ಞರುಂ ತಲೆದೂಗುವಂತೆ ರಚಿಯಿಸಿದು ಪುರಾತನರ ಪೌರಾಣಮಂ ೧೪

ಶ್ರೀ ಭವ್ಯಮೂರ್ತಿ ಶಿವನೆ ದೈವ ನಿಜವೆಂದು
ದೇ ಭಾವವೈದೆ ವ್ರತಮಂ ಬಿಡದೆ ನಡೆಯಿಸು
ತ್ತಾ ಭೇಶಮೌಲಿಯುಂ ಮೆಚ್ಚಿಸುವ ಮಹಿಮಾ ವಿಚಿತ್ರವೇ ಚಿತ್ರಂ ಕಣಾ
೨ಆ೨ ಭವಸೊಳಡಕವಾಗುವುದೇ ಚಮತ್ಕಾರ
ವೀ ಭಾವವೀ ಚಿತ್ರವೀ ಚಮತ್ಕಾರದಿಂ
ಶೋಭಿಸುವ ಶರಣರ ಕಥಾಲಹರಿಯಿದುಮಿದಂ ಮೆಚ್ಚದವರಾರಿಳೆಯೊಳು ೧೫

ನಿಂಕಿದಿಕಿಸಲ್ಕೊಲ್ಲ ದುರ್ದೋಷಂಗಳೀ ಕೃತಿಗೆ
ಪೊಂದಿಸಲ್ಕೊಲ್ಲ ಮತ್ಸರವೆಂಬ ಕಂಕಣಂ
ಬಂಧಿಸಲ್ಕೊಲ್ಲ ದುಷ್ಕವಿಯೆಂಬ ದಕ್ಷ ಪ್ರಜಾನಾಥನೇಕೆಂದೆನೆ
ಸುಂದರ ಶುಭಾಂಗ ಸುರನುತ ಶಂಕರ ಕೃಪಾ
ಬಂಧುರ ಮಹಾ ವೀರಭದ್ರ ಕವಿ ರಚಿತ ಪ್ರ
ಬಂಧಮೆಂದರಿದು ಮೌನಂದಳೆದನೆನಲು ಕವಿತೆಯ ೪ಪೆ೪ರ್ಮೆಯೆನಿತಿರ್ಪುದೊ ೧೬

ಅರಿಯಲೀ ಸುಪ್ರಬಂಧಕ್ಕೆ ಪೆಸರಾವುದೆನ
ಲರವತ್ತುಮುವ್ವರ್ಪುರಾತನರ ಪೌರಾಣ
ಮಿರದಿದಕ್ಕಧಿಪರಾರೆನೆ ಪುರಾತನರಿದಕ್ಕಾಧಾರವಾವುದೆನಲೂ
ಹರಿದೇವನೊರೆದ ರಘಟಾಕಾರವಾಧಾರ
ಮುರುತರದ ಕಾವ್ಯಮಂ ಪೇ೫ಳ್ದಾ೫ತನಾರೆನ
ಲ್ವರ ವೀರಭದ್ರಾಖ್ಯನೀ ಕಥೆಗೆ ಮೊದಲಾವುದೆನೆ ಶರಧಿಯೊಪ್ಪಿರ್ದುದು ೧೭

---

೧ ಅಜ್ಞಾನ (ಹ) ೨ ಅ (ಹ) ೩ ದ (ಹ) ೪ ಪೇ (ಹ) ೫ ಳ್ಘ (ಹ)

ಸುತ್ತಿ ಸುತ್ತೆಂತ್ತೆಂತ್ತ ನೋಡಲತ್ತತ್ತಮ
ತ್ತತ್ತಾಗಿ ನೋಡಲತ್ತತ್ತಮಗು[1]ಳಿ[2]ತ್ತೆನಿಸ
ದುತ್ತರಣದೊತ್ತೆನಿಸದೊತ್ತರಸಿ ಮುತ್ತಿ ಮುಸುಕಿತ್ತು ಜಲ ತಜ್ಜಲದೊಳು
ಮತ್ತ ಬಲವತ್ತಿನಿಂದೊ[3]ತ್ತಲವನೊಂದೊಂದ[4]
ನೊತ್ತೊತ್ತವತ್ತಿ ಚೀರುತ್ತ ಪಾರುತ್ತ ಸಾ
ರುತ್ತಿರ್ಪ ಸತ್ವಗಳ ವೊತ್ತದಿಂದಂಬುನಿಧಿ ಬಿತ್ತರಂಬಡೆದಿರ್ದುದು ೧೮

ಭೀಕರಾಕಾರ ಮಕರ ಪ್ರಕರದಿಂದೆ ದ
ರ್ವೀಕರ ನಿಕರದಿಂದೆ ಸುಳಿಗಳ ಬಳಗದಿಂದೆ
ಭೇಕಭೇಕೀ ಕುಲಾನೀಕದಿಂದಪರಿಮಿತ ಶಫರ ಸಂದೋಹದಿಂದೆ
ಶ್ರೀಕಾಂತೆಯಂ ಪಡೆದ ಪದಪಿನಿಂದಂ ಸುಪ್ರ
ತೀಕೋಪಮಮೆನಿಪ್ಪ ಮತ್ತಗಜವೊತ್ತದಿಂ
ದಾಕಲಿತ ಕಲ್ಲೋಲಮಾಲೆಯಿಂದತುಲ ರತ್ನಾಕರಂ ರಂಜಿಸಿದುದು ೧೯

ಅಳಿಯಾಸೆಯೆಂಬ ಮಲಿನವ ತೊಳೆದು ತನು ತೀಟೆ
ಯಳವಟ್ಟ ವಿಷಯಮಂ ಕಳೆದು ಪಂಕಪ್ರಕರ
ದಳತೆಯವನೊಡೆದುಳಿವುತಾನಂದರಸದೊಳೀಸ್ಯಾಡುವ ಮಹಾ ಮುನಿಗಳಳಲ
ಕಳೆಯುನನುಕರಿಸಿರ್ದ ತೆರದಿ ಬಳವತ್ಕಳಭ
ಕುಳದ ಜಲಕೇಳಿಯಿಂದಿಡಿದು ರಂಜಿಸುತಿರ್ಪ
ಜಳನಿಧಿಯ ಪರಿಯ ತಚ್ಛರಿಯ ಘನ ಚರ್ಯಮಾನೇನೆಂದು ಬಣ್ಣಿಸುವೆನು ೨೦

ಕರಕಮಂಡಲ ಸಮಂಚಿತನಾದ ಮುನಿವೇಷ
ದಿರವಾಂತು ಕುಂಭಜನೊಲುರು ಕೋಪಿಯಲ್ಲ ಮ
ತ್ತರಿಯ[5]ಲ್ಯ[5]ಧೃತ ಮಹಾವೀರನಂತಿರ್ದು ರಘುಜನೊ[6][ಲ್ಕೊಕ್ಕ್ರೀ][6]ಧಮಿಲ್ಲ
ಉರುತರೋ[7]ಧ್ವಾ[7]ಚರಣೆಯಾಗಿರ್ದು ಶಕ್ರನೊ
ಲ್ಸಿರಿಯಾಸೆಯಿಂ ಮಥನಗುಣಮಿಲ್ಲ ಭಳಿರೆಂದು
[8]ವಲರಮೇಘ ತತಿಯಂ ನುತಿಪ ತೆರದಿ ನೀರಧಿ[9]ನೀ[9]ನಾದವಾಂತೆಸೆದಿರ್ದುದು ೨೧

---

೧ X (ಹ) ೨ ಳ (ಹ) ೩ ತ್ತ್ರಿಯೇವನೊಂದೊಂದಿ (ಹ) ೪ ಳು (ಜ)
೫ ಲ್ಕಿ (ಹ) ೬ ಳೊಕ್ಕ್ರೀ (ಜ, ಹ) ೭ ಧ್ವಾ (ಹ) ೮ ಮ (ಹ) ೯ ನೀ (ಹ)

ಇಂತೆಸೆವ ಶರಧಿಮಧ್ಯದೊಳೊಪ್ಪಿರುತ್ತಿಹುದ
ನಂತ ಮಂಡಲವದರ ನಡುವಿರ್ದುದಾ ಮೇರು
ಕಂತುಹರನಾಲಯವದರ ಶಿಖರದಲ್ಲಿರ್ದುದತ್ಯಂತ ಸೊಬಗಿನಿಂದಾ
ಎಂತುಸುರಲಹುದದರ ಸಂಪದವನದರಪರಿ
ಯಿಂತಿಹುದದಂತಿಹುದೆನಲ್ಕದಕೆ ಪಡಿಯಿಲ್ಲ
ನಂತ ಲೋಕಂಗಳಂ ರಚಿಸಿದತಿಸಿನ ಪುರವನಾಲಯವನೊರೆಯಲಹುದೆ ೨೨

ಸುರತರು ಸಂತಾನದಿಂದೆ ಸುರರ ವಿಸರದಿಂದೆ
ವರಮುನಿಗಳಾಳಿಯಿಂದ್ಯಕ್ಷರ ನಿಬಿಡದಿಂದೆ
ಉರಗಾವಳಿಗಳಿಂದೆ ಸಿದ್ಧರ ಸಮೂಹದಿಂ ಸಾಧ್ಯರುಗಳ ಪ್ರಕರದಿಂ
ಉರುಕಿನ್ನರರ ವರ್ಗದಿಂ ಕಿಂಪುರುಷರುಗಳ
ನೆರವಿಯಿಂ ಕೈವಾರದವರ ಸಂದೋಹದಿಂ
ಪುರುಹೂತ ಮುಖ್ಯ ದಿಕ್ಪತಿಗಳಿಂದಜಕೇಶವರ್ಕಳಿಂದಭವನೆಸೆದಂ ೨೩

ಧವಲಾಂಗ ಸುಪ್ರಸನ್ನ ಪ್ರಸಿದ್ಧ ಸ್ತುತ್ಯ
ಧವಲಾಂಗ ಸುಪ್ರಸನ್ನ ಪ್ರಸಿದ್ಧರ್ಮಹಾ
ಶಿವಧರ್ಮ ಸುಸಹಾಯ ಸರ್ವಮಂಗಳೆಯ ಹಿತ ಶಿವಧರ್ಮ ಸುಸಹಾಯಿಗಳ್
ಪ್ರವಿಮಳ ಗುಣಾತ್ಮರ್ನಿಖಿಳಲೋಕ ರಕ್ಷಕರ್
ಭವದೂರವಿಗ್ರಹರ್ ಭಕ್ತಿಸಂಪದಯುತರ್
ನವವಿವಿಧವಹಗಣಾಧಿಪರಿಂದೆ ಗರುಡಗಜರಿಪು ಸಭೆಯೊಳೊಪ್ಪಿರ್ದನು ೨೪

ಬಲವು ಭಕ್ತರಿಗಿತ್ತ ವಾಮವಂಬಿಕೆಗಿತ್ತ
ಚೆಲುವೆನಿಪ ರೂಪಂ ಚರಾಚರಂಗಳಿಗಿತ್ತ
ಸಲೆ ನಿರಂಗತ್ವವಂಗಜಗಿತ್ತ ಶೂನ್ಯತೆಯನಂಬರಕ್ಕಿತ್ತ ಮತ್ತಂ
ಕಳೆಯಿಂದಲಿಹನು ಇದ್ದಂತಿಹನು ಇಂತಪ್ಪ
ಬಲುಮೆಯಹ ಇಂದ್ರಜಾಲದ ಮಹಿಮರಿನ್ನುಂಟೆ
ಭಳಿಭಳಿರೆ ದೇವ ದೇವೇಶನೆಂದು ಪೊಗಳ್ವರಿಂದೀಶನೆಸೆದಿರ್ದನು ೨೫

ಅಂತು ಸಂಧಿ ೧ಕ್ಕಂ ಪದಗಳು ೨೫ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

---

೧ X (ಹ) ೨ ಲಿಯ (ಹ) ೩ ಯ (ಹ) ೪ ಕಿ (ಹ)

## ಸಂಧಿ : ೨

**ಸೂಚನೆ :**

ಕುಸುಮದತ್ತನೆನಿಪ್ಪ ಗಣನಾಥನಾ ಮಹಾ
ಶಶಿಭೂಷ ೧ನಾ೧ಜ್ಞೆಯಂ ತಾಳ್ದು ವಸುಮತಿಯಲ್ಲಿ
ಒಸೆದುದ್ಭವಿಸಿ ಸೌಂ೨ದರೇಂ೩ದ್ರನೆಂದೆನಿಸುತ್ತಸಮಸುಖದೊಳೊಪ್ಪಿರ್ದನು

ಆ ಶಿವನ ಸಿರಿಮುಡಿಗೆ ಕುಸುಮಂಗಳಂ ತರುತೆ
ದಾಸಭಾವದೊಳಿರ್ದನುರು ಪುಷ್ಪದತ್ತನೆಂ
ಬಾ ಸೌಕುಮಾರ್ಯ ಗಣವರನಿರಲ್ಕೊಂದು ದಿನ ಪುಷ್ಪವಾಟಿಯೊಳಾತನು
ಭಾಸುರವೆನಿಪ್ಪ ಕುಸುಮಂಗಳಂ ಕೊಯ್ವುತಿರ
ಲಾಸಮಯದೊಳಗಲ್ಲಿಗೈತಂದರೀರ್ವಳಿರುಳಿವಿ
ಳಾಸಿನಿಯರಗಜೆಯ ಮುಡಿಗೆ ದಿವ್ಯ ಕುಸುಮಂಗಳಂ ತಪ್ಪಕಾರಣಕ್ಕೆ ೧

---

೧ ಣಾ (ಹ)  ೨ X (ಹ)  ೩ X (ಹ)

ಅವರನಾ ಪುಷ್ಪದತ್ತಂ ಕಾಣುತಾಕ್ಷಣದಿ
ಸುವಿವೇಕವಡಗಿ ಪೂರ್ವಂ ತನ್ನುವಂ ಮರೆದು
ತವೆಮೋಹಮೆಂಬುದಂ ಮುಂಬರಿದು ಸುಯ್ಗಿರೆದು ಬೆರಗಾಗಿ ನಿಂದಿರಲ್ಕೆ
ಯುವತಿಯರ್ತಾವೀತನಂ ಕಾಣುತೋರ್ವಂಗೆ
ಜವದೊಳೀರ್ವ¹ರ್ಸೋ²ಲ್ತರಿಂತಾಗುತವರ್ಗಳುಂ
ನವಕುಸುಮ ವಿಸರಮಂ ಕೊಂಪೈತರಲ್ಕೀಕ್ಷಿಸುತ್ತಗಜೆ ನಸುನಗಲ್ಕೆ ೨

ಹರನರಿದು ಕಾರುಣ್ಯದಿಂ ನೋಡುತವರನುಂ
ಸರಸದಿಂ ನಿಮ್ಮಯ ಮನೋರಥವನೀವೆನಾಂ
ಧರೆಯೊಳಗೆ ಪುಟ್ಟುತ್ತೆ ಸಕಲಭೋಗಂಗಳಂ ಸವಿಗಂಡು ಬಪ್ಪುದೆನಲು
ನೆರೆ ಕೇಳ್ದನಾ ಪುಷ್ಪದತ್ತ ಕೇಳೈದೇವ
ನರನಾದ ಬಳಿಕ ಎತ್ತಣದು ಎತ್ತಣ ಬರವು
ಪರಮ ನಿನ್ನಯ ಪಾದವಿನ್ನಾವಗಂ ಕಾಂಬೆ ಧರೆಯ ಗುಣವೇನೆಂಬೆನು ೩

ಕಾಮದಬ್ಬರವಲ್ಲಿ ಕೋಪದುಲ್ಬಣವಲ್ಲಿ
ಆ ಮರವೆ ಲೋಭ ಮೋಹಂಗಳೂಳಿಗವಲ್ಲಿ
ತಾಮಸದ ಬಲುಹಲ್ಲಿ ಮತ್ಸರ³ದ⁴ಮಯವಲ್ಲಿ ದೋಷವಾಕಾರವಾದ
ಆ ಮಹಿಯೊಳಿನ್ನೆಂತು ಪುಟ್ಟುವೆಂ ಕರುಣಿಸೆನೆ
ಬಾ ಮಗನೆ ನಿನಗೇಕೆ ಮರ್ತ್ಯದುರು ಭೀಕರಂ
ಪ್ರೇಮದಿಂ ನಿನ್ನೊಡನೆ ನಾನಿರ್ಪೆನಿದು ಸತ್ಯ ನೀನಂಜಲೇಕಿದಕ್ಕೆ ೪

ಮಾಡಿತೆಲ್ಲಂ ಪೂಜೆಯಾಗಿ ಕೈಕೊಂಡಪೆಂ
ಆಡಿತೆಲ್ಲಂ ಸ್ತುತಿಗಳಾಗಿ ಮನವೊಪ್ಪುವೆಂ
ರೂಢಿಯೊಳು ನಿನ್ನ ಸುಖವೆನ್ನ ಸುಖ ನಿನ್ನ ನಲಿವೆನ್ನ ನಲಿವಿಂತಲ್ಲದೆ
ಆಡಲಿನ್ನೇನು ನಿನ್ನರ್ಥಿಯೆನ್ನರ್ಥಿಯದು
ನೋಡಲುಂ ನಿನ್ನ ಬಲವೆನ್ನ ಬಲವೆಂದರಿವೆ
ಬೇಡಿದುದನೀವುತ್ತ ನಿನ್ನೊಳೆಡೆಯಾಡುತ್ತಲಿರುವೆ ಪೋಗಯ್ಯ ಮಗುವೆ ೫

---

೧ ಳ (ಹ)  ೨ ಗೋ (ಹ)  ೩ X (ಹ)

ಎಂದು ಬೆಸಸಲು ದೇವ ಇನ್ನೊಂದು ಬಿನ್ನಪಂ
ತಂದೆ ಚಿತ್ತೈಸೆನಿತುದಿನವಿರ್ದ್ದು ಮತ್ತಿಲ್ಲಿ
ಗೆಂದುಬರ್ಪೆಂ ಬರುವುದಕ್ಕೆ ಕುರುಹಾವುದಂ ಪೇಳಯ್ಯ ದೇವ ಎನಲು
ಕಂದ ಕೇಳ್ಳೆ ಚೋಳದೇಶದೊಳು ಘನಮಹಿಮ
ನೆಂದೆನಿಪ ಚಾರಮನ ಪುರದ ಕೆಲದೊಳಗಿರ್ದು
ದೊಂದು ತಿರುವಂಜಕಳದೇವರೆಂದೆಂಬ ನಾಮದೊಳಲ್ಲಿರುತ್ತಿರ್ಪ್ಪನು ೬

ಅಲ್ಲಿ ಮುನ್ನಂಪುಗದೆ ನೀನಲ್ಲಿಗೈತರದ
ಎಲ್ಲ ಭೋಗಂಗಳಂ ತೀರ್ಚಿ ನೀಂ ಬಳಿಕ ಬಂ
ದಲ್ಲಿ ಪುಗೆ ಕರೆದುಕೊಂಡಪೆವಿಲ್ಲಿಗೈ೧ತಪ್ಪ ಕುರುಹಿದೆಂದರಿ ಮನದೊಳು
ಸಲ್ಲೀಲೆಯಿಂ ನಂಬಿ ಪೋಗೆನಲ್ಕಾತನತಿ
ಉಲ್ಲಾಸದಿಂದ ಭವಗೆರಗಿ ಬೀಳ್ಕೊಂಡನಂ
ತಲ್ಲಿಂ ತೆರಳ್ದಿಳಾತಳಕಿಳಿದು ಚೋಳೋರ್ವಿಯಂ ಪೊಕ್ಕನತಿಮುದದೊಳು ೭

ಬರಲು ನರಸಿಂಗಮೊನೆಯರದೊಂದು ಪಟ್ಟಣಂ
ತಿರಿನಾವಲೂರೆನುತ್ತಿರಲದರೊಳಗೆ ಭಕ್ತಿ
ವೆರಸಿರ್ಪ್ಪ ಜಡೆಯ ನೈನಾರ ಸತಿಯೆನಿಪ ಯಿಸೈಜ್ಞಾನಿಯರ ಬಸುರೊಳು
ಭರದಿಂದೆ ಬಂದುಪೊಕ್ಕಂ ಪುಷ್ಪದತ್ತನುಂ
ತರುಣಿಗೆ ಸುಗರ್ಭಚಿಹ್ನಂದೋರಿದುದು ೨ಸುಖಿಯು
ಹರುಷವಿನ್ನೇನೆಂಬೆನವಳಂಗದಿರವ ಮತ್ತೇನೆಂದು ಬಣ್ಣಿಸುವೆನು ೮

ಸುರುಚಿರ ನಿಧಾನಮೊಳಗಿಪ್ಪ ವಸುಮತಿಯಂತೆ
ವರಫಳವನೊಳಕೊಂಡ ಉರುಕಲ್ಪಲತೆಯಂತೆ
ಸರ೩ಸಾ೩ಮೃತದ ಕಳೆಯ ತೀವಿಪ್ಪ ಕಾಮಧೇನುವಿನಂತೆಯವಳಿರಲ್ಕೆ
ಪರಿವಿಡಿದು ನವಮಾಸವಾಗುತ್ತಲಿರುತಿರಲು
ಪರಮೇಶ್ವರನ ಮೋಹದಣುಗನೀ ಮರ್ತ್ಯವಂ
ನೆರೆನೋಳ್ಪುದಕ್ಕಾತನಿರದೆ ಸಂತಸದಿಂದೆ ಪೊರಮಡಲುದ್ಯುತನಾದನು ೯

---

೧ ಗೆ (ಹ)   ೨ ಭಿ (ಹ)   ೩ ಸಂಮ್ಯ (ಹ)

ಶಶಿಕಳೆಯು ಬಸುರಿಂದೆ ಬೆಳುದಿಂಗಳೊಗೆವಂತೆ
ಎಸೆವ ಪಾಲ್ಗಡಲಿಂದೆ ಶಶಿಬಿಂಬಮೊಗೆವಂತೆ
ಪಶುಪತಿಯ ಪದಭಕ್ತಿಯುಪ ಸೊಬಗು ಮೂರ್ತಿಗೊಂಡೊಗೆವಂತೆ ಒಗೆದನಂದು
ಅಸಮಶಂಕರನ ಸುಕುಮಾರ ಜನಿಸಿದ[1]ನೆಂದು
ವಿಶದಕೀರ್ತಿ ಪ್ರಭಾಮಯನು ಜನಿಸಿದ[2]ನೆಂದು
ಕುಶಲದಿಂ ಶಿವಜಾತ ಕರ್ಮನಾಮಕರಣಂಗೈದು ಜೋಯೆಂದರು ೧೦

ನಂಬಿ ಬಂದವನಾಗಿ ನಂಬಿ[3]ಯೆಂದೇ[4]ಇಟ್ಟು
ಇಂಬಿನಿಂ ಮಾತೆಪಿತರತಿ ಸಂತಸಂಬಟ್ಟು
ಮುಂಬರಿವ ಮೋಹದಿಂದಿರುತಿರಲ್ಕಾನಂಬಿ ನಳನಳಿಸಿ ಬಳೆವುತಿರ್ದ[5]ಂ
ಸಾಂಬನುರುಲೀಲೆಯದು ಶಿಶುವಾಗಿ ಬೆಳೆವಂತೆ
ಶಂಭುವಿನ ಭೋಗವಾರಾ:ಳದಿಂಳ ಬೆಳೆವಂತೆ
ಕುಂಭಿನಿಯೊಳೆಸೆವ ತಿರಿನಾವಲೂರೊಳಗಾತ ಬಳೆವುತ್ತಲಿರುತಿ[5]ರ್ದ[6]ನು ೧೧

ನೆರೆಕಂಡವರ ಕಣ್ಣವಣೆ ಮತ್ತೆ[6]ಎತ್ತಿ[7]ರ್ದ
ವರ ಹಸ್ತದಮೃತಫಳ ಒಪ್ಪಿದವರುರದೊಪ್ಪು
ಮಿರದೆ ಮುಟ್ಟಿರ್ದವರ ಮೈಪುಳಕವೈದೆ ಕೈಕೊಂಬುವರ ಧನವೆನಿಸಿರೇ
ಪರವೆನಾಚಿಯರನಪ್ಪುವ ತೋಳ್ಗಳಿವೆಯೆಂಬ
ತೆರದಿಂದೆ ತೋಳಾಡಿಸುತ್ತಂ ಮಹೇಶನೊಡ
ನುರುಜಗಳ ಮುಂದಾಡಿದಪೆನದುಂ ಪುಸಿಜಗಳವೆಂದು ತಾಂ ಸೂಚಿಪಂತೆ ೧೨

ತೊದಳನುಡಿಗಳ ನುಡಿವುತಂ ದೇವನಂ ತನಗೆ
ಮುದದಿ ಕುಂಟಣಿಯೆನಿಸಿ ನಡೆಯಿಸುವ ತೆರನಿದೆಂ
ದದು ತೋರುವಂತೆ ಸಲ್ಲೀಲೆಯಿಂ ಮೆಲ್ಲಮೆಲ್ಲನೆ ದಟ್ಟಡಿಯನಿಡು[6]ತ್ತಂ[7]
ಮೊದಲನರಿಯದೆ ಪಡೆದವರ್ತಾವೆನುತ್ತರಿದು
ಪದುಳದಿಂ ಮುದ್ದಾಡಿಸುವ ತಾಯಿತಂದೆಗಳ
ವದನಮಂ ನೋಡಿ ನಗುವಂತೆ ಸೌಂದರ ಪೆರುಮಳೆ ಮುಗುಳ್ನಗೆ ನಗುತ್ತಂ ೧೩

---

೧ ನಂ (ಜ) ೨ ನಂ (ಜ) ೩ ಯೆಂದೆಸರಿ (ಹ) ೪ ದಿ (ಹ)
೫ ರ್ಪ (ಹ) ೬ ಯೆಂತಿ (ಹ) ೭ ತಂ (ಹ)

ಈ ತೆರದೊಳೊಂದೆರಡು ನಾಲ್ಕೈದು ವತ್ಸರಗ
ಳಾತಗನುಕೂಲಿಸಲ್ಕೆರೆಹೊರೆಯ ಮಕ್ಕಳೊಡ
ನೋತಾಡುತಿರಲೊಂದು ದಿನ ಚಿಣ್ಣರೆಲ್ಲರುಂ ಮರದ ಕಿರುವಂಡಿಯಲ್ಲಿ
ಭೂತೇಶನಣುಗನಹನಂಬಿ[ಯಂ][1] ಕಳ್ಳಿರಿಸಿ
ಭೂತಲಾಧಿಪ ನೀನು ನಾವೆಲ್ಲ ಪರಿವಾರ
ಚಾತುರ್ಯದಿಂ ಕುಳ್ಳಿರೆಂದು ಪುರವೀ[2]ಥಿ[2]ಯೊಳಗಾಡುತ್ತ[3]ಲ್ಲೈ[3]ತರಲ್ಕೆ ೧೪

ಆ ನಗರದರಸು ನರಸಿಂಗಮೊನೆಯ[4] ಪಟ್ಟ
ದಾನೆ ಮದವೇರಿ ಮಾವಂತರಂ ಮುರಿದಿಳಕ್ಕಿಳ
ತಾನು ತನ್ನಿಚ್ಛೆಯಿಂ ತಿರುಗುತ್ತ ಸಿಕ್ಕವರನಿಕ್ಕುತ್ತ[5]ಲ್ಲೈ[5]ತರಲ್ಕೆ
ಏನೆಂಬೆನಾ ಮಕ್ಕಳೆಲ್ಲರುಂ ಮುರಿ[6]ದೋಡ
ಲಾ[6]ನಂಬಿ ಬಂಡಿಯೊಳಗೆ[7]ಳ[7]ಸಿಂಗದಂತಿರ
ಲ್ಲಾನೆ ಸುಕುಮಾರನಂ ಕಂಡು ಬಲವಂದು ಕಾಲ್ಕೆರಗಿ ಸರ್ರನೆ ತಿರುಗಲು ೧೫

ಎವೆಯಿಕ್ಕದೀಕ್ಷಿ[8]ಸಿ[8]ದರೆಲ್ಲರೀಕೌತುಕವ
ನಿವದಾವ ಕಾರಣಿಕನೋದಾವ ಸತ್ವದು
ದ್ಭವ ಬೀಜವೋದಾವ ಪುಣ್ಯದಂಕುರವೋ ಇದಾವ ಶಾಶ್ವತದ ಮುಗುಳೊ
ಇವನಾವ ಮಹಿಮಾತಿಶಯದ ಫಳವೋ ಮತ್ತೆ
ಇವನಾವ ಭಕ್ತಿಯತಿಶಯದ ಬೆಳೆಯೋ ತಿಳಿಯ
ಲಿವ ಚಿಣ್ಣನಲ್ಲವೆಂದೆಲ್ಲಾ ಜನಂ ನಂಬಿಯಣ್ಣನಂ ನುತಿಸುತ್ತಿರೆ ೧೬

ಅಲ್ಲಿಪೊರ್ವ[9]ನೆರವಿಯೊಳು ಪರಿದು ಬಂದು ಭೂ
ವಲ್ಲಭನೆನಿಪ್ಪ ನರಸಿಂಗಮೊನೆಯರ್ಗೆ ಕರ
ಪಲ್ಲವಂ ಮುಗಿವುತ್ತಲೆಲೆದೇವ ಒಂದು ಕೌತುಕವನೀಂ ಚಿತ್ತೈಪುದು
ಸಲ್ಲಲಿತ ನಿಮ್ಮರಮನೆಯ ಪಟ್ಟದಾನೆ ಮದ
ದಲ್ಲಿರ್ದು ಮುಂದುಗಾಣದೆ ಬೀದಿಯೊಳು ಪೊಕ್ಕು
ಬಲ್ಲಿದರನಿಕ್ಕುತ್ತಲೈತರುತ್ತೊಂದು ಶಿಶುವಂ ಕಾಣುತ್ತಲಾ ದಂತಿಯು ೧೭

---

೧ ನಂ (ಜ, ಹ) ೨ ಧಿ (ಹ) ೩ ವೈ (ಹ) ೪ ಟ್ಟು (ಹ) ೫ ವೈ (ಹ)
೬ ದೊಡ್ಡವಾ (ಹ) ೭ X (ಹ) ೮ ಸ (ಹ) ೯ ವೈ (ಹ)

ಬಲವಂದು ಕಾಲ್ಗೆರಗಿ ಪೋದುದೆನಲಾ[೧]ರಾಯ
ನಿಳೆಯೊಳಿದು ಪೊಸತೆಂದು ಸಭೆಯುವರನೊಡಗೊಂಡು
ಫಳಿಲನೈತಂದು ನೋಡಲ್ಚಂದ್ರಬಿಂಬದಂತಿರ್ದ ನಂಬಿಯನೀಕ್ಷಿಸಿ
ಚೆಲುವಿನಂಕುರದ ಶಿಶುವಾರದೆಂದಾ ಭೂಪ
ತಲೆದೂಗಿ ಬೆರಗಾಗಿ ಬೆಸಗೊಳುತ್ತಿರಲನಿತ
ರೊಳಗಳಲ್ವ ಸರದಿಂದೆ ಇಳಿವ ಕಂಬನಿಯಿಂದೆ ಕೆದರ್ದ ಭೂತಿಯ ತಿಲಕದಿಂ ೧೮

ಹಾ ಮಗನೆ ಹಾ ನಂಬಿ ಹಾಹಾ ಕುಮಾರನೇ
ತಾಮಸದ ದಂತಿಗೊಳಗಾದೆಯಾ ಎಂದೆನು
ತ್ತಾ ಮಾತೆ ಪಿತರುಂ ಪಲುಂಬುತಂ ಪರಿತಂದು ಭರದಿಂದಲೀಕ್ಷಿಸಲ್ಕೆ
ಕ್ಷೇಮದಿಂ ೧ಬ೦೧ಡಿಯೊಳು ಕುಳ್ಳಿರ್ದ ಕುವರನಂ
ದಾ ಮಹಿಮರೀಕ್ಷಿಸುತ ತೆಗೆದಪ್ಪಿ ಮುದ್ದಿಡುತೆ
ರಾಮಣೀಯಕದ ಹರಣಂ ಬಂದ ತೆರದಿಯಳಲಂ ಪರಿಹರಿಸಿಕೊಳುತ್ತೆ ೧೯

ಸಿಡಿಲು ಸೋಂಕುತ್ತುಳಿದ ಎಳೆಯ ಮೊಲ್ಲೆಯ ಮುಗುಳೆ
ಕಡುಚಾಳೆ ಮುಟ್ಟಿ ಜೀವಿಸಿದ ಚಂದ್ರನ ಕಳೆಯೆ
ಮೃಡನ ಕಾರುಣ್ಯಾವಲೋಕನ೩ದಿ೩ ಕಂಟಕಂ ತಪ್ಪಿದ ಮಹಾಮಹಿಮನೇ
ಸಡಗರದ ಸುಕುಮಾರ ಬಾರೆನುತ್ತಪ್ಪುತಿಹ
ಪಡೆದವರನಂದು ನರಸಿಂಗಮೊನೆಯರ್ಕಂಡು
ನುಡಿದರುತ್ಸುಕದಿ ತಮಗಾತ್ಮಭವರಿಲ್ಲದುದರಿಂದೆ ಪುತ್ರಾರ್ಥಿಯಾಗಿ ೨೦

ಎಲೆ ಜಡೆಯ ನೈನಾರೆ ಕೇಳೀತ ಪುಣ್ಯದಿಂ
ಗೆಲಿದನಪಮೃತ್ಯುವೆಂದೆಂಬನುಡಿ ನೀವೀಗ
ತಿಳಿಯದಾಡಿದಿರಿ ಈತಂ ನಿಮ್ಮ ಮಗನೆಂಬ ಭಾವಮಂ ನೆರೆತೊರೆವುದು
ನೆಲದಾಣ್ಮರಿಂದೆ ಸೇವೆಯನೀತ ಕೈಕೊಂಬ
ಇಳೆಯೊಳಗೆ ಕಾರಣಿಕ ಪುರುಷನೆಂ೪ದೆನಿಸು೪ವಂ
ಚೆಲುವ ಸುಕುಮಾರನೀತನನೋವುತಿಹೆವಾವು ಎಂಬ ನುಡಿ ನಿಮಗಿಲ್ಲವು ೨೧

---

೧ ಭಂ (ಹ)     ೨ ದಿಂ (ಹ)     ದೆಂಬು (ಹ)

ವರಹಂಸತೂಲತಲ್ಪದ ಮೇಲೆ ಕುಳ್ಳಿರಿಸಿ
ಪರಮಂಪಕ್ವಾನ್ನವಮೃತಾನ್ನ ಫಳಗಳನೂಡಿ
ಪರಿಪರಿಯ ದಿವ್ಯಾಭರಣ ನವ್ಯವಸ್ತ್ರಂಗಳಿಂದಲಂಕರಿಸಿ ಮಗುಳೆ
ಸರಸತರವೆಂದೆನಿಪ ಕಣ್ಣಿನೊಳು ಮುದ್ದಾಡಿ
ಉರುಪುನದ ಮಗ್ಗುಲೊಳಗಿರಿಸಿ ಚಿತ್ತ್ರವ ಪೊದಿಸಿ
ಹರಣದೊಡನೈದೆ ರಕ್ಷಿಸಿಕೊಂಬ ಕಂದಳ [ನೀತೆ]ಳತ್ತ ನೀವೆತ್ತ ನೋಡಿ ೨೨

ಇವ ನಿಮ್ಮ ಮನೆ ಬರಗಿನೋಗರಕ್ಕಂ ಪುಟ್ಟಿ
ದವನಲ್ಲವೀ ಪುಣ್ಯಪುಂಜನಂ ಎನಗೀಯೆ
ತವೆ ನಿಮ್ಮ ಬಡತನಂ ತೀರುವುದು ಎನ್ನಯ ಮನೋರಥಂವಂಪೂರೈಪುದು
ತವಕದಿಂ ಪೇಳ್ವುದೆಂದಾ ಜಡೆಯನೈನಾರ್ಗೆ
ಭುವಿಗೊಡೆಯ ನರಸಿಂಗವೊನೆಯರುಂ ಬೇಡಿಕೊಳ
ಲವರಂದು ತಮ್ಮರಸಿಯಾದ ಯಸ್ಯಜ್ಞಾನಿಯರ ಮೋ[ಗವಂ]ನೋಡಿನುಡಿದರ್ ೨೩

ಅರಸು ತಾನೇ ಬಂದು ಬೇಡಿಕೊಳುತಿರ್ದಪಂ
ಅರಿಯಲೀ ಪುತ್ರ ಕಾರಣಿಕನಾಗಿರ್ದಪಂ
ನೆರೆನಮ್ಮ ಕೈಯೊಳಗಡಂಗುವವನಿವನಲ್ಲ ನೆಟ್ಟನರಿ ನಿನ್ನ ಮನದೀ
ನರಸಿಂಗವೊನೆಯರೆನೆ ನಾವೆನಲ್ಬೇರಿಲ್ಲ
ಸರಸದಿಂ ಪುತ್ರನಂ ಕೊಡುವುದೇಕಾರ್ಯಂ ಕು
ವರನೆಲ್ಲಿಯಾದಲಡುಂ ಸುಖದೊಳಿರ್ದಡೆ ಸಾಲ್ಗುಮೆಂದೀರ್ವರೊಡಂಬಟ್ಟರು ೨೪

ಒಡನಸಮರತ್ನಂ ಪರೀಕ್ಷಕನ ಕೈಯಲ್ಲಿ
ಕೊಡುವಂತೆಯಾ ವಸಂತನ ಕೈಯೊಳಗೆ ಮಹಾ
ಸಡಗರದ ಕಲ್ಪತರುವಿನ ಸಸಿಯನೀವಂತೆ ನರಸಿಂಗವೊನೆಯರೆನಿಪಾ
ಪೊಡವಿಪನ ಕೈಯಲ್ಲಿ ನಂಬಿಯಂ ಕೊಡಲಾಗಿ
ಕಡು ನೆನೆವ ಬಯಕೆಯದು ನೈಜ ಮನವಾದಂತೆ
ಬಿಡದೀಕ್ಷಿಸುವ ರೂಪವದುವೆ ಕಣ್ಣಾದಂತೆ ರಾಜನತ್ಯುತ್ಸವದೊಳು ೨೫

---

೧ ಪಕ್ವವನ್ನಮ್ಮ (ಹ) ೨ ನೋ (ಹ) ೩ ತ್ರ (ಹ) ೪ ನಿಂತೆ (ಹ), ನಿಂತ್ಯ (ಜ)
೫ X (ಜ) ೬ ಳ್ಳಿ (ಹ) ೭ ಗ (ಜ), ಗಂ (ಹ) ೮ ಡಂ (ಹ)

ಬಾಲಕನನಪ್ಪಿ ದಿವ್ಯಾಭರಣಮಂ ತೊಡಿಸಿ
ಆ ಲಲಿತ ಪಟ್ಟದಾನೆಯನ್ನೈದೆ ಶೃಂಗರಿಸಿ
ನೀಲಗಿರಿಯಗ್ರದೊಳು ಬಾಲಾರ್ಕ ಮೂಡಿದಂತಂ ಕುಳ್ಳಿರಿಸಿ ನಂಬಿಯಂ
ಘೀಳಿಡುವ ನಿಸ್ಸಾಳ ಭೇರೀರವಂಗಳಿಂ
ಮೇಲಾದ ಹಸ್ತ್ಯಶ್ವರಥ ಪದಾತಿಯವೆರಸಿ
ಕೋಲಾಹಲಂಗಳಿಂದಿಡಿಂದಂ ದೌವಾರಿಕರ್ಪೊಗಳಲರಮನೆಗೈದಿದಂ ೨೬

ಬಂದು ಸಿಂಹಾಸನದಿ ಮಂಡಿಸುತ್ತಂ ರಾಯ
ನಂದು ಸುಕುಮಾರನಂ ತೊಡೆಯನೇರಿಸುತಲಾ
ನಂದದಿಂದೊಡನೆ ರಾಣೀವಾಸಮಂ ಕರಸಿ ತನ್ನರಸಿಯಳ ಕೈಯೊಳು
ಚಂದಿರನ ಪೋಲ್ವ ನಂಬಿಯನಿತ್ತು ಮತ್ತೆ ಮುದ
ದಿಂದೆ ಸೌಂದರಪೇರುಮಾಳೆಯೆಂಬ ಹೆಸರಿಟ್ಟು
ತಂದೆ ತಾಯಿಗ್ಗಳಿಗೈದೆ ಮನೆಮನಂ ತೀವಿದರ್ಥಂ ಪೂಜ್ಯೈವಿತ್ತು ಕಳುಪಿ ೨೭

ಇತ್ತಲಾ ಕುವರನಂ ಕಣ್ತೇವಿ ನೋಡಿ ತೆಗೆ
ದೆತ್ತಿ ಮುದ್ದಾಡಿ ಮುಂಡಾಡಿ ಕೊಂಡಾಡಿ ಸವಿ
ತುತ್ತೂಡಿ ತೊಡಿಗೆಗಳನಿಟ್ಟಲಂಕರಿಸಿ ಪರಿಮಳವಂಗಕನುಲೇಪಿಸೀ
ಮತ್ತು ಮತ್ತಾತಂಗೆ ನೆನೆಹುಮಂ ಕಾಯ್ದಿಟ್ಟು
ಬಿತ್ತರದ ಬೆಳಗಂ ಬೆಳೆಸುವಂತೆ ಸೌಂದರನ
ನುತ್ತಮೋತ್ತಮನನೀಶ್ವರನ ಮೋಹದ ಮಗನನವರು ಸಲಹುತ್ತಿರ್ದರು ೨೮

ಶ್ರೀನಂಬಿಯಣ್ಣನಿಂತಿತ್ತ ಬಳೆವುತ್ತಮಿರೆ
ಏನೆಂಬೆನುತ್ಕಟದ ಜವ್ವನಂ ಬರುತಲಿರ
ಲಾ ನಾರಿಯರ್ಬಳೆವುತಿರ್ದರೊಂದೊಂದೂರೊಳಾ ಪರವೆ ಸಂಕಿಲಿಯರು
ಭೂನಾಥ ನರಸಿಂಗಮೊನೆಯರೀ ಸೌಂದರಗೆ
ನಾನಾ ನವೀನ ವಿದ್ಯಾಭ್ಯಾಸಮಂಗೈಸಿ
ಸಾನುರಾಗದೊಳಿರಲ್ನಂಬಿಯಣ್ಣಂ ಪ್ರಾಯಪೂರ್ಣಯುತನೆನಿಸುತ್ತಿರೇ ೨೯

---

೧ X (ಹ) ೨ ನರ (ಹ) ೩ ಪೇರ್ಮ (ಹ) ೪ ಯಿಗ (ಹ) ೫ ಜ್ಜ (ಜ)

ನರಸಿಂಗಮೊನೆಯರಂದಾ ನಂಬಿಯಣ್ಣಂಗೆ
ವರ ರಾ೧ಜಾಪಟ್ಟಮಂ ಕಟ್ಟಿ ಧರೆಯೊಡೆಯತನವ
ನಿರದಿತ್ತು ತುಂಬರಂ ಮೊದಲಾದ ಮಂತ್ರಿಗಳನಾತಂಗೆ ಒಪ್ಪುಗೊಟ್ಟು
ಪರಮಾನುರಾಗದಿಂದಿರುತಲಾ ತರಳಂಗೆ
ನೆರೆ ವಿವಾ೨ಹಂಗೈಯ್ಯಲುದ್ಯೋಗಿಸಲ್ಕತ್ತ
ಹರನರಿದನಲ್ಲಿ ಕೈಲಾಸದೊಳಗೀ ನಂಬಿಯಣ್ಣನ ಸ್ಥಿತಿಗತಿಯನು ೩೦

ಅಹಿರಾಜವಲಯ ಗಿರಿಜಾದೇವಿ ಕೇಳೀಗ
ಮಹಿಯೊಳಗೆ ಪುಷ್ಪದತ್ತಂ ಪುಟ್ಟನಂಬಿಯೆನಿ
ಸಿಹನವಂ ಮತ್ತೆ ಸಂಸಾರದೊಳು ಕೆಟ್ಟುಪೋ೩ಗುತ್ತಿಹು ನಾಂ ಪೋಪೆನು
ಕುಹಕತನ ನಿಷ್ಠೂರ ನಾ ಮಾಳ್ಪುದೆಲ್ಲಮಂ
ಬಹು ಕರುಣೆ ಸುಚರಿತ್ರೆ ನೀನೀಗಳೆನ್ನೊಡನೆ
ಬಹದಿರೆಂದಾಡಿಳಾತಳಕಿಳಿವನಾಶ್ರಿತಜನಾವಗಣಕುಲದೇವನು ೩೧

ಬಂದೊಂದು ನರರೂಪಮಂ ತಾಳ್ದು ನಂಬಿಗಾ
ನಂದದಿಂದೆಸಗುವ ವಿವಾಹಮಂ ಕೆಡಿಸಿ ತಾ
ನೊಂದು ಬೇಸರದ ನುಡಿ ನುಡಿದು ನಂಬಿಯುಂ ತಾನುಂ ನುಡಿಸಿಕೊಂಡು ಮಗುಳೆ
ಕುಂದವನಿಗಿತ್ತು ತೊತ್ತಿನ ಮಗನೆ ಇತ್ತ ಬಾ
ಎಂದವನನತ್ತ ತಿರಿವೆಣ್ಣನಲ್ಲೂರಿಂಗೆ
ಚಂದದಿಂದೊಡಗೊಂಡು ಬಂದು ತತ್ಪುರದ ಲಿಂಗಾಲಯದಿ ಬಯಲಾದನು ೩೨

ಬೆರಗಾಗಿ ನಂಬಿ ನೋಡಲ್ಪೂರ್ವ ವಾಸನೆಯ
೩ದ೩ರಿಕೆಯಾದುದು ಮನಕೆ ಇಲ್ಲಿ ಹುಟ್ಟಿದುದೆಲ್ಲ
ಭರದಿಂದ ಕನಸಿನಂದದಿ ೪ತೋರೆ೪ ಎಲ್ಲಿರ್ದನೇನಾದೆನೆಂದು ಸುಯ್ದು
ಗರುವಾಯಿಗೆಟ್ಟು ಚಿಂತಿಸುತಿರಲ್ಕನಿತರೊಳು
ಪರಮೇಶ್ವರಂ ಪಂಚಮುಖ ದಶಭುಜಂಗಳಿಂ
ದಿರದೆ ನಿಜರೂಪಮಂ ತೋರಲಾ ನಂಬಿಯಣ್ಣಂ ಚರಣದೊಳ್ಕೆಡೆದನು ೩೩

೧ ಜ್ಜ (ಜ) ೨ ಹಮಂ (ಹ) ೩ ವ (ಹ) ೪ ತೋರೆಯ (ಹ)

ನೆನೆನೆನೆದು ಪೂರ್ವಮಂ ಬಿಕ್ಕುತಂ ಬಾಡುತಂ
ತನುಕಂದಿ ೧ಬಲ್ಪು೧ಳಿದು ಹೊರೆಯೇರಿ ನೋಡುತಂ
ಇನಿತು ದಿವಸಂ ವೃಥಾ ಸವೆದೆನೆಲೆ ಶಂಭುವೇ ಕರುಣಿಸೆಂದಡಿಗೆರಲು
ಕನಕಾದ್ರಿವಾಸನಾ ನಂಬಿಯುಂ ತೆಗೆದಪ್ಪಿ
ಮನವೊಸೆದು ಮಿಕ್ಕು ಮೂರ್ಧ್ನಾರ್ಘ್ರಾಣಮಂ೨ಗೈದು
ಇನಿತಿನಿತುಮೆನ್ನದಂತಂ ನಿನ್ನನಾಂ ಕಾಡಿದೆನು ಸೈರಿಸೆಲೆ ಸೌಂದರಾ ೩೪

ಹಾಡಯ್ಯ ನಂಬಿಯೆನುತಂ ತಾಳಮಂ ಕೊಡಲು
ವೀಡಾರುಡಾಪ್ತ ಕೇಳಾಂ ಹಾಡಬಲ್ಲೆನೇ
ನಾಡೊಳಜ್ಞಂ ನಾನು ನಾನೇನು ಬಲ್ಲವಂ ಎನುತೆ ಕರಮಂ ಜೋಡಿಸೆ
ಹಾಡುಹಾಡಯ್ಯ ಪುರದೊಳೆನ್ನ[೦]ಬೈದಂತ
ಹಾಡು ಹಾಡಣುಗ ನಿನ್ನೊಡನಾನು ದನಿಗೊಡುವೆ
ಬೇಡಿದುದನಿತ್ತು ಸಲಹುವೆನೆನಲ್ನಂಬಿಯಣ್ಣಂ ಪಾಡಲನುಗೈದನು ೩೫

ಪಿಚ್ಚನೇ ಪೆರೆಸೂಡಿದನೆ ಪರಮ ಪಶುಪತಿಯೆ
ಅಚ್ಚ ಸ೩ವಿ೪ಯೇ ಸು೫ಖಿ೫ದ ಸು೬ಖಿ೬ವೆ ನಂಬಿಯ ಪತಿಯೆ
ಸಚ್ಚರಿತ ನೀನೆನ್ನನಾಳ್ಮಾಡಿಕೊಳಲಲ್ಲೆನಲ್ಪಪ್ಪುದೇ ಶಂಕರ
ರಚ್ಚೆಗಿಟ್ಟಾಳೆನಲು ಧರ್ಮವುಂಟೇ ದೇವ
ಅಚ್ಚರಿಯೆನಲ್ನಿನಗೆ ತೊತ್ತಾದೆನೆಲೆದೇವ
ನಚ್ಚಿನಿನಗಾಳಾದುದಿಲ್ಲೆನಲ್ಪಪ್ಪುದೇಯೆಂದು ಪಾಡಲ್ನಂಬಿಯು ೩೬

ಸದುಮೇಶನಂದಾತನಂ ತೆಗೆದು ತಕ್ಕೈಸಿ
ಮುದದಿಂ ೬ಸ೬ಹಸ್ರ ಪೊನ್ಗಳನಿತ್ತು ಲೋಕದೊಳು
ವಿದಿತಲಿಂಗಾಲಯುಗಳೆಲ್ಲಿಯುಂಟಾಗಿರುತ್ತಿಹವಲ್ಲಿ ಪೋಗಿ ಪೋಗಿ
ಚದುರತ್ವದಿಂ ಪಾಡಿ ಸಾವಿರ ಸುಪೊಂಗಳಂ
ಹೆದರದಂತಂ ನಿಚ್ಚನಿಚ್ಚ ಕೊಳುತಂ ನೀನು
ಪದುಳದಿಂ ನಿನ್ನಿಷ್ಟವಿದ್ದಲ್ಲಿರುತ್ತಿಹುದೆನುತ್ತಾಡಿ ಬಯಲಾದನು ೩೭

---

ಬಿಲ್ಪು (ಹ) ೨ ಣಂ (ಹ) ೩ ಲಿ (ಹ) ೪ ಕ (ಹ) ೫ ಕ (ಹ) ೬ ಸಾ (ಹ)

ಇಂತು ತಿರುವೆಣ್ಣನಲ್ಲೂರಲ್ಲಿ ನಂಬಿಯಂ
ಕಂತುಹರ ತೊತ್ತುಗೊಂಡಿಹನೆಂಬ ವಾರ್ತೆಯು ದಿ
ಗಂತರಾಳದೊಳು ವ್ಯಾಪಿಸಲಿತ್ತಲತ್ತಲಿಂದೈತಂದರವನೀಶ್ವರರ್
ಸಂತರುಂ ಮಾನ್ಯರುಂ ಮೊದಲಾದಖಿಳ ಜನದ
ತಿಂತಿಣಿಯು ನೆರೆದುದೀಕ್ಷಿಸುವ ಕಾಂಕ್ಷಾಭರದೊ
ಳಂತವರನೆಲ್ಲರಂ ಕೂಡಿಕೊಂಡೈತಂದನಾ ನಂಬಿ ನಿಜ ನಗರಿಗೆ ೩೮

ಶರಿರಸಂಜಾತ ಮದಹರ ಮನೋಹರನೆಂದು
೧ಗಿರಿನಂದನಾಪ್ರೀತನೆಂದು ಆ೧
ಶರಣೆ ಅಮ್ಮವ್ವೆಯಳ ಕಂದಂಗೆ ಕಂದನೆಂದುಂ ತನ್ನನುಂ ಪೊಗಳುವ
ಉರುತರದ ಕೈವಾಟದೊಡನೆ ಬರಲತ್ತಲಾ
ನರಸಿಂಗಮೊನೆಯರತಿ ವಿಭವದೊಳಿದಿರ್ವಂದು
ಭರದಿಂದಲಾಲಿಂಗಿಸಲ್ಕೊಲ್ಲದೀತಂಗೆ ಮೈಯಿಕ್ಕಿ ನಿಂದಿರ್ದರು ೩೯

ಹರುಷ ಮಿಗಿಲಾಗಿ ಬಾಯಿಗೆ ಬಂದುದಂ ಪೊಗಳಿ
ನೆರೆಪುಳಕಿಸುತ್ತೆ ಪುರಕೊಡಗೊಂಡುಬಂದು ತ
ನ್ನರಮನೆಯಪೊಕ್ಕು ಸಿಂಹಾಸನದಿ ಕುಳ್ಳಿರಿಸಿ ಪಾದಂಗಳಂ ತೊಳೆವುತಾ
ಶಿರದೊಳಾನುತ್ತ ಕಂಗಳೊಳೊತ್ತಿಕೊಳುತ ಭಾ
ಪುರೆ ಭಾಗ್ಯವೆಯೆನುತಲಿರಲಿದಂ ಕೇಳುತ್ತ
ಭರದಿಂದೆ ಬಂದರಾ ಜಡೆಯನೈನಾರು ಯಸ್ಯಜ್ಞಾನಿಯರ್ಮುದದೊಳು ೪೦

ತಳುಹದಪ್ಪಲು ಹೆತ್ತ ತಾಯಿಮೊಲೆಯುಂ ತೊರೆಯೆಂ
ಪುಳಕಿಸುವ ಜಡೆಯನೈನಾರ ಮನವುಂ ತೊರೆಯೆ
ಸಲಹಿ[ರ್ದ]ನೃಪನ ಮೈತೊರೆಯೆ ನೋಟಕ ಜನದ ಕಂಗಳುಗಳುಂ ತೊರೆಯಲು
ಇಳೆಯಾಣ್ಮ ಸೌಂದರಂ ಪೆತ್ತವರಪೋಷಿದರ
ನೊಲವು ಮಿಗಿಲೆನೆ ನೋಡಿ ನೀವಂಜದಿರಿ ನಿಮಗೆ
ಸಲೆ ಶಿವನ ಕಾರುಣ್ಯಮುಂಟಿನ್ನ ಮೇಲಣ೩ಕ್ಕರವ೩ ನೀವತಿಗಳೆವುದು ೪೧

---

೧ ಎರಡೂ ಪ್ರತಿಗಳಲ್ಲಿ ಈ ಸಾಲು ಇಷ್ಟೇ ಇದೆ. ೨ ದ (ಜ, ಹ) ೩ ಕ್ಕಂ ವರವ (ಹ)

ಇಲ್ಲಿಂದವಿನ್ನೆನಗೆ ಪಾರ್ವತಿಯೆ ಪೆತ್ತವ್ವೆ
ಸಲ್ಲಲಿತ ಸರ್ವೇಶನಹ ಶಂಭುವೆನಗಯ್ಯ
ಬಲ್ಲವರಿಗೀಲೋಕಕಲ್ಲ ನಾಂ ಪರವಶಂ ಹರವಶಂ ಭರವಸವಿದು
ಎಲ್ಲಿ ಶಿವನಿರಿಸುತಿಹನಲ್ಲಿರುವೆ ನಾನ್ಯೆದೆ
ಬಲ್ಲಿದರು ಭಕ್ತರವರೇ ೧ನಂಮ್ಮ ಬಂಧುಗಳು
ತಲ್ಲಣಿಸದತಿಸಂತವಿಹುದೆನುತ್ತಾಡಿ ನಡೆದಂ ಜಯನಿನಾದದೊಡನೆ ೪೨

ನರಸಿಂಗಮೊನೆಯುರುಂ ಕೈಗೊಡಲ್ಪಡೆದವರು
ಹರಸಲುಂ ಪರಿಜನಂ ಪುರಜನಂ ಪೊರಮಡಲ್
ಶರಣಜನರೆಲ್ಲರುಂ ಜಯ ಜಯಪೆನುತ್ತಿರಲು ಭಟರ್ಯೆದೆ ಪೊಗಳುತಿರಲು
ನೆರೆ ಬೀಸುವಿಕ್ಕುವಾ ಚಾಮರದ ಸೀಗುರಿಯ
ವರರಭಸವೆನೆ ಪೊಯ್ವುತಿಪ ಪಟಹ ತಮ್ಮಟದ
ಬಿರಿದೆತ್ತಿ ಕರೆವ ಕಹಳೆಗಳಖಿಳ ಸಂಭ್ರಮದ ನಡುವೆಯ್ಯೆತರುತಿರ್ದನು ೪೩

ಜನದ ಮಹದಾನಂದರಸವದುಂ ಮಡುಗಟ್ಟೆ
ಘನವೆನಿಪ ಚೋಳಮಂಡಲವೆಲ್ಲ ಗುಡಿಗಟ್ಟೆ
ವಿನುತ ಭಕ್ತರ ಭಾಳಮುಂ ಪಟ್ಟಗಟ್ಟೆ ಭಕ್ತಿಯ ರಸಂ ಸೇತುಗಟ್ಟೆ
ಅನುಪಮದ ಪುಣ್ಯಫಲವ್ಯೆದೆ ಪೆರ್ಗೊನೆಗಟ್ಟೆ
ಮನಹೀನ ನಿಂದಕಾವಳಿ೨ಗಳು೩ ಸರಕುಗಟ್ಟೆ
ತ್ರಿಣಯನ ತನಯನಂದು ಪೊರಮಟ್ಟನಲ್ಲಲ್ಲಿ ನಿಲ್ಲುವವರಂ ನಿಲ್ಲಿಸಿ ೪೪

ಇಂತಾತನಾನಂದದಿಂದ್ಯೆತರುತ್ತಿರ೪ಲು೪
ಮುಂತೊರ್ವ ಭಕ್ತ ಗುಡಿಗಟ್ಟಿ ಕುಣಿವುತ್ತಿರಲು
ಕಂತುಹರನಣುಗನಹ ನಂಬಿಯಣ್ಣಂ ಕಾಣುತಾತನಂ ನೀವಾರೆನೇ
ಸಂತಸದಿ ಕೇಳರಸ ನಿನ್ನ ತೊತ್ತಿನ ತೊತ್ತು
ಸಂತತಂ ನಿನ್ನ ಮುಂದಿಂದು ಮೊದಲಾಗಿ ನಾಂ
ಚಿಂತಿಸದೆ ಧ್ವಜವನೆತ್ತುವ ನೇಮವಿಹುದು ಮತ್ತಿದೆಯೆನ್ನ ಸೇವೆಗೆಲಸಂ ೪೫

---

೧ ನಿ (ಹ) ೨ ಗು (ಹ) ೩ ಲ್ (ಹ)

ಎನ್ನ ನಾಮಂ ಪೇರುಮಳಲೆಯ ಕುರುಂಬರೆನೆ
ಉನ್ನತದ ಹರ್ಷದಿಂದಾ ನಂಬಿಯಣ್ಣಗಸುಂ೧
ಚೆನ್ನಸೆವ ಕೆಲಕೆಲವು ಶಿವಪುರಂಗಳ ನೋಡುತಂ ಪೊನ್ನುವಂ ಕೊಳುತ್ತಂ
ಗನ್ನವಹ ೨ಚೋಕ್ಕನಾಥೇ೩ಶನಂ ಕಾಣುತ್ತ
ಮನ್ನಣೆಯೆನಿಪ್ಪ ಕಕ್ಷಾಧಾರಮಮಂ ಪಡೆದು
ಸನ್ನುತಿಸಿಕೊಳುತ ತಿರುವಾರೂರ್ಗೆ ನಡೆತಂದನಪ್ರತಿಮ ಸಾಹಸಿಕನು ೪೬

ಇತ್ತಲಭವಂ ಭಕ್ತಜನವೆಲ್ಲವಂ ಕರೆದು
ಚಿತ್ತದೊಳು ಪೆಚ್ಚುತ್ತೆ ನೀವೆಲ್ಲರುಂ ನೆರೆದು
ಅತ್ಯಂತ ವಿಭವದೊಳಿದಿರ್ಗೊಂಬುದೆನ್ನ ಕಂದಂ ಬರ್ಪನೆಂದುಸುರಲು
ಪತ್ತನದ ಕೋಟಾನುಕೋಟಿ ಭಕ್ತರ್ಕೂಡು
ತುತ್ತಮಾಂಗನೆಯರಾ ಕಲಶ ಕನ್ನಡಿವಿಡಿದು
ಬಿತ್ತರದ ವಾದ್ಯಂಗಳಿಂದಿದಿರ್ಗೊಂಡರೆಲ್ಲರ್ಪೊಗಳುತಂ ನಂಬಿಯಂ ೪೭

ಪರಮಾನುರಾಗದಿಂ ಪುರದೊಳೈತರುತಿರಲ್
ಪರಿತಂದನಂಗನಾ ಉಪ್ಪರಿಗೆಯೊಳು ೩ನಿಂದು೩
ಪರವೆಯರನಲ್ಲಿ ಮುಂದಿರಿಸಿ ಪಿನ್ನಲೆಯೊಳು ಧನುಶ್ಶರಂಗಳ್ಕೊಂಡನು
ಧರೆಯೊಡೆಯ ನಂಬಿಯಣ್ಣಂ ಪರವೆನಾಚಿಯಂ
ನೆರೆಕಾಣಲುರೆಮನಂ ಧಿಗಿಲೆಂದು ಬೆದರಲಾ
ಪರವೆ ನಂಬಿಯನೀಕ್ಷಿಸಲ್ದಿಟ್ಟಿಸಟ್ಟುಸುರನಿಕ್ಕುತ್ತ ಹಾಯೆಂದಳು ೪೮

ಇತ್ತಲೀ ನಂಬಿ ಚಿಂತಿಸುತೊಳಗೆ ನೋವುತಂ
ಪತ್ತನದ ಜನದೊಡನೆ ಶಿವನಿಳಯಮಂ ಪೊಕ್ಕು
ಅತ್ಯಂತ ಸಂತಸದೊಳಭವಂಗೆ ನಮಿಸುತ್ತ ಪಾಡಿ ನಲಿದಾಡಿನೋಡೀ
ಮತ್ತಮತ್ತಪ್ಪುತ್ತ ಮೋಹದಿಂ ಮುದ್ದಿಸುತೆ
ಸತ್ಯನಿಧಿ ಶರಣೇಷ್ಟದಾತನೇ ಎನ್ನನುಂ
ತೊತ್ತುಗೊಂಡಯ್ಯನೇ ಕರುಣಿಸೆಂದಾಡಿ ಪಡಿವೊಂಗಳಂ ಪಡೆವುತಂದು ೪೯

---

೧ ನಂ (ಹ)  ೨ ಚೋಳಕ್ಕನಾಥೇ (ಹ)  ೩ X (ಹ)

ರಂಗಮಂಟಪದ ನಡುವೊಡ್ಡೋಲಗಂ ಗೊಟ್ಟು
ಸಿಂಗರದ ಸೊಬಗಿನಿಂದೊಪ್ಪಿರಲ್ಕಲ್ಲಿಗೆ ಬೆ
ರಂಗ ಬೀರುತ್ತಲೈತಂದರಾ ತಿರುನೀಲಕಂಠಪಾಣರೆನಿಪ್ಪವಾ
ಸಂಗೀತ ನಿಪುಣರುರುಗಾನದಿಂ¹ನಂಬಿಯ ಮ
ಸಂಗೊಂಡು ನವ್ಯವಸ್ತ್ರಾಭರಣಮಂ ಪಡೆದು
ಹಿಂಗದತ್ಯಂತ ಹರುಷದಿಂದಿರಲ್ಕನಿತರೊಳಗಿನನಸ್ತಗಿರಿಗಳಿದನು ೫೦

ಅನಿತರೊಳಗಲ್ಲಿಗೋರ್ವ್ವಾಂಗನೆಯುಳೈತಂದು
ಜನನಾಥನಾದ ಸೌಂದರಭೂಪನೇಕಾಂತ
ದನುವರಿದು ಬಿನ್ನೈಸಿದಳು ದೇವ ಕೇಳೀಗ ಪರವೆನಾಚಿಯೆನಿಪ್ಪವ
ವನಿತಾ ಶಿರೋಮಣಿಯು ನಿನ್ನ ಮೇಲಕ್ಕರಂ
ಘನವಾಗಿ ಎನ್ನನಟ್ಟಿದಳವಳ ಸಂತಾಪ
ವೆನಿತೆಂದುಸುರಬಹುದು ಎನಿತುವರ್ಣಿಸಲಹುದು ಕೇಳಯ್ಯ² ಸೌಂದರೇಂದ್ರ ೫೧

ಕೋಲು ತಾಗಿದ ಹುಲ್ಲೆಯಂತೆ ಹೊರಳುತ್ತಿಹಳು
ಪಾಲುಗಾಣದೆ ಹಸಿದ ಹಂಸೆಯಂತೊರಲುಸುವಳು
ಮೇಲನೊಂದರಿಯದೆ ವಿರಹದಿಂ ಬಳಲ್ದಿಪ ಚಕೋರಿಯಂತೊಪ್ಪಿರ್ಪಳು
ಆ ಲಲನೆಯಳ ಬಳಿಗೆ ಇಂದು ಚಂದ್ರೋದಯದ
ಕಾಲಕೈತಂದು ಸಂತಾಪಮಂ ತವಿಸಿ ನೀಂ
ಪಾಲಿಸುವುದೆಂದವಳು ಬೇಡಿಕೊಳಲಂತಾಗಲೆನುತೀತ ಮುದವಾಂತನು ೫೨

ಮುನ್ನಂಗಜಂ ಬಿತ್ತಿದುರು ಮೋಹದಂಕುರಂ
ಇನ್ನಿವಳ ನುಡಿಯೆಂಬ ಮಳೆಯಿಂದ ಪಲ್ಲವಿಸ
ಲುನ್ನತದ ಹರ್ಷದಿಂದಾ ನಂಬಿಯಣ್ಣನುಂ ತುಂಬುರನ ಮೊಗವೀಕ್ಷಿಸೆ
ಎನ್ನಯ್ಯ ಚಿತ್ತವೆಂತಿರ್ದುದಂತಂ ನೆಗಳ್ವ
ದೆನ್ನಲಾ ಮಂತ್ರಿಯು ಸುಜಾಣ್ಣುಡಿಗೆ ಮನದಲ್ಲಿ
ನನ್ನಿಯಂ ತಾಳ್ದು ಮಜ್ಜನವೆಸಗಿ ಶಂಭುಪ್ರಸಾದಾಮೃತವನೆ ಸವಿದು ೫೩

---

ಳೈ (ಹ)  ೨ ರಿ (ಹ)

ಚಂದದಿಂ ರಂಗಮಂಟಪದಲ್ಲಿ ಕುಳ್ಳಿರಲು
ಬಂದು ತುಂಬುರನು ಕತ್ತುರಿಯ ತಿಲಕವನಿಟ್ಟು
ಚಂದನಂಗಂನುದ್ವರ್ತನಂ ಮಾಡಿ ತೋರಹಾರಂಗಳಂ ಕೊರಳಿಗಿಕ್ಕಿ
ಸುಂದರದ ರತ್ನಮುದ್ರಿಕೆಗಳಂ ಬೆರಳ್ಗಿತ್ತು
ಅಂದವಹ ನವ್ಯಶುಭ್ರಾಂಬರವ ತೆಗೆದುಡಿಸಿ
ಮಂದೈಪ ಬೆಳಗುವ ದುಕೂಲಮಂ ಪೊದಿಸಲನಿತರೊಳು ಶಶಿಯುದಯಿಸಿದನು ೫೪

ವಿಳಸದಳಿ ಗಿಳಿ ಕೋಗಿಲೆಗಳಿಂಚರಂಗಳಿಂ
ದೊಳಕೊಂಡು ನಿಬಿಡ ಫಲಪುಷ್ಪ ಪತ್ರಂಗಳಂ
ತಳೆದು ತರುಗುಲ್ಮಂಗಳಿಂದೆ ರಾಜಿಪ ಬನದ ಸೊಗಸು ಮಿಗೆ ದರ್ಶನದೊಳು
ಸುಳಿವ ಮಂದಾನಿಲನ ಸೊಗಸು ಸೋಂಕಿನೊಳೀ ಎ
ರಳೆಗುರುಪನಂ ನೋಡೆ ದರ್ಶನ ಸ್ಪರ್ಶನಂ
ಗಳೊಳು ಸೊಗಸೀವಂನೀವನೇಂ ಸುಕೃತಿಯೆಂದು ಪೊಗಳಳಲ್ಮೆರೆಳದನಬ್ಜಾಹಿತಂ ೫೫

ವಸುಧೆಯೊಳಗಖಿಳ ಸಸಿಣಯಂಚ ಬೆಳಸಿ ಕೀರ್ತಿಯಂ
ಪಸರಿಸಿದಳವಳು ವರ್ಷಾಕಾಲಮೆಂದೆಂಬ
ಕುಶಲಾಂಗನೆಯುಳದೇನರಿದಲ್ಲವೀ ನಿರಾಧಾರ ಮಾರ್ಗಾಂತರದೊಳು
ಸಸಿಯೊಂದನಂ ಬೆಳಸಲೀಕೀರ್ತಿಧರೆಯನುಂ
ಮುಸುಕಿಹುದು ಶರಧಿಯಂ ಮುಸುಕಿಹುದು ಗಿರಿಗಳಂ
ಮುಸುಕಿಹುದು ಸೈಯೆನುತ್ತಂ ಶರತ್ಕಾಲಸಖಿಯಂ ಪೊಗಳ್ದೊಲಬ್ಜನೆಸೆದಂ ೫೬

ಇಂತು ತನ್ನಂ ಕರೆಯಬಪ್ಪ ಕಾಮನ ಸರಳಿ
ನಂತೆ ಚಂದ್ರೋದಯಮುದೋಪ್ಪೆ ಶಿವನನುಮತನೊ
ಳುಂ ತವಕದಿಂದಲೆಳಲತೆಯ ಸೆರೆಯಂ ತೆಗಿಸಲೈತಹ ವಸಂತನಂತೆ
ಪಂಥದಿಂದೆವ್ವನದ ಮುದ್ರೆಯನೊಡೆಯಲಾಗಿ
ಸಂತಸದೊಳೈತಪ್ಪ ಕಾಮಾವನಿಪನಂತೆ
ಮುಂತೆ ಪೊಸಪರಿಮಳವನಪಹರಿಸಲೈತಪ್ಪ ಮಧುಕರನೊಲಾ ಸೌಂದರಂ ೫೭

---

೧ ಮ (ಹ) ೨ ಲ (ಹ) ೩ ನೀ (ಹ) ೪ ಳ್ಮೆರೆ (ಜ)
೫ X (ಹ) ೬ ಯ (ಹ) ೭ ಪ್ಪ (ಜ)

ಪರವೆಯರ ಮನೆಗೈತರಲ್ಕೆ ಪರಿಚಾರಕರ್
ಕರೆದೊಯ್ದರೇಕಾಂತದೆಡೆಗದಿನ್ನೇನೆಂಬೆ
ವರಹಂಸ ತೂಲತಲ್ಪದಲಿ ಮಂಡಿಸಲೊಡನೆಯ್ತಂದಳಾ ಪರವೆಯು
ನೆರೆ ವಸಂತಂ ಮದನನುಂ ಮುಹೂರ್ತಂ ಗೊಡಲು
ಪರುಮೋಗಳ್ಪರಿಪರಿಯ ಮಂಗಳ[ಳಂ]ಳ ಪಾಡಲುಂ
ಸರಸವನಲಕ್ಷ್ಮಿ ಪಳುಕಿನ ತಳಿಗೆಯುಳ[ಲ್ಲ]ಳರಳ ಮಂಗಳಾರತಿಯನೆತ್ತಿ ೫೮

ರತಿದೇವಿ ಪೂನನೆಗಳಿಂದೆ ಸೇಸೆಯನಿಕ್ಕಿ
ಚತುರರಾನಂದದಿಂ ತಾಂಬೂಲಮಂ ಸವಿದು
ಅತಿಹಿತದೊಳೀರ್ವರಂಗಜಕೇಳಿಗನುಕೂಲಿಸಿದ ಸುಖವನೇಂ ಪೊಗಳ್ವೆನು
ಮತಿ ಸಮಂ ರೂಪ ಸಮ ಸಮಯೌವನಂ ಮತ್ತೆ
ಯತಿಶಯದ ಭಕ್ತಿ ಸಮಭಾಗ್ಯ ಸಮ ಸಮ ರಾಗ
ನುತಿಸಲೀರ್ವರೊಳು ಸಮವಾದ ಸಮರತಿಯುಪರತಿಯ ಸುಖದೊಳೊಪ್ಪಿರ್ದರು ೫೯

ನೆನಹಿಂಗೆ ಚುಂಬಿಪರು ಮುಖಕೆ ಮುದ್ದಿಡದಿಹರೆ
ಮನವನಪ್ಪಿರ್ದವರು ತನುವನಪ್ಪದಲಿಹರೆ
ಎನಿತುಸುರ್ವ್ವೆ ಕನಸಿನೊಳು ಕಳವಳಿಸುತಿರ್ಪರುಂ ಸವಿನುಡಿಯ ನುಡಿಯದಿಪರೆ
ಅನುರಾಗವಿಮ್ಮಡಿಸಿ ಪುಟ್ಟಿರ್ದ ಘನಸುಖಂ
ಮನಕೆಚ್ಚರಿಲ್ಲವೆಂಬಂತೆ ಪರವಶವಾಗಿ
ಇನಿತನಿತು ಪೊಗಳ್ತೆಂಬುದಂತಿರಲಿ ತದ್ದಿನದಿರುಳು ನಿಮಿಷವಾಗಿ ತೋರೆ ೬೦

ಸುರತ ಸುಖಶರಧಿಯೊಳು ದಂಪತಿ ತೆರೆಗಳೆಂಬ
ಶರದಿ ತೇಂಕಾಡುತಿಬ್ಬರ ಕಾಮದಬ್ಬರಂ
ನೆರೆ ಮಳಲ ರೂಹು ಮಳೆಕೊಂಡಂತೆ ಶಶಿಯನಪ್ಪಿದ ಚಂದ್ರಕಾಂತದಂತೆ
ಮರವಡಗುತೆಚ್ಚರಂ ತಲೆದೋರಲಾ ಸುಖಂ
ಭರದಿಂ ಶಿವಾರ್ಪಣದ ಕಾರಣಮುದಾಗುತಿರೆ
ಪರಮನಹ ನಂಬಿಯಣ್ಣಂ ಪರವೆಯರ ಮನೆಯೊಳಿಂತಿರಲ್ಬೆಳಗಾದುದು ೬೧

---

೧ ವೆ (ಹ) ೨ ಳುಂ (ಜ, ಹ) ೩ ಲ್ಲೆ (ಜ, ಹ)

ಚೇರಮಂ ಬರಲಾತನೊಡನೆ ಹಿತದಿಂದಿರುತೆ
ಧಾರುಣಿಯ ಜನರಿಂದೆ ಪೂಜ್ಯತೆಯನಾನುತ್ತೆ
ಕ್ರೂರಗುಣದವರ ಮದಮಂ ಮುರಿದು ತಗ್ಗಿಸುತೆ ಭಕ್ತರಿಚ್ಛೆಯ ಸಲಿಸುತೇ
ಮಾರಾರಿ ಭಕ್ತರೆಂದೆನಿಸುವಾ ಸೋಮಸೀ
ಮಾರರುಂ ಬೇಡಿಕೊಳಲವರ ಕಾರ್ಯಂಗೈಸಿ
ವೀರ ಕಲಿಕಾಮನುಪಟಳವ ಸಂತೈಸಿ ಸುಖದಿಂದಾತನಿರುತಿರ್ದನು ೭೨

ಸಿರಿಯು ಹೆಮ್ಮಗನ ಶಿರವರಿದೆ ಮೊಮ್ಮನ ಶಿರಂ
ಶರಭನಿಂದಳಿದೆ ಸೊಸೆಯಂ ಮೂಗ ಕೊರೆಸಿದೆನು
ಕಿರಿಯಣುಗನಂಗಮಂ ಬಿಡಿಸಿದೆನು ಪತಿಯ ಕಣ್ಣಂಗಳೆದೆನೆನ್ನೊಳಾಕೆ
ಇರುವುದಿನ್ನೆಂತು ಭಾಗ್ಯಂ ಬರುವುದೆನಗೆಂತು
ನೆರೆಯೆನ್ನ ಭಕ್ತರೇ ಸಿರಿಯೆನ್ನ ಬಳಗವ
ಲ್ಲಿರುವೆನೆಂದಿರ್ದಂತೆ ನಂಬಿಯರ ಬೆಂಬಳಿಯೊಳಿಡೆಯಾಡುತಿರ್ದಂ ಶಿವಂ ೭೩

ಸುಜನ ಸಂತತಿಯ ಹೃತ್ಕುಮುದಂಗಳರಳಿದುವು
ಕುಜನ ಕುಲಮಾನಸಾಬ್ಜಾಳಿಗಳ್ಕೊರಗಿದುವು
ಭಜನಾನುಕೂಲ ಸದ್ಭಕ್ತರಾನಂದಾಬ್ಧಿ ಪೆರ್ಚುಗೆಯನಾಂತಿರ್ದುದು
ನಿಜಕೀರ್ತಿ ಚಂದ್ರಿಕೆಯು ಪಸರಿಸಿದುದಾಶ್ರಿತ
ವ್ರಜ ಚಕೋರಂಗಳಿಗೆ ತಣಿವಾದುದಖಿಳಭೂ
ಭುಜ ಶಿರೋರತ್ನ ಸೌಂದರನಾಥನೆಂಬ ರಾಜನ ವಿಜಯದಭ್ಯುದಯದೊಳ್ ೭೪

ಅಂತು ಸಂಧಿ ೨ಕ್ಕಂ ಪದಗಳು ೮೯ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

---

೧ ಯಂ ಕಣ್ಣಂಗಳಂ (ಹ)

## ಸಂಧಿ : ೩

ಸೂಚನೆ :

ಸಂಪಿಯಣ್ಣಂ ಭಕ್ತವರ್ಯನಹ ಮೆರೆಮಿಂಡ
ನಿಂ ಭಕ್ತತತಿಗೆ ಪೊರಗಾಗಿ ಕಿಂಕರತೆಯಿಂ
ಸಾಂಬನಿಂದರುವತ್ತುಮುವ್ವರಿತಿಹಾಸಮಂ ಕೇಳಲುದ್ಯೋಗಿಸಿದನು

ಈ ತೆರದ ವಿಭವದಿಂ ಕೆಲವುದಿನಮಲ್ಲಿರ್ದು
ಭೂತಲದ ಲಿಂಗಂಗಳಂ ಕಂಡು ಮತ್ತೆ ಸಂ
ಪ್ರೀತಿಯಿಂ ಪೊಂಗಳಂ ತಂದೀ ಪರವೆಗೀವೆನೆಂದಾತ ಪೊರಮಟ್ಟನು
ಚಾತುರ್ಯ ಗುಣೆಯೆನಿಪ ತುಂಬುರಂವೆರಸಿ ನಿಜ
ಚಾತುರಂಗಂವೆರಸಿ ಗುಡಿಯನೆತ್ತುವ ಕೀರ್ತಿ
ಚಾತುರ್ದಿಶಾಪೂರ್ಣನಹ ಪೇರುಮಳಲಿಯ ಕುರುಂಬರಂ ಕೂಡಿಕೊಂಡು ೧

೧ + ನಂ

ದಂ ಧಣಧಣಾಂ ಧಣಿತಮೆಂದಾರ್ಭಟಿಸುತಿರ್ಪ
ದುಂದುಭಿಯ ರವ ಪಟಹ ಡಿಂಡಿಮಗಳ ನಿನಾದ
ವಂದಿಗಳ ಪೊಗಳಿಕೆಯ ಶಬ್ದ ಕಹಳಾಧ್ವನಿಗಳೆಲ್ಲಮುಂ ಸಂದಣಿಸುತೇ
ಚಂದದಿಂದುರು ದಿಕ್ತಟಕ್ಕೆ ಧೀಂಕಿಡೆ ನಡೆದ
ನಂದು ಸೌಂದರ ಪೇರುಮಳೆ ಕೆಲವು ಶಿವಪುರಗ
ಳಿಂದೆ ತಾನಾನಂದಿಸುತ್ತಲೈತಂದು ತಿರುವತ್ತಿಯೂರಂ ಪೊಕ್ಕನೂ ೨

ಅಲ್ಲಿರ್ಪ ಸಂಕಿಲಿಯರೀತನಂ ಕಾಣುತ್ತ
ಪುಲ್ಲಶರ ತಾಪದಿಂ ಕ್ರೀಡಾವನವ ಪೊಕ್ಕು
ಮಲ್ಲಿಗೆಯ ಹಸೆಯಲ್ಲಿ ಮೈಯನೀಡಾಡಿ ಬಾಳೆಯ ಬಿಜ್ಜಣಿಗೆಯ ಪಿಡಿದು
ಮೆಲ್ಲಮೆಲ್ಲನೆ ಬೀಸಿಕೊಳುತಂಗಲಿನೀರ್ಗಳಂ
ಚೆಲ್ಲಿಸಿಕೊಳುತ್ತಬ್ಜಪತ್ರಂಗಳಿಂದೈದೆ
ನಿಲ್ಲದೊತ್ತಿಸಿಕೊಳುತ್ತಡಿಗಡಿಗುಸುರನಿಕ್ಕುತಾಹಾಯೆನುತ್ತಿರ್ಪಳು ೩

ಸಸಿಬಿಸಿಯಶೋಕಂ ಶೋಕಂ ವಿವರಿಸಲ್ಕೆ
ಕಿಸಲಯವಿದಸುಲಯಂ ಸುರಭಿಯುರುಭೀರುವುಂ
ವಿಶದ ಸಂಪಗೆ ಪಗೆ ಫಳಂ ನೀಃಫಳಂ ಮಗುಳೆ ಮಾಮರಂ ತೋಮರಮಿದು
ಮಿಸುಪಲತೆಯುಸಿಲತೆಯುಮೀಕೊಳಂ ಕೊಳಗುಳಂ
ಪಸರಿಸಿದ ಬೆಳುದಿಂಗಳಂ ತೊಳಗುಪಿಂಗಳಂ
ಲಸಿತರಂಭಂ ತಾಪದಾರಂಭಮೆಂದು ನುಡಿದಳ್ವಿರಹದಿಂದಾ ಸಖೀ ೪

ನೆರೆಕಾರಮುಗಿಲ್ಗೆ ಚಾದಗೆ ಪುಷ್ಪಕಾರಡಿಯು
ವರವನಕೆ ಕೋಕಿಲಂ ವಾರಿರುಹಕಾದಿತ್ಯ
ನುರುಕುವಲಯಕ್ಕಮೃತರೋಚಿ ಕಾಸಾರಕ್ಕೆ ಘನವೆನಿಪ ರಾಜಹಂಸಂ
ಸರಸುವಿಹ ಫಳಕೆ ಶುಕನೀಶಭಕ್ತಿಗೆ ಭಕ್ತ
ನಿರದಾಸೆವಡುವುದಕ್ಕೆ ಪಡಿಯಾದ ಸಂಕಿಲಿಯೊ
ಳರಸಾದ ಸೌಂದರಂ ಶಿವನನುಮತದೊಳಂದು ಸುರತಸುಖದಿಂದಿರ್ದನು ೫

೧ ತ (ಹ) ೨ ವಾ (ಹ) ೩ ಕ್ಕೆ (ಜ)

ಸವಿಂಸು ಲತೆಯ್ಕೈದೆ ತವರಾಜಡ ಸಸಿಯುನಪ್ಪ
ದಪ್ಪೊಲಪ್ಪೆ ಲಜ್ಜೆಯುವ ಲಂಚಗೂಳಿಯು ಸೋಟ
ಪ ವಿಕಲಂ[ತೆ]ಂಯು ಯಪೌಪಸಂ ಮನಸಂ ತೀವಿರ್ದ ಸುಖಮೋಹಿನಿಯು ಮುಗ್ಧೆಯು
ಭವಮೀಸಲಡ ಮನಸಂ ತನ್ನತ್ತ ಸೆಳೆಯಲಂ
ದವಯುವಂಗಳು ತಮ್ಮ ತಪ್ಪೊಳಾಲಿಂಗಿಸುತೆ
ಕವಿವ ಪರವಶವ ಸುಖದಿಂದಿರುಳ್ಪಗಲೆಂಬುದರಿಯದೊಪ್ಪಿರುತಿರ್ದನು ೬

ಕೆಲಬಲನನರಿಯದೆ ಮನವನರಿಯದಾನೆಂಬ
ಸುಳುಹರಿಯದಂಗವರಿಯದೆ ಬುದ್ಧಿಯರಿಯದಾ
ಚೆಲುವೆ ಸಂಕಿಲಿಯಲ್ಲದುಳಿದುಪೆಣ್ಲಿಂ ಗಂಡು ಸೌಂದರಾಧಿಪನಲ್ಲದೆ
ಉಳಿದುದೆಲ್ಲವನು ಹೆಣ್ಣಾಗಿ ತೋರುತ್ತಿರ್ಪ
ರೊಳಗಿಂತು ಭಾವಮುಂಟಾಗಿ ದ್ವೈತಾದ್ವೈತ
ಸಲೆಸುಖಿಗಳಾಗಿ ಶಿವನಂ ಮರೆದು ವರ್ಷಮೂರಾಗಲಿಂತಲ್ಲಿರ್ದನು ೭

ಅಲ್ಲಿಂ ಮಹೇಶನಾಜ್ಞೆಯನಾಂತು ಸೌಂದರಂ
ಸಲ್ಲೀಲೆಯಿಂದೆ ನಿಜ ಚಾತುರಂಗಂವೆರಸಿ
ಮೆಲ್ಲಮೆಲ್ಲನೆ ಶಿವಪುರಂಗಳಂ ನೋಡುತಂ ಪಾಡಿ ಪೊನ್ನಂ ಪಡೆವುತಂ
ಉಲ್ಲಾಸದಿಂದೆ ಚರಿಸುತ್ತ ತಿರುವಾರೂರ್ಗೆ
ನಿಲ್ಲದೈತರಲಾ ಪುರದ ಬಹಿರ್ಭಾಗದೊಳು
ಸಲ್ಲಲಿತ ನಂದನವಿರಲ್ಕಾಣುತಾ ಸಂಬಿ ಪೊಕ್ಕನಾನಂದದಿಂದೆ ೮

ಹೊಸ ಮಾವಿನಂಕುರಕ್ಕೆಳಸುವ ಪಿಕಂಗಳಂ
ರಸಫಳಂಗಳನರಸುತಿರ್ಪ ಶುಕನಿಕರಮಂ
ವಿಶದ ಕುಸುಮಂಗಳಂ ಬಯಸಿ ಸಂಚರಿಸುತಿಹ ಬಂಡುಣಿಯ ಹಿಂಡುಗಳನು
ಕುಶಲದಿಂದೊಪ್ಪಿಹ ಮಯೂರ ಹಂಸಂಗಳಂ
ಲಸಿತ ಸರಸಿಜ ಕುಮುದಕುಲವಿಹ ಸರಂಗಳಂ
ವಸುಮತೀಶ್ವರ ಸೌಂದರಂ ತುಂಬುರಂವೆರಸಿ ನೋಡುತ್ತಲಿರುತಿರ್ದನು ೯

---

೧ ಕ್ಕೆ (ಹ,ಚ) ೨ ಲ್ಲ (ಹ) ೩ ತಿರ್ಪ (ಹ) ೪ ಲ್ಲಿ (ಹ)
೫ X (ಹ) ೬ ತಾ (ಹ)

ಪಗಲೊಳ್ಪೈದೀಕ್ಷಂ ಚಂದ್ರನಂ ಕಂಡು ಪದ್ಮಿನೀಸು
ನಗೆಯಿಂದ ನುಡಿದಳಿವನಾಪನೌ ಕುಮುದಿನಿಯು
ಬಗೆಯುತಿರ್ಪದ್ವಿಜಾಧಿಪಂ ಬಂದನೇಕೌ ಲೋಕಯಾತ್ರಾವಿಷಯಕ್ಕೈದಿಹಂ
ಮಿಗೆ ಪಾದಹೀನನಿವ ಯಾತ್ರೆಯಹುದೆಂತು ನಿ
ನ್ನಗೆಳೆಯ ಕರಂಗಳಿಂ ಪಿಡಿದಿಹಂ ಪಾದಮೇಲಿ
ಸುಗುಣೆಯೆನಲಬ್ಜಿನಿಯು ಮೆಚ್ಚಿತ್ತಹಾರದೊಳಲ್ಸರದ ಸೀಕರವೆಸೆದುವು ೧೦

ಮಾಮರಂಗಳನು ಮನದೊಳು ಹಿಗ್ಗಿ ನೋಡುವಳು
ಆ ಮಹಾತೆಂಗು ಖರ್ಜೂರಗಳನಾಂತಿಹಳು
ಕಾಮಿಸುತೆ ಕದಳಿಕ್ರಮುಕ[ಕ]ಪರ್ವ ಕಳಮೆಗಳಿಗಾಶ್ರಯವನಿತ್ತಿರ್ಪಳು
ರಾಮಣೀಯಕ ಜಂಬು ನಿಂಬೆಗಳಿಗೊಪ್ಪಿಹಳು
ಕೋಮಲದ ಕುಸುಮಲತೆಗಳನ್ನೈದೆ ಕರೆವವಳು
ಪ್ರೇಮವಿಲ್ಲದ[ಲೀ]ವನಾಂಗನೆಯು ಕೇದಗೆಯನ್ನೈದೆ ಪೊರಗಿಟ್ಟಳೇಕೆ ೧೧

ಸಾರ ಕುಟಿಲಾಚರಣೆಯಿಂ ಜಗತಾಪ್ರಾಣಾಪ
ಹಾರದಿಂ ದ್ವಿರಸನಃಲನ್ಯಲತದಿಂ ಭಯಂಕರಾ
ಕಾರದಿಂದಧ್ಯಕ್ಷರಾದ ಶ್ರುತಿಹೀನ ದ್ವಿಜಾವಳಿಯ ಸಂಗದಿಂದೆ
ಘೋರ ಪಂಕೋತ್ಪತ್ಯರಾದಿರಿ ಸಕಂಟಕಾ
ಚಾರ್ಯರೆನಿಸಿದಿರಿ ಶಂಭುವಿಗನರ್ಪಿತರಹಿರಿ
ದೂರಾ[ಗಿ]ರೆಂದು ಬನದೇವಿ ನೂಂಕಿದ ತೆರದಿ ಪೊರಗಾಯ್ತು ಕೇದಗೆ ಬನಂ ೧೨

ಇಂತಾ ವನದ ಸೊಬಗನೀಕ್ಷಿಸುತೆ ನಂಜಿಯ
ತ್ಯಂತ ಹರ್ಷದೊಳಿರಲ್ಕೀವಾರ್ತೆಯಂ ಕೇಳ್ದು
ಸಂತಸದಿ ಪುರದೊಳಿಹ ಭಕ್ತರೆಲ್ಲರ್ಬಂದು ನಮಿಸುತ್ತಲಂದಿನಿರುಳಂ
ಚಿಂತಿಸದಲಲ್ಲಿರ್ದು ನೃತ್ಯ ಗೀತಂಗಳಿಂ
ಕಂತುಹರನುನ್ನತವ ಮೆರೆವ ಶಿವಕವಿಗಳಿಂ
ಸಂತರಿಂದಮಿತ ಸುವಿನೋದಂಗಳಿಂದಿರಲ್ಕನಿತರೊಳ್ಬೆಳಗಾದುದು ೧೩

---

೧ ಯ (ಹ) ೨ ಲ್ವಿ (ಜ) ೩ ಚಿ (ಹ) ೪ ಲ್ಬ (ಹ) ೫ ಹ (ಹ)
೬ ಕೌ (ಹ, ಜ) ೭ ವೀ (ಹ) ೮ ಪ್ಪ (ಹ) ೯ ಗ (ಹ, ಜ)

ಸರರಾಯುಪೆಂಬ ರಾಶಿಯುಸಗೊಳಿಸುವ ಕೊಳಗನೆನೆ
ನೆರೆಮಾಳ್ಪ ಸತ್ಕರ್ಮಗಳಿಗಿಪಂ ಬಳಗನೆನೆ
ಧರೆಯ ಜೀವರ್ಗೆ ಸಂತಸವೀವ ಬೆಳಗನೆನೆ ದುಗುಡದಿಂ ಪೊಗವ ಮುಗಿದ
ಸರಸಿಜಂಗಳನು ನಗಿಸುವ ಚತುರ ಪುರುಷನೆನೆ
ವಿರಹದಿಂದುರಿವ ಚಕ್ರಂಗಳ್ಗೆ ಹರ್ಷವೆನೆ
ಭರದಿಂದೆ ಮೂಂದೆಯರನೊಕ್ಕಲಿಕ್ಕುತ್ತುದಯಗಿರಿಯನೇರಿದನರ್ಕನು ೧೪

ಆ ಸಮಯದೊಳು ನಂಬಿಯಣ್ಣನತಿ ವಿಭವದಿಂ
ಸೂಸುವ ಪಟಹ ಕಹಳೆ ತಮ್ಮಟ ಧ್ವನಿಗಳಿಂ
ಬೀಸುವ ಚಮರಿಗಳ ನಿಕರದಿಂದಲೆತ್ತಿರ್ದ ಶ್ವೇತಾತ ಪತ್ರದಿಂದೆ
ಭಾಸುರವೆನಿಪ ಪೇರುಮಳಲೆಯ ಕುರುಂಬರುಂ
ಲೇಸೆನಿಪ ಧ್ವಜವನೆತ್ತಲ್ಕಾತುರಂಗದೊಡ
ನೀಶನಣುಗಂ ಜಯೋತ್ಸಾಹದಿಂ ನಡೆದನಾ ಪುರವ ಶಿವದರ್ಶನಕ್ಕೆ ೧೫

ಅತ್ತಲಾ ಪುರದಲ್ಲಿ ಮೆರೆಮಿಂಡದೇವನೆಂ
ಬಿತ್ತ್ಯುತ್ತಮದ ಭಕ್ತನತಿದಯಾಪರನಮಲ
ಚಿತ್ತನಂದಮಿತ ಭಕ್ತರ್ವೆರಸಿ ಲಿಂಗಾಲಯದ ರಂಗಮಂಟಪದೊಳು
ಬಿತ್ತರದ ಸಭೆಯೊಡನಿರಲ್ಕನಿತರೊಳು ನಂಬಿ
ಯುತ್ಯಂತ ರಭಸದಿಂದೈತಂದು ಶಿವನಿಳಯ
ದೊತ್ತಿನಲಿ ತುರಗವನಿಳಿದು ಎಡಬಲದ ಭಕ್ತರಂ ಗಣಿಸದೊಳಪೊಕ್ಕನು ೧೬

ಹರನ ಸಲುಗೆಯಲಿ ಲಿಂಗವನಪ್ಪಿಕೊಂಡಾಡು
ತಿರಲಿತ್ತ ಮೆರೆಮಿಂಡದೇವನಾ ಸಭೆಯೊಳಗೆ
ಉರಿದೆದ್ದು ಭುಗಿಲೆನುತ ನುಡಿದನೆಲ್ಲರ್ಕೇಳಲಜಸುರಪ ಮೊದಲಾದವರ್
ಎರಗುವರ್ಭಕ್ತರ್ಗೆ ದೇವ ದೈತ್ಯಾವಳಿಗ
ಳೆರಗುವರ್ಭಕ್ತರ್ಗೆ ಮುನಿಪೌಳಿಗಳ್ಕತ್ತೆ
ಎರಗುವರ್ಭಕ್ತರ್ಗೆ ಶಿವನು ನಾವನತಿಗರ್ವದಿಂದಲೊಳಪೊಕ್ಕನೆನಲು ೧೭

---

೧ ಳ (ಜ) ೨ X (ಹ) ೩ X (ಹ) ೪ ತ್ಯಾಂ (ಹ) ೫ ದ (ಹ)

ಎಲೆದೇವ ಸೌಂದರಾಧಿಪನಿಪಂ ಶಂಕರನೆ
ಸಲುಗೆಯ ಸುತಂ ಮಹಾಭಕ್ತಿಯುತನೆನೆ ಕೇಳ್ದು
ಘಳಿಲನೆ ಕೆರಳ್ದು ಘುಡುಘುಡಿಸಿ ತೆಗೆತೆಗೆ ಇಂವನಂ ಭಕ್ತನೆಂ ಶಿವನೊಲುಮೆಯೇಂ
ಲಲಿತವಹ ಭಕ್ತರಿಂಗೆರಗದನ ಭಕ್ತಿಯಂ
ಸಲೆ ಶಿವಂ ಕೈಕೊಂಬನೇ ಭಕ್ತತತಿ ಮುಳಿಯೆ
ನೆಲದೇರನೊಲಿದು ರಕ್ಷಿಪನೇ ಶರಣವಿತತಿ ಶಿವಶಿವಾ ಹರನ ವಶವೇ ೧೮

ಎರಗಿದೊಡೆ ಬೊಮ್ಮನಂ ಕಂಬವಂ ಮಾಡುವರು
[1]ಎರಗಿಡಡೆ ಕಂಬವಂ ಬೊಮ್ಮನಂ ಮಾಡುವರು[1]
ನೆರೆಭಕ್ತಿಹೀನನಾದಡೆ ಕಾಲನಾಗಲೇಂ ಒರಸುವರತುಲ ಭಕ್ತರು
ಭರದಿಂದ ಪೋಯ್ ಡಂಗುರವನವಂ ಪೊರಗೆಂದು
ಪೊರಗೀ ಸಭೆಗೆ ಯಾಪನಾದೊಡಂ ಪೊರಗೆನಲು
ಶರಣರೆಲ್ಲುಘೆಯೆಂದು ಪಾದ್ಯಂ ಗೊಡಲು ಮುನಿದನೀ ನಂಬಿಯಣ್ಣ ಕೇಳ್ದು ೧೯

ತನ್ನ ಮೇಲಣ ಗಣಂಗಳ ದಾಳಿಯೆಂದರಿದು
ಇನ್ನೆಂತು ಮಾಳ್ಪೆನೆಸುತಸುವಳಿವ ಭಯವಡೆದು
ಗನ್ನತನವನು ಜಾರಿ ಎಡವುತಂ ತಾಗುತ್ತಲೋಡಿದಂ ಶಿವಳಿಸಿ ಬನಕೇ
ನನ್ನಿಯುವರೊಂದೆಸೆಯು ನಿಜತುರಗವೊಂದೆಸೆಯು
ಮನ್ನಣೆಯ ಪರಿಜನಂ ಪುರಜನಂ ಒಂದೆಸೆಯು
ಚೆನ್ನೆಸೆವ ಕೊರಳ ಪೂಮಾಲೆಯೊಂದೆಸೆ ತಾನದೊಂದೆಸೆಯೆನಲ್ಪೋಡನು ೨೦

ಕರವೆತ್ತಿ ಕಣ್ಮುಚ್ಚಿ ಕಂಪಿಸುತ್ತೊರಲುತಂ
ತರಗೆಲೆ ಗಿರುಕ್ಕೆನಲು ಪಿಂದಿರುಗಿ ನೋಡುತಂ
ಹರಹರ ಅನಾಥನಾಥಂ ನೀನಲಾ ತಂದೆ ನಿನ್ನ ಹೊರತಾರನರಿಯೆ
ಮರವೆಯ ಗುಣಕ್ಕೆನ್ನನೊಪ್ಪಿಸುವರೇ ದೇವ
ನೆರೆನಂಬಿದನನಿನಿತು ಮಾಳ್ಪರೆ ಮಹಾದೇವ
ಪುರಹರ ಕೃಪಾಕರಾ ಬಾರೈ ದಯಾಪರಾ ದನಿದೋರು ಶಿವಶಂಕರಾ ೨೧

---

೧ ವ್ನ (ಹ) ೨ ಗಿ (ಹ) ೩ X (ಹ) ೪ ಘು (ಹ)

ಎಂದು ಕರೆವಾರ್ತಸ್ವರಂ ಶಿವನನಿರಲೀಯದು
ದಂದೊಡನೆ ಕೊಂಡುಬರೆ ಕಾಣುತ್ತ ಸೌಂದರಂ
ತಂದೆಯಿನಿತುಂ ತಡೆವರೇ ಎಂದು ಸೈಗೆಡೆದು ಬಿಗಿದಪ್ಪಿ ಚರಣಯುಗಮಂ
ಕಂದಿದಾನನದಿಂದೆ ಕೂಗಿಡುವ ನಂಬಿಯಂ
ಇಂದುಧರ ಸಂತವಿಡುತಿರಲತ್ತ ಪುರದಲ್ಲಿ
ಬಂಧಿಸಿಂದಂವೈದೆ ದೇವಾಲಯದ ಬಾಗಿಲಂ ತೆಗೆಯಲ್ಕಸಾಧ್ಯಮಾಗಿ ೨೨

ನೆರೆದ ಜನವೆಲ್ಲಮುಂ ಚಿಂತಿಸುತ್ತ ಭವನಂ
ಸ್ಮರಿಸುತ್ತೆ ಶಿವಲಿಂಗಮಂ ಕಾಣದುಣ್ಣದಿಹ
ಪರಮ ಭಕ್ತರ್ಕಳೆಲ್ಲರ್ವೆರಸಿ ಶಿವದಿಡಲ್ಮೆರೆಮಿಂಡರೇನಿದೆನಲು
ಗಿರಿಜೇಶ ನಂಬಿಯೊಡಗೂಡಿ ಹೋದಂ ದೇವ
ಇರದೆ ದೇವಾಲಯದ ಕದವಿಕ್ಕಿದುವು ದೇವ
ಪುರದಲ್ಲಿ ಪಸು ಹುಲ್ಲನೊಲ್ಲದಿವೆ ಶಿಸುಬೆಣ್ಣೆದಿನ್ನದಿವೆ ದೇವಯೆನಲು ೨೩

ಮತ್ತೆ ಪೊಯ್ ಡಂಗುರವನಿನ್ನೊಮ್ಮೆ ಈಶಂಗೆ
ಸತ್ಯದ ಗಣಾವಳಿಯನೊಲ್ಲದ ಮಹೇಶಂಗೆ
ಅತ್ಯಧಿಕ ಭಕ್ತವಿತತಿಗೆ ಶಿವಂ ಪೊರಗೆಂದು ಪೊಯ್ಸಿದಂ ಡಂಗುರವನು
ಅತ್ತ ಕೇಳಿದನೀಶ್ವರಂ ಕೇಳು ಸೌಂದರಾ
ಚಿತ್ತರದ ದಾಳಿಯೆನಗೈದಿತವನೀಶ್ವರ
ಮೊತ್ತದ ಗಣಾವಳಿಯದೆಲ್ಲ ಎನ್ನಂ ಸಹಿತ ಪೊರಗೆಂದರೇಂಗೈವೆನು ೨೪

ಭಕ್ತರೊಲ್ಲದೊಡೆನ್ನನೊಲುವರಾರೆಲೆ ನಂಬಿ
ಭಕ್ತರರಿಯದೊಡೆನ್ನನರಿವರಾರೆಲೆ ನಂಬಿ
ಭಕ್ತರುಗಳೆನ್ನನರ್ಚಿಸದಿರಲ್ಕಿನ್ನಾರು ಎನ್ನನರ್ಚಿಪರು ನಂಬೀ
ಭಕ್ತರಾಗದೊಡೆಯೆನಗಪ್ಪರಾರೆಲೆ ನಂಬಿ
ಭಕ್ತರೀಯದೊಡೆ ಎನಗೀವರಾರೆಲೆ ನಂಬಿ
ಭಕ್ತರೆನ್ನಂ ಎನ್ನ ನೋಡದಿರಲಿರ್ದರಿನ್ನಾರು ಎನ್ನ ನೋಳ್ಪರು ಸೌಂದರಾ ೨೫

---

೧ ದೆ (ಹ) ೨ ಗೆ (ಹ) ೩ ರಂ (ಹ) ೪ + ಜನ (ಹ) ೫ ರು (ಹ)
೬ X (ಹ)

ಎನೆ ನಂಬಿ ನಡನಡಂ ನಡುಗಿ ನೆಲನಂ ಪೊಗುತೆ
ನಿನಗಿನಿತವಸ್ಥೆ ಎಲೆ ತಂದೆ ಎನಗೇತೆನುತೆ
ನಿನಗಿನಿತು ಘನವೆನ್ನನಾರ್ಬಲ್ಲರೈದೇವ ನಿನ್ನಿಂದೆ ನಾನಲ್ಲವೇ
ನಿನಗೆ ಕೊರಳುಬ್ಬಸಂ ನಾನೆನಿತರವ ದೇವ
ನಿನಗೆ ಮಲೆತವರೆನ್ನ ಕೊಲ್ಲದಿಹರೇ ದೇವ
ನಿನಗಾಗಿ ಸತ್ತೆ ನಾನೆಂಬ ನಂಬಿಯ ನೋಡಿ ಮನದೊಳು ಶಿವಂ ನಗುತ್ತೇ ೨೬

ಮಗನೆ ಶಂಕಿಸದಿರಂಜದಿರಂಜದಿರು ನಂಬಿ
ಬಗೆಯರಿಯದಾದ ತಪ್ಪಂತಿದ್ದಿಕೊಳಬೇಕು
ಸುಗುಣಗಳ್ಮರಣರವರಂಘ್ರಿಗಳಿಗೈದೆ ಶರಣೆನೆ ಕಾಯ್ವರಯ್ಯಮಗನೇ
ಮಿಗೆ ಹೊಗಳಲೆನ್ನವರ್ತಮ್ಮನೀವರ್ಮಗನೆ
ಹೊಗಳಯ್ಯ ಹಾಡಯ್ಯ ನೀನೆನ್ನ ಭಕ್ತರಂ
ಹೊಗಳು ಹೊಗಳೈ ಎನಲು ದೇವನಾಂ ಹೊಗಳ್ವೊಡಾರಂ ಬಲ್ಲೆ ಗುರುಹಿರಿಯಳರಂ ೨೭

ಬಲ್ಲಡೇಕೆನಗಿನಿತವಸ್ಥೆಯಾದಪುದೀಶ
ಬಲ್ಲಡೇಕಾದಪ್ಪುದಿನಿತು ಧಾವತಿ ಈಶ
ಬಲ್ಲಹಂ ನೀನು ನೀಂ ಪೇಳ್ದಂತೆ ನಾಂ ಪೊಗಳ್ವೆನಾರವರವರನುಸುರೆನೆ
ಸಲ್ಲಲಿತ ಮಹಿಮರಾದರುವತ್ತುಮುವ್ವರಂ
ಉಲ್ಲಾಸದಿಂ ಪೊಗಳೆನಲ್ಕವರನರುಹಿಸೆನೆ
ಫುಲ್ಲಶರವಿಜಯನರುವತ್ತುಮುವ್ವರ್ಪುರಾತನರನೊರೆಯಲ್ತೊಡಗಿದಂ ೨೮

ಅಂತು ಸಂಧಿ ೩ ಕ್ಕಂ ಗದಗಳು ೧೧೭ ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

---

೧ ವ (ಹ) ೨ X (ಹ) ೩ ಳೈ (ಹ) ೪ ರಂ (ಪ)

## ಸಂಧಿ : ೪

**ಸೂಚನೆ :**

ಪರನಾಣೆಯೆಸಲರಸಿಯಂ ಮುಟ್ಟದಿರುತಿರಲು
ಪರಮೇಶನಿಂದದಂ ಪರಿಹಾರವೆನಿಸಿ ಗಣ
ವರರ ಪದವಿಗೆ ಸಂದ ತಿರುನೀಲಕಂಠರ ಕಥೆಯನಾಲಿಸಿದನಾ ಸೌಂದರಂ

ಎಲೆ ನಂಬಿಯಣ್ಣ ನಘದಿಂದಾಲಿಸೈ ನೀನು
ಬಲುಮೆಯುಳ್ಳರುವತ್ತುಮುವ್ವರಿತಿಹಾಸಮಂ
ಚೆಲುವಿನಲ್ಪೇಳ್ವೆ ಸಚ್ಚೋಳಮಂಡಲದಿ ಪೊನ್ನಂಬಲವೆನಿಪ್ಪ ಪುರವು
ಕಳೆಯಿಂದೆ ಬೆಳೆಯಿಂದೆ ವಿವಿಧ ವೈಭವದಿಂದೆ
ಲಲಿತ ಸದ್ಭಕ್ತರಿಂದಲಘುಚಾರಿತ್ರರಿಂ
ದಿಳೆಯೊಳಿದಕೆಣೆಯಾವ ಪೊಳಲಿಲ್ಲವೆಂಬಂತೆ ಸಂಭ್ರಮದೊಳೊಪ್ಪಿರ್ದುದು ೧

ಆ ನಗರದೊಳಗೊರ್ವ ಗಣವರಂ ನಿರ್ಮಲ ಸು
ಖಾನಂದ ವಿಗ್ರಹಂ ಸತ್ಯಗುಣಿ ನಿರ್ವಿಷಯ
ಮಾನಸಂ ಘನಚರ್ಯ ತಿರುನೀಲಕಂಠಾರ್ಯ ಕುಂಭಕಾರಕಕುಲಾರ್ಯಂ
ಮಾನಿತೆಯು ಮುತ್ತೈದೆಯೆಂದೆಂಬ ಸತಿಯೊಡನ
ನೂನರಾಗದೊಳಿರುತೆ ತಿರುನೀಲಕಂಠಾಭಿ
ಧಾನ ಲಿಂಗಾರ್ಚನಾರತನಾಗಿ ತಪ್ಪದಿಂತಿರುತಿರ್ದನೀ ತೆರದೊಳು ೨

ಎಂದಿನಂದದೊಳೊಂದು ದಿನ ನೀಲಕಂಠಯ್ಯ
ನಂದದಿಂ ತಿರುನೀಲಕಂಠೇಶನರ್ಚನೆಯ
ಚಂದದಿಂ ಮಾಡಿ ಬರುತಿರೆ ಬೀದಿಯಲ್ಲಿ ಪಾರಾಂಗನೆಯು ತಳಿಗೆದೊಳೆದು
ಮುಂದರಿಯುದವಳು ಚೆಲ್ಲಿದಡಾಜಲಂ ಸಿಡಿಯೆ
ಕಂದಿ ಕಳೆಗುಂದಿ ತಿರುನೀಲಕಂಠಾಯೆನಲು
ಹಿಂದಿರುಗಿ ತಿರುನೀಲಕಂಠಯ್ಯನಂ ನೋಡುತವಳು ಕಳವಳಗೊಂಡಳು ೩

ಕರುಣಿಸೈ ವರನೀಲಕಂಠಾರ್ಯ ನೀನೆಂಬು
ದರಿಯದಾದೆನ್ನಯ ಶತಾಪರಾಧಂಗಳಂ
ಮರೆದು ಕಳೆಯೆಂದು ಚರಣಕ್ಕೆರಗಿ ಮಗುಳೆರಗಿ ೧ದೈನ್ಯೋಕ್ತಿಯಿಂದೆ ನುತಿಸಿ
ತರಳೆ ತಿರುನೀಲಕಂಠಯ್ಯನಂ ತನ್ನ ಮಂ
ದಿರಕೆ ಬಿಜಯಂಗೈಸಿ ಮಜ್ಜನಂ ಗಂಧಾದಿ
ವರಪುಷ್ಪ ೨ಮಾಲ್ಯಂಗಳಿಂದೆ ಸತ್ಕರಿಸಿ ತತ್ಕರಣನಂ ಬೀಳ್ಕೊಟ್ಟಳು ೪

ಅತ್ತಲಾ ಶರಣನಂಗನೆಯು ಮುತ್ತೈದೆಯೀ
ವೃತ್ತಾಂತಮಂ ವಿಚಾರಿಸದೆ ತಾಂ ಮೂಢತ್ವ
ವೆತ್ತು ಪತಿಯಂಗದನುಲೇಪನಾವಳಿಗಳಂ ಕಂಡು ಸಿಡಿಮಿಡಿಗೊಂಡಳು
ಚಿತ್ತದೊಲ್ಲಭ ಕೇಳಿದಾವ ಸೌಂದರ್ಯ ಸಾಂ
ಗತ್ಯದಿಂ ಸಮನಿಸಿತು ಗಂಧಾನುಲೇಪನಂ
ಮತ್ತವಳ ಕೂಡಿರುವುದೆಂದು ಪತಿಯಂ ಜರೆದು ಬೇರೆ ಪಸೆಯಂ ಗೈದಳು ೫

---

೧ ಧ (ಜ)    ೨ ಮಾಲ್ಯ (ಫ)

ಪರಮ ಕೋಪಾಟೋಪ ಭರಭರಿತಳಾಗಿರ್ದ
ತರುಣಿಯಂ ಕಂಡಿದೇತರ ಮುನಿಸು ಬಾರೆಂದು
ಕರವಿಡಿದು ತಿರುನೀಲಕಂಠಯ್ಯ ಕರೆಯೆ ನೀನೆನ್ನ ಮುಟ್ಟಿದಿಯಾದಡೆ
ಪುರಮಥನನಾಣೆ ಸೋಂಕದಿರೆಂದು ಸತಿ ನುಡಿಯೆ
ಶರಣನಾ ನುಡಿಗಂಗನೆಯ ಸಂಗವಗಲುತ್ತ
ಬರಿಸ ತೊಂಬತ್ತಾಗಲವರ್ಗೆ ಜರೆಯೊದಗಿರ್ದ ಪರಿಯನೇನೆಂದುಸುರ್ವೆನು   ೬

ಮೊದಲೊಳಿಟ್ಟಾಣೆ ಪರಿಪಕ್ವಮಾಗೆಸೆವಂತೆ
ಮುದುಗುಣಿಗಳುಂ ಪಣ್ಣೆ ಮುಪ್ಪಾವರಪರ ಸುಕೃ
ತದ ಕಾಂತಿ ಪೊರಪೊಣ್ಮಿದಂತೆ ಮಸ್ತಕ ನರೆತವಪವರ್ಗಪದಕೈದುವ
ಚದುರತ್ವದಿಂದೆಸೆವ ಸೋಪಾನದಂತಂಗ
ಮುದುಡಾದುದಭವಭಕ್ತರನಲ್ಲದನ್ಯರಂ
ಬಧಮರುಗಳನು ನಿರೀಕ್ಷಿಸಲೊಲ್ಲವೆಂಬಂತೆ ಮುಚ್ಚಿದುವು ಕಣ್ಣೆವೆಗಳು   ೭

ಘನಕೆ ಘನವಾದ ಎನ್ನಧಿಕಾರತನವ ತಾ
ಮದೊಳಗೆ ನೆನೆನೆನೆದು ತಲೆದೂಗುವಂತೆಯಾ
ತನ ತಲೆಯು ನಡುಗುತ್ತಲಿರ್ದುವು ಮಹಲಿಂಗದುರುಪ್ರದಕ್ಷಿಣಕಲ್ಲದೆ
ಬಿನಗು ವಿಷಯಗಳಿಗಡಿಯಿಡೆನೆಂಬ ತೆರದಿ ನಡೆ
ಯನುವಗೆಟ್ಟೀರೀತಿ ವೃದ್ಧತ್ವವೆಂಬುದಂ
ತನುವಿಗನುಗೊಳಿಸಿ ಭಕ್ತಿಗೆ ವಯಸ್ಥಿತಿಯೆನಿಸುತಿರ್ದರಾ ದಂಪತಿಗಳು   ೮

ಇಂತಲವರ ಭಕ್ತಿಯಂ ಕಂಡು ನಾನೊಲಿದು ನಿಜ
ಪುರಿಗೆ ಕೊಂಡೊಯ್ವೆನೆವದಿಂದೊಂದು ಘನವಾದ
ಚರವೇಷವಾಂತವರ ಬಳಿಗೆ ಪೋಗಲ್ಕೆನ್ನ ಕಂಡು ಕಡುಹರುಷದಿಂದ
ಚರಣಕಭಿನಮಿಸಿ ಕುಳ್ಳಿರಿಸಿ ಸತ್ಕರಿಸಿ ಮ
ದ್ಗುರುವೆ ಸದ್ಗುರುವೆ ಜಗದ್ಗುರುವೆ ಬಿಜಯಂಗೈದ
ಪರಮ ಕಾರ್ಯವನು ಕರುಣಿಸಬೇಹುದೆಮಗೆಂದು ಮಗುಳೆ ವಂದಿಸಿ ನುಡಿದರು   ೯

---

೧ ಳ (ಹ)   ೨ ಳಂ (ಹ)   ೩ ಟ್ಟಾ (ಹ)   ೪ ದಾವ (ಹ)   ೫ + ವೆ (ಹ)

ಸನ್ನುತ ಪ್ರಾಣಲಿಂಗಾರ್ಪಣಾರ್ಥಿಗಳೋ ಲಸ
ದುನ್ನತ ಸುವಸ್ತ್ರಪಭಿರತಿಗಳೋ ಪುತ್ತಿನ್ನು
ಪೊನ್ನಿನಿಚ್ಛಾವರ್ತಿಗಳೊ ಮಾಜದುಸುರುತದು ಕೈಕೊಂಡು ಕರುಣಿಸಪ್ಪ್ಯ
ಎನ್ನೊಡೆಯ ಗುರುರಾಯಸೇದವರು ನುತಿಸಲ್ಕೆ
ಅನ್ನಪಾನಾಸಕ್ತನಲ್ಲವೆನ್ನಲ್ಲೊಂದು
ಚಿನ್ನಸೆವ ಬಟ್ಟಲಮದುಂಟು ನಿಮ್ಮಯ ಗೃಹದಿ ಮಡಗಿಕೊಂಡಿರಿಯೆಂದನು ೧೦

ಇದು ಸಕಲ ಸಿದ್ಧಿಗಳನೀವುದು ಚತುರ್ವಿಧದ
ಪದವಿಗಳ್ ಕೈಸಾರುವುದು ಪರುಷ ಪಾತ್ರೆ ಪು
ತ್ರಿದನಾರ್ಗೆ ಸೂಚಿಸದೆ ಗೋಪ್ಯದಿಂ ಗೃಹದೊಳಿರಿಸೆಂದು ಬಟ್ಟಲವಿತ್ತೆನು
ಅದನವರು ಕೊಂಡು ಮಡಿವಸ್ತ್ರದೊಳು ಬಂಧಿಸುತೆ
ಮುದದಿ ಪೆಟ್ಟಿಗೆಯೊಳಿರಿಸಲ್ಕಾಡಿನಂ ಪೋಗಿ
ಉದಯಕಾಲದೊಳವರ ಬಳಿಗೈದಿಯೆನ್ನಬಟ್ಟಲವ ಕೊಡಿರೈ ಎಂದೆನು ೧೧

ಪೆಟ್ಟಿಗೆಯ ಮುದ್ರೆಯಂ ಕಳಚುತ್ತ ನೋಡಲಾ
ಬಟ್ಟಲದರೊಳಗಿಲ್ಲದಿರಲವರು ವಿಸ್ಮಯಂ
ಬಟ್ಟು ಕಳೆಗೆಟ್ಟು ಸುಯಿವುತ್ತಲೆಲೆ ಜೀಯ ನಿಮ್ಮಯ ಪಾತ್ರೆಯಿಲ್ಲಿದರೊಳು
ಬಟ್ಟಲವ ನಾಂ ವಂಚಿಸಿದುದಿಲ್ಲ ಮತ್ತೊರ್ವ
ರಿಟ್ಟು ತಾಣಕ್ಕೈದುದಿಲ್ಲ ಶಿವನೆ ಬಲ್ಲ
ನೆಟ್ಟನೀ ಪರಿಯನಾವರಿಯೆವಿದನೆಂದು ನಡನಡುಗುತ್ತವರು ನುಡಿದರು ೧೨

ಕೆಟ್ಟೆನಕಟಕಟ ಸತ್ಪುರುಷರಿವರೆಂದು ಮತಿ
ಪುಟ್ಟಿ ನೆರೆನಂಬಿ ಪರಶಂ ಸಾಕ್ಷಿಗಾಣಿಸದೆ
ಕೊಟ್ಟುದುದು ತಪ್ಪಾದುದೇ ಮಡಗಿದುದು ಕೊಳ್ಳದಿನ್ನೆತ್ತ ಪೋದುದಲೆಲೆ
ದಿಟ್ಟರಿರ ನಿಮ್ಮ ಕಾಪಟ್ಯ ನುಡಿಗಾಸೊಡಂ
ಬಟ್ಟಪೆನೆ ಸಾಕು ಸಾಕೆನ್ನ ಬಟ್ಟಲವ ನೆರೆ
ಕೊಟ್ಟೊಡೊಳ್ಳಿತುಮಲ್ಲದಿರೆ ಬಿಡುವೆನೇ ನಿಮ್ಮನೆನುತೆ ನಾಂ ಗರ್ಜಿಸಿದೆನು ೧೩

ಅಡಿಗಡಿಗೆ ಘುಡಿಘುಡಿಸುವೆನ್ನ ನುಡಿಯಂ ಕೇಳ್
ಕಡುನೊಂದು ತಲೆವಾಗಿ ಮರುಳಾಗಿ ಸಿಗ್ಗಾಗಿ
ನುಡಿಯಲರಿದಾಗಿ ನೆರೆಹೊರೆಯವರು ಕೇಳಿ ಕಠಿನೋಕ್ತಿಯಂ ನುಡಿವರೆಂಬ
ಹಿಡಿದಿರ್ದ ಸಂದೇಹಕೊಳಗಾಗಿ ಕರಕೊರಗಿ
ಪಡೆದೆವಕಟಕಟಾ ವೃಥಾ ದುರ್ನಿಮಿತ್ತಮಂ
ಮೃಡಮಹಾದೇವ ಸಲಹಯ್ಯ ಸಲಹೆಂದೆನುತ್ತವರು ಬಾಯ್ಬಿಡುತಿರ್ದರು ೧೪

ಲೇಸಾದುದೆಲೆ ಘಾತಕರೆನ್ನ ಒಡವೆಯಂ
ಹೇಸದಪಹರಿಸಿ ಸಜ್ಜನರಂತೆ ನುಡಿದೆನ್ನ
ಮೋಸಗೈದಡೆ ಸುಮ್ಮನಾಂ ಪೋಗಬಲ್ಲೆನೇ ಮುವ್ವಾಯಿಲರ ಕಾಣದೆ
ಗಾಸಿಯಾಗದಲೀ ಪುರದ ಹಿರಿಯರಿಪ್ಪ ಸಭಾ
ವಾಸಕ್ಕೆ ನಡೆಯೆಂದವರ್ಗಳಂ ಒಡಗೊಂಡು
ಭಾಸುರದ ಮಂಟಪಕೆ ಬರಲಲ್ಲಿ ಭಕ್ತರ ಸಮೂಹವೇಂ ಸೊಗಯಿಸಿದುದೊ ೧೫

ಜ್ಞಾನಿಗಳ್ಮಾನಿಗಳ್ನಿರ್ಗ್ಮಜೀವಪರಮ ಸಂ
ಧಾನಿಗಳ್ದಾನಿಗಳ್ರಮ ಸುಕೀರ್ತನ ಸುಧಾ
ಪಾನಿಗಳ್ ಮೌನಿಗಳ್ಮರೆಯದೆನ್ನಯ ಪಾದಪದ್ಮಕ್ಕೆ ಸದ್ಮವೆನಿಪ
ಧ್ಯಾನಿಗಳ್ ಹಾನಿಗಂಳ್ಕಂದಲಿರ್ದ ಧೈರ್ಯದ ನಿ
ಧಾನಿಗಳ್ ನೂನಗಳ್ಕಳೆದ ಭವಸಂಕಟ ಸೊ
ಕ್ಕಾನೆಗಳ್ ಪ್ರಾಣಿಗಳ ಕಾಯ್ವ ಗುಣಮುಳ್ಳವರ ಮೊತ್ತಮಿರ್ದುದು ಸಭೆಯೊಳು ೧೬

ಆ ಸಭೆಯನಾ ಶರಣ ದೂರದಿಂದೀಕ್ಷಿಸುತ
ಲಾ ಸತಿಗೆ ನುಡಿದನೆಲೆ ತರುಣಿ ನಾವಿರ್ವರುಂ
ಈಸುದಿನವಿರ್ದುದಕೆ ಫಲಮಾಯ್ತು "ನೆಲದೊಳಗೆ ಶಿವನೇಕೆ ನಮ್ಮನೊಯ್ಯ
ಈ ಸಕಲ ಜನನೊಳಗೆ ನಮ್ಮ ಪರಿಯಿಂತಾದು
ದಾಸುರದ್ದ¹ಕಾರ್ಯ ಸಂಗಡಿಸಿರ್ದುದಕಟಕಟ
ಈಶನಿಂತೇಕೆ ಮಾಡಿದನೆನುತಲಡಿಗಡಿಗೆ ನುಡಿನುಡಿವುತಡಿಯಿಡುವರು ೧೭

---

೧ ಳ್ಮ (ಹ)

ಮುಂದೆ ಮೊರೆಯಿಡುತ ಬೊಬ್ಬಿಡುತಲಾಂ ನಡೆಯಲ್ಕೆ
ಹಿಂದೆ ಕುಪಿಸುತ ಸತಿಪತಿಗಳುಂ ಬರುತಿರಲು
ಬಂಧುರಧ್ವನಿಯನಾಲಿಸುತ ಸಭೆಯವರಿದೇನೆಂದು ಬೆರಗಿಂ ಕೇಳ್ದರು
ಬಂದು ಸಭೆಯಂಪೊಕ್ಕು ತಿರುನೀಲಕಂಠಯ್ಯ
ವಂದಿಸುತ ಹಿರಿಯರ್ಗೆ ನಿಂದು ಕರಮಂ ಮುಗಿದು
ಕಂದಿದಾನಂದದಿಂದಿರಲ್ಕವರು ನೀಂ ಬಂದ ಕಾರಣಮದೇನೆಂದರು ೧೮

ಆತನಂ ಕೇಳ್ವುದೇನುಂಟಿತ್ತು ನುಡಿಯಿರೈ
ದಾತರಿರ ಧರ್ಮಿಷ್ಠರಿರ ಭಕ್ತರೆನಗೊಂದು
ಪ್ರೀತಿಯಹ ಬಟ್ಟಲವನಿತ್ತಿರಲ್ಕಾನದಂ ಕೊಂಡಿವರ ಬಳಿಗೆ ಬಂದು
ಓತಿರದೆ ನಂಬಿ ಪಾತ್ರೆಯನಿವರೊಳಿರಿಸಿ ಮ
ತ್ತಾತುರದಿ ಪೋಗಿ ಮಗುಳಾನೈದೆ ಬೇಡಿದಡೆ
ಈತಗಳು ಪಾತ್ರೆಯಿಲ್ಲೆಂದೆನ್ನ ಚಾಳಿಸುವರೇನೆಂದರೀಯರಿವರು ೧೯

ಇತ್ತುದದು ನಿಜವೆಂದು ನುಡಿವರಾ ಪಾತ್ರೆಯಂ
ಮತ್ತನಗೆ ತಾರೆನಲ್ಕಿಲ್ಲೆನುತ್ತಿರ್ಪರೀ
ವೃತ್ತಾಂತಮಂ ವಿಚಾರಿಸುತ್ತೆನ್ನ ಬಟ್ಟಲವನೆನಗೀಯೆ ನಿಮ್ಮ ಧರ್ಮ
ಉತ್ತಮರ್ನೀವು ಪುಣ್ಯಾತ್ಮಕರ್ನೀವು ಪರ
ವಿತ್ತಾಪಹಾರಕರ್ ವಂಚಕರ್ ಪುಸಿಕರೀ
ಪತ್ತನದೊಳಿರಲು ಪೂಜ್ಯವೆ ನಿಮಗಿದಂ ಪರೀಕ್ಷಿಸಿ ಪೇಳಿರೈಯೆಂದೆನು ೨೦

ಎನಲವರು ಬೆರಗಾಗಿ ಬಳಿಕ ತತ್ಕಾರಣನಾ
ನನವ ನೋಡುತ್ತಿದೇನೈ ನೀಲಕಂಠಾರ್ಯ
ಮನವೊಸೆದು ಪಾತ್ರೆಯಿವರಿತ್ತುದುದು ನಿಜವೆ ನಿಜವಾರ ಕೈಯೊಳಗಿತ್ತರು
ಎನಗಿತ್ತಡದನೆಲ್ಲಿ ಮಡಗಿದ್ದೈ ನಮ್ಮಯ ಭ
ವನದೊಳಗೆ ಮಡಗಿರ್ದನೇನಾದುದೇನಾದು
ದೆನಲರಿಯೆನಾನು ಮಡಗಿದ ತಾಣದೊಳಗೆ ಬಟ್ಟಲವಿಲ್ಲವೆಂದುಸುರ್ದಸು ೨೧

---

೧ ಲುಂ (ಜ) ೨ ದು (ಹ)

ಏನೆಂದು ನುಡಿವೆವಿದಕೆಲೆ ನೀಲಕಂಠಯ್ಯ
ಹಾನಿಗೊಳಗಪ್ಪ ನುಡಿಯಿಂದೆ ಫಲಮಿರ್ದಪುದೆ
ಮಾನಿತರ ಮಾರ್ಗವೆನಿಸದು ಬರಿದೆ ನೀನೇಕೆ ಇವರೇಕೆ ಪಾತ್ರೆಯೇಕೆ
ಈನಿಮಿತ್ತದ ತೊಡಂಕೇಕೆ ಬಟ್ಟಲವನನು
ಮಾನಿಸದಲೀವುದಯ್ಯಂಗೆಂಬುದೇ ನ್ಯಾಯ
ವೇನುಂಟಿದರೊಳೆಂದು ಮುಂದಿರ್ದ ಸಭೆಯ ಭಕ್ತರ್ನುಡಿದರಾ ಶರಣಗೆ ೨೨

ಕೋಪವೇಕಯ್ಯಗಳಿರಾ ವಿಚಾರಿಸಿದಡೆ ನಿ
ರಾಪರಾಧಿಗಳಾವು ಉತ್ತರಂ ನಿಮಗೆ ಕೊಡ
ಲಾಪೆವೇ ತಂದೆಗಳಿರಾ ನಿಂದೆಗೊಳಗಾದೆವಿಂದಿಗೇನೆಂದಡೇನು
ಈ ಪುಣ್ಯಪುರುಷ ಚರವರ್ಯನಾಜ್ಞೆಗೆ ಸಂದೆ
ವೈ ಪೇಳ್ವುದೇನು ದಂಡಿಸಲಿ ಖಂಡಿಸಲಿ ಪ್ರ
ತ್ಯಾಪವಿನಿತಿಲ್ಲದಾವೀರ್ವರಯ್ಯಂಗೆ ಸೆರೆಯಾಗಿರ್ದವೆಂದರವರು ೨೩

ಆ ದಂಪತಿಗಳ ದೈನ್ಯತೆ ಕಿಂಕರತೆ ಹೃದ್ವಿ
ಭೇದನದ ವ್ಯಾಕುಲತೆಯಂ ಕಂಡು ಸಭೆಯೊಳಿಹ
ಸಾಧುಗಳ ಮನಮೃದೆ ಕರಗಿ ಸರ್ವರು ಶಾಸನಂಗೈದರಾಳೋಚಿಸಿ
ಈ ದುರ್ಯಶಕ್ಕೆ ಪಕ್ಕಾದ ಶರಣನ ತೊಡಕ
ಪೋದದಿಂ ಪರಿಹರಿಸುವಡೆ ವರಹವೊಂದೊಂದ
ನಾದರದೊಳಾವೆಲ್ಲರೊಯ್ಯನಯ್ಯಂಗಿತ್ತು ಕಳುಹುವದೆ ಲೇಸೆಂದರು ೨೪

ನುಡಿದ ನುಡಿ ನಿಶ್ಚೈಸಿ ಎನ್ನುವಂ ಕರೆದು ಮೆ
ಲ್ನುಡಿಯಿಂದೆ ಬೆಸಗೊಂಡರೆಲೆ ಚರಾಗ್ರಣೀ ನೀವೆ
ಕಡು ದಯಂಗೈವುದೆಮ್ಮಂ ನಿರೀಕ್ಷಿಸಿ ಪೋದ ಬಟ್ಟಲಮಾರ್ಗ ಬರ್ಪುದೇ
ತಡೆಯದಾವೆಲ್ಲರಾ ಬಟ್ಟಲದ ವ್ಯಾಜಕ್ಕೆ
ಕೊಡುವೆವೈ ತ್ರಿಸಹಸ್ರ ವರಹಂಗಳಂ ಕೊಂಡು
ನಡೆದೀತನಂ ಬಿಡುವುದೆಂದು ನ್ಯಾಯಾಧಿಕಾರಿಗಳೆನ್ನುವಂ ಕೇಳ್ದರು ೨೫

---

೧ ಪ್ಯ (ಪ)

ಒಳ್ಳಿತೀ ನುಡಿ ಲೇಸು ಲೇಸು ಮಾಡಿದಿರಿ ತ
ಪ್ಪಲ್ಲ ನ್ಯಾಯಾಧಿಕಾರಿಗಳಹುದು ಎನ್ನನುಂ
ಕೊಲ್ಲಿದಿರಲಾ ಬಟ್ಟಲದ ಗುಣಮದೇನೆಂಬೆ ಬೇಡಿದುದನೀವುದಕಟ
ಒಲ್ಲೆನಲ್ಕೀವುದಣಿಮಾದ್ಯಖಿಳ ಸಿದ್ಧಿಗಳ
ನುಲ್ಲಾಸಕರವೆನಿಪ ತವನಿಧಿಯ ಪಾತ್ರೆಯದ
ನೆಲ್ಲಿ ಕಂಡಪೆನು ಸುರಕುಜ ಸುರದುಗ್ಧ೧ ಪೊನ್ನುಗಿನ್ನುವದಕಣೆಯಪ್ಪುವೇ ೨೩

ಏಂಗೈದಿರಕಟ ಘಾತಕರಿರಾ ನಿಮ್ಮಂತ
ರಂಗವರಿಯದೆ ಕೆಟ್ಟೆನಕಟಕಟ ಪುಣ್ಯನಡೆ
ಗಂಗೈಸದೆನಗೆ ವಂಚಿಸಿದಿರೆನುತೆರೆದೊಬಾಯಿ ಬಸುರುಮಂ ಹೊಯ್ ಹೊಯ್‌ವುತಾ
ಕಂಗಳಲಿ ಕಿಡಿಯ ಸುರಿಸುವ ಕೊಪವಾನುತ್ತೆ
ಮಂಗಳಾತ್ಮಕರುಗಳು ಮೊರೆಗೇಳಿರೆಂದೆನುತೆ
ಭಂಗಿಸುತ ಬೈವುತಂ ಪುಸಿಗೋಪದಿಂದಲಾನೆಸೆದಿರ್ದನೆಲೆ ಸೌಂದರಾ ೨೭

ಪೊಡೆವ ನೆವದಿಂದಾತನಂಗ ಸೋಂಕಿನ ಸುಖವ
ಪಡೆದಿರ್ದನೊಮ್ಮೆ ಕೋಪಾಟೋಪಮಯವಾದ
ನುಡಿಯ ನೆವದಿಂದಾತನೊಳ್ದಿವ್ಯ ಸಂಭಾಷಣದ ಸುಖವನಾಂತಿರ್ದನು
ಕಡೆಯೊಳೆನಗೀ ದಂಪತಿಗಳು ವಶವಹರೆಂಬ
ಕಡು ಹರುಷಮಂ ತಾಳ್ದು ಜನದೊಳಗೆ ರಚ್ಚೆಗಿ
ಟ್ಟಡಿಗಡಿಗೆ ತಾಪಿಸುತ ಶಾಪಿಸುತ ಹೂಂಕರಿಸುತಾನು ಮಗುಳಿಂತೆಂದೆನು ೨೮

ಬೈದಡಿವಲಂಜರ್ಕೃ ಮನವಾರೆ ಕೈದಣಿಯೆ
ಪೊಯ್ದರಿವರಂಜರಿನ್ನೇಗೈವೆ ನ್ಯಾಯಕಾ
ನೈದುದೇಯೆನ್ನದಲ್ಲಂ ಮಿಕ್ಕ ಮಾತೇನು ನಾನ ಸೋಲ್ದ ಪಸಿವರ್ಗೆ
ಕೈದುಡುಕಿಯೆನ್ನ ಬಟ್ಟಲವನೀಶರಣ ಕ
ದ್ದೊಯ್ದುದದು ಪುಸಿಯೆಂದು ಸತಿಯು ಕರಮಂ ಪಿಡಿವು
ತೈದೆಯೀ ಕೊಂಡದೊಳು ಪೊಕ್ಕನಾದಡೆ ಪಾತ್ರೆಯುಂ ಬಿಟ್ಟೆನಾನೆಂದೆನು ೨೯

---

೧ ಗು (ಹ) ೨ ದಿಯ (ಪ)

ಎಲ್ಲರುಂ ಮುದವಾಂತರೀ ನುಡಿಯನಾಲಿಸುತೆ
ಬಲ್ಲಿದಂ ತಿರುನೀಲಕಂಠಯ್ಯಗೀವಚನ
ಭಲ್ಲೆಯುದಲಿರಿದ ತೆರನಾಯ್ತು ಕಿವಿಯೊಳು ಕೂರಸಿಯು ಮುರಿದ ತೆರನಾದುದು
ನಲ್ಲಳ ಕರಾಬ್ಜಮಂ ಪಿಡಿಯೆಂಬನೇಂಗೈವೆ
ಒಲ್ಲೆನಲ್ಪಹಿರಂಗ ಕುಂದಹುದು ಸತಿಯ ಕರ
ಪಲ್ಲವಂ ಪಿಡಿಯುಲಾಂತರ್ಯಕ್ಕೆ ಕುಂದೆಂಬ ಸಂದೇಹಕೊಳಗಾದನು ೩೦

ಬೆಂದ ಸುಲಿಯಂತೆ ಬರಿಕಾಯನಾದಂ ರೆಕ್ಕೆ
ನೊಂದ ಗಿಳಿಯಂತೆ ಬಾಯ್ಬಿಡುತಿರ್ದನಾ ತಪಕೆ
ಕಂದಿದ ಕುಸುಮದಂತೆ ಕಳೆಗೆಟ್ಟು ಧೃತಿಗೆಟ್ಟು ಮರವೆಯುಳವಟ್ಟು ಬಳಿಕಾ
ಇಂದೆನ್ನ ಭಕ್ತಿ ಬರಡಾದುದೆಂದುಸುರಿಡುತ
ಕಂದುಗೊರಳನ ಕರುಣವೇಕಾಗದೆನುತ ಬಹು
ದಂದುಗಕ್ಕೊಳಗಾದ ಶರಣನಾಂತರ್ಯವರಿಯದೆ ಪೇಳತೊಡಗಿರ್ದರುಂ ೩೧

ಬರಿದೇಕೆ ಚಿಂತಿಸುವಿ ನೀಲಕಂಠಯ್ಯ ನಿ
ನ್ನರಸಿಯ ಕರಂ ಪಿಡಿದು ಕೊಂಡಮುಂ ಪೊಗುವಪಂ
ತರವೇಕೆ ಕೇಳಿನು[ಲ್ಕಂತಾತ]ನೊಡಲೊಳುರುಗೆಂಡವಿಟ್ಟಂತಾದುದು
ಗಿರಿಯೆನ್ನ ಮೇಲುರುಳಿ ಬಂದಡಂ ವಸುಧೆ ಬಾ
ಯ್ದೆರೆದೆನ್ನ ನುಂಗಲೆಳಸಿರ್ದಡಂ ತರುಣಿಯುಳ
ಕರಮುಂ ಪಿಡಿವನಲ್ಲ ಮರೆದಾವಡಂ ಸೋಂಕುವವನಲ್ಲ ನಾನೆಂದನು ೩೨

ಕೇಳಿ ಕಡುಬೆಕ್ಕಸಂಬೆತ್ತರಾ ಸಭೆಯವರು
ಮೌಳಿಗಳಸೊಲಿದೊಲಿದಿದೇನೆಂಬುವರ್ಕೆಲರು
ಭಾಳಾಕ್ಷನೇ ಬಲ್ಲನೆಂಬುವರ್ಪಲಕೆಲರು ನಗುತಿರ್ದರಾ ಗುರುಗಳು
ಪೇಳದಿರಿ ನೀವಿನ್ನು ಬಟ್ಟಲುಂ ಬಂದುದೆನ
ಗಾಳೋಚನೆಯದೇಕೆ ತಾನೆ ನಿರ್ದೋಷಿಯಹ
ಡೀ ಲಲನೆಯಂ ಸೋಂಕೆನೆಂಬ ನುಡಿಯೇಕೆ ಕೊಡುಕೊಡು ಬಟ್ಟಲವನೆಂದೆನು ೩೩

೧ ನು (ಹ)   ೨ ಲ್ಕಾತ (ಹ, ಜ)

ಸರಸೋಕ್ತಿಯಿಂದೆನ್ನ ಪಾತ್ರೆಯಿೀಯೆನೆ ಮೌನ
ವೆರಸಿರ್ಪರುರಿದೆದ್ದು ಗರ್ಜಿಸುವ ನುಡಿಗೆ ಕಿವಿ
ದೆರೆದು ಕೇಳ್ವರು ಜಗದ್ಗುರುವೆ ಮದ್ಗುರುವೆ ಸದ್ಗುರುವೆ ಜಯಜಯಯೆನುವರು
ಭರದಿಂದೆ ಪೊಯ್ವನೆಂದಡಿಯಿಡಲ್ನಿಜ ಕಳೇ
ವರವನೊಡ್ಡುವರು ಕರಕಮಲಮಂ ಮುಗಿವರೀ
ತೆರನಾಗಲಾನೆ ಬೇಸರಗೊಂಡು ಮಗುಳೊಂದು ನುಡಿಯ ನುಡಿದೆನು ಸೌಂದರ ೩೪

ನಿನ್ನ ಸತಿಯುಂ ಸೋಂಕದಿರು ನೀಲಕಂಠಯ್ಯ
ಎನ್ನ ಕರದೊಳಗಿರುವ ಲಾಕುಳಂ ಪಿಡಿದಾದ
ರುಂ ನೀರೊಳಿರ್ವರುಂ ಮುಳುಗಲಾರ್ಪಿರೆಯೆನಲ್ಕಂತಾಗಲೆಂದರವರು
ಚೆನ್ನೆಸೆವ ಲಾಕುಳವನೀರ್ವರುಂ ಪಿಡಿವುತ್ತ
ಲೆನ್ನಯ್ಯ ಪಾತ್ರೆಯಿತ್ತುದು ನಿಜಂ ನಾವದಂ
ಸನ್ನಿಯಿಂ ಕಳ್ದುದಂ ಪುಸಿಯೆಂದು ಕೊಂಡದಿ ಮುಳುಂಗಿದರ್ದಂಪತಿಗಳು ೩೫

ಲಾಕುಂಳವಂನೆತ್ತಲವರೀರ್ವರಂಗಚ್ಛವಿ ದಿ
ವಾಕರನ ಕೀಳ್ಪಡಿಸಲಾಯ್ತು ಪೂರ್ವ೨ದು೩ ಜರೆ೩ಯು೩
ನಾಕರ್ಷಣಂಗೈದುದೋ ಕೊಂಡವೆನೆ ವಯಸ್ಥಿತಿಯಿಂದಲೆಸೆದಿರ್ದರು
ನಾಕಜರನೊಡಗೊಂಡು ಗಣನಿಕರವೆರಸಿ ನಿಜ
ಸಾಕಾರದಿಂದಲಾನೊಪ್ಪಿರ್ದೆನನಿತರೊಳ
ಗಾಕಾಶದೊಳು ದುಂದುಭಿಯ ರವಂ ಪೊಣ್ಮಿರ್ದುದೇನೆಂಬೆನೈ ಸೌಂದರಾ ೩೬

ತದ್ದಂಪತಿಗಳೆನ್ನ ನಿಜರೂಪಮಂ ಕಂಡು
ಬಿದ್ದಿಳೆಯೊಳೈದೆ ದಂಡಪ್ರಣಾಮವನೆಸಗು
ತೆದ್ದು ಮತ್ಪದಕೆ ಮುಂಡಾಡಿ ಕೊಂಡಾಡಿ ನಲಿದಾಡಿ ಕುಣಿಕುಣಿದಾಡುತೆ
ಗೆದ್ದೆವೀ ಪರಿಭವಂಗಳನೆನುತೆ ನಮ್ಮೊಳಗೆ
ಬದ್ಧವೈರವನೆಸಗಿದೈಯೇತಕೆಂದೆನುತ
ಮುದ್ದಿಸುತೆ ಮೋಹಿಸುತೆ ಶಿಸುಗಳಂದದೊಳೆನ್ನೊಳೊಪ್ಪಿದರ್ದಂಪತಿಗಳು ೩೭

---

೧ ಳಂ (ಹ) ೨ X (ಹ) ೩ ಯು (ಹ)

ಭಾವನಾರ್ಚನ ಮುನಿಜನೇಷ್ಟ[1]ದ[1] ಕುಮಾರ [2]ಶ[2]ರ
ಭಾವನ ವಿನೋದಿ ಪರಮತಭೀ[3]ರು[3] ಶಿವಕವಿ ಸ
ಭಾವನಧಿ ವರ್ಧನ ಸುಧಾಂಗ ವಿದ್ಧೃತಕುರಂಗ ಕಲಿ[4] ತರುಣಾಂತರಂಗ
ದೇವ ನರನಾಗದಾನವ ಸರಸಿಜ[5]ಜ[5] ವಾಸು
ದೇವನಗರಿಪು ಮುಖ್ಯ ದಿಕ್ಪಾಲನುತ ಮಹಾ
ದೇವ ನಮಗಿನಿತೇಕೆ ಕಾಡಿದ್ಯೆಯೆಂದು ಪಲವಂದದಿಂ ಪೊಗಳ್ದರವರು ೩೮

ಆವರ ದಿವ್ಯಾಂಗಮಂ ಕಂಡೆನ್ನ ಕಣ್ದಣಿಯ
ವವರ ಕೀರ್ತನೆಯ ಕೇಳುತ್ತೆನ್ನ ಕಿವಿ ದಣಿಯ
ವವರ ಸಹಜಾನಂದಮಂ ತಿಳಿವುತೆನ್ನಯ ಮನಂ ದಣಿಯದಂತಾದುದು
ಯುವತಿಯುಳನಿನಿತು ದಿನವಗಲಿರ್ದನೆಂದೆಂಬ
ಲವಲವಿಕೆಯಿಂದ ತೊಂಬತ್ತು ಬರಿಸಂ ಸುಖದೊ
ಳವನಿಯೊಳಗೀ ಯೌವನದೊಳಿರ್ದು ಕಡೆಯೊಳೆನ್ನಂ ಕಾಣ್ಬುದೆಂದುಸುರ್ದನು ೩೯

ಪಲವಂದದಿಂ ಪೇಳುತವರ್ಗಳನೊಡಂಬಡಿಸಿ
ಚಲದಂಕರುಗಳಾಣೆಯಂ ಬಿಡಿಸುತಭಯುವಿ
ತ್ತಲಘುಚಾರಿತ್ರರಂ ಸುಖದೊಳಿರವೇಳ್ದು ಬಳಿಕಾನ್ಯೆದೆ ಮರೆಯಾದೆನು
ಕೆಲವು ದಿವಸಂಗಳಂ ಕಳೆದು ದಂಪತಿಗಳಂ
ಸುಲಭದಿಂ ಕೈಲಾಸಕಾನು ಕೊಂಡೊಯ್ದೆ ಕೇ
ಳೆಲೆ ಸೌಂದರೇಂದ್ರ ತಿರುನೀಲಕಂಠಯ್ಯನಂ ಮನವೊಸೆದು ಪೊಗಳು ಕಂಡ್ಯಾ ೪೦

ಅಂತು ಸಂಧಿ ೪ ಕ್ಕಂ ಪದಗಳು ೧೫೭ ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

---

೧ X (ಹ) ೨ ಕ (ಹ) ೩ ಮ (ಹ) ೪ + ತ (ಹ) ೫ X (ಹ)

## ಸಂಧಿ : ೫

ಸೂಚನೆ :

ಮಿಗೆ ಭಕ್ತಿಭೂಷಣಂ ಸದ್ಭಕ್ತತೋಷಣಂ
ಜಗದೇಕ ವೀರಂ ದಯಾಸಾಗರಂ ಇಹಃ
ಪಗೆಯಾಂಡನೆಂಬ ಶರಣಾಗ್ರೇಸರನ ಕಥೆಯನಾಲಿಸಿದನಾ ಸೌಂದರಂ

ಕೇಳಿಲೆ ಕುಮಾರ ಸೌಂದರ ವಿಸ್ತರಿಪೆನಿನ್ನು
ಚೋಳ ದೇಶದೊಳು ಕಾವೇರಿ ಕಡೆ ಪಟ್ಟಣ ವಿ
ಶಾಲದಿಂದೊಪ್ಪಿರ್ದುದಮಿತ ಸೌಭಾಗ್ಯ ಸಂತತ ಸುಖಾವಾಸವೆನಿಸಿ
ಲೀಲೆಯಿಂದಾ ಪುರಕ್ಕಧಿಪನಿರುತಿರ್ದನಾಂ
ಪೇಳಲೇನವನ ಭಕ್ತಿಯ ಭಾವಮಂ ಭಕ್ತ
ಜಾಲದೊಳಗವನಿಗೆಣೆಯಂ[ಕಾಣೆ] ವರ ಇಹಃಪಗೆಯಾಂಡನೆಂದಿರ್ದನು ೧

---

೧ ದು (ಹ)

ದೇವಭಕ್ತರ ನಡುವೆ ಸದ್ಭಕ್ತನೆನಿಸಿ ಮ
ತ್ತಾವಿನುತ ಶರಣರಿಷ್ಟಾರ್ಥಗಳ ಸಲಿಸುತ್ತ
ಲಾವುದಂ ಬೇಡಿದುದನಿಲ್ಲೆನ್ನದಿಹ ಭಾಷೆಯಿಂದಲವನೊಪ್ಪಿರ್ದನು
ಏವೇಳ್ವೆನವನ ವಿಕ್ರಮುವ ವಿತ್ಪನ್ನತ್ತೆಯ
ಕೇವಲಾನಂದತೆ ಸುಶೀಲತೆ ದಯಾಳತ್ವ
ಭೂವಳಯದೊಳಗವನ ಸುಗುಣಕೊರೆಯಂ ಕಾಣೆನಾಲಿಸೆಲೆ ಸೌಂದರೇಂದ್ರಾ ೨

ತನ್ನೊಳಿರುವರ್ಥಮಾ ಕೌಬೇರಗಿಂದಧಿಕ
ತನ್ನುದಾರತೆಯುಮಾ ಬಲಿ ಕರ್ಣರಿಂದಧಿಕ
ತನ್ನ ಭಕ್ತಿಯುಯೆನ್ನ ಮಚ್ಚಿಪರೊಳತ್ಯಧಿಕ ತನ್ನ ಸಿರಿ ಇಂದ್ರಗಧಿಕಂ
ತನ್ನಂಗಭೋಗದಬಲೆಯರಿಹರು ನೂರ್ವರುಂ
ತನ್ನ ಸಿಂಗರಿಪ ತರುಣಿಯರಿಹರು ನೂರ್ವರುಂ
ತನ್ನರಸಿಯನ್ರೂರ್ವರಿಪ್ಪರಾತಂಗವರೊಳಧಿಕಮೆನಿಸುವಳೋರ್ವಳು ೩

ಅವಳ ಪೆಸರೆಸೆವ ಪತಿಹಿತೆಯೆನಿಸುತಿಹಳು ಮ
ತ್ತವಳ ಸದ್ರೂಪಲಾವಣ್ಯಕಾರುಣ್ಯವಾ
ಸುವಿವೇಕ ಭಕ್ತಿಭಾವಂ ಪೇಳಲಳವೆ ತತ್ತರುಣಿಯನುಪಮದ ನಡೆಯ
ವಿವರಿಸಲ್ಕೆನೆವ ಮನವಿನ ಕೈಯೆನಿಸಿ ಪತಿಗೆ
ತವೆ ನೇಹದಿಂ ಪ್ರಾಣವಾಗಿರ್ದಳಾತನಿಗೆ
ನವರಮ್ಯವಹ ತಾರೆಗಳೊಳಿಂದುವಿನ ತೆರದಿಯೊಪ್ಪಿದಳ್ಪಟ್ಟದರಸೀ ೪

ಇಂತಪ್ಪ ಸತಿಗೆ ಪತಿಯಾಗಿ ಸುಖದಿಂದಿರ್ದು
ಸಂತತಂ ಶಿವಭಕ್ತಿ ಸಿರಿಯೊಳು ಮುಳುಂಗಿರ್ದು
ಅಂತರಿಸದೆನ್ನ ಭಕ್ತರಿಗೆ ಮಾಡುವ ನೀಡುವತಿಶಯುವನೆಣಿಸಲಳವೆ
ಪಂಥದಿಂದಿಲ್ಲೆನ್ನದಿಹಗುಪ್ಪರಂಗಟ್ಟಿ
ಸ್ವಾಂತರಂಗದೊಳಗಿಚ್ಛೈಸಿ ಭಕ್ತರ್ಬರಲು
ತಾಂ ತವೆ ಇದಿರ್ಗೊಂಡು ಮನ್ನಿಸುತ್ತಾಸನವನಿತ್ತು ಚರಣವನೆ ತೊಳೆದು ೫

---

೧ ಯೆ (ಹ)

ಸನ್ನುತಿಸುತವರ್ಗಳಂ ಮಜ್ಜನಂಗೈಸುತ್ತ
ಚೆನ್ನೆಸೆವ ಲಿಂಗಾರ್ಚನೆಯನಾಗಿಸುತ್ತ ಮ
ತ್ತಂ ನಲಿದು ಕರ್ಪೂರ ಸೊಡರ್ಗಳಿಂ ಬೆಳಗಿ ಧೂಪಾರತಿಗಳಿಂ ಪೂಜಿಸೀ
ಹೊನ್ನ ಹರಿವಾಣಂಗಳಂ ಸಾಲ್ಗೊಳಿಸುತಂ
ರನ್ನದಡ್ಡಣಿಗೆಗಳ ಮೇಲೆ ತಂದಿರಿಸುತಂ
ಭಿನ್ನವಿಲ್ಲದೆ ಸವಿಗಳಂ ಸಾಲಿಡುವ ರಸದ ಪಕ್ವಾನ್ನವೆಡೆಮಾಡುತೇ ೬

ನವಪರಿಮಳಂ ಕರಗಿದಂತಿಪ್ಪ ತುಪ್ಪಮಂ
ತವರಾಜಮಯ ಕ್ಷೀರಮಯ ನಿರ್ಮಳಾನ್ನಮಂ
ವಿವಿಧ ಸೌರಭ್ಯಮಂ ಸೂಸುತಿಹ ಶಾಖಾವಳಿಗಳಂ ಸುವ್ಯಂಜನಗಳಂ
ಕವಿಯಿಂಬುಗೊಂಡಿರ್ಪ ಕದಳೀ ಫಲಂಗಳಂ
ಇವು ಮೊದಲ್ಗೊಂಡಮೃತರಸಮಯ ಫಲಂಗಳಂ
ತವೆ ಇನಿದು ಕೊನೆಗಡರ್ದ ಹಲಸಿನುರು ತೊಳೆಗಳಂ ಬಿಡಬಿಡದಲೆಡೆಮಾಡುತೆ ೭

ತನಿರಸಂ ಮಡುಗಟ್ಟಿದಾಮ್ರದ ಫಲಂಗಳಂ
ಮನವನೊಳಕೊಂಬ ಬೆಳ್ದಿಂಗಳ ಕರಣೆಯೆನಿಪ
ಕೆನೆಮೊಸರನೊಲವಿಂದೆ ಗಣವಿಸರಕುಣಲಿಕ್ಕಿ ಹಿಗ್ಗಿ ಹಾರೈಸಿ ನಮಿಸಿ
ಘನ ಸುಪ್ರಸಾದಮಂ ಕೈಕೊಂಡು ಸವಿವ ಸುಖ
ದನುವದೇನೆಂಬೆನೆಲೆ ನಂಬಿ ತನ್ಮಾಧುರ‍್ಯ
ಮನಕೆ ಸವಿ ಕೈಗೆ ಸವಿ ಕಣ್ಗೆ ಸವಿ ಕಿವಿಗೆ ನಾಶಿಕಕೆ ಸವಿ ಬಾಯ್ಗೆ ಸವಿಯು ೮

ವಿನುತ ಪಂಚೇಂದ್ರಿಯಂಗಳಿಗೈದೆವೊಂದೆ ಸವಿ
ಯೆನಿಪ ದಿವ್ಯಾನ್ನಮಂ ಸವಿಸವಿದು ಗಣವಿಸರ
ಮನವೊಲ್ದು ಹಾರೈಸಿ ಹಿಗ್ಗುತಂ ಸವಿಯೊಳಗೆ ರಸನೆ ಮುಳುಗಾಡುತಿರಲು
ಅನಿತು ಸವಿಯೇರಿ ಸರ್ವಾಂಗ ಝೋಂಪಿಸುತಲಿರೆ
ಗಣವರನನಿಪ್ಪಿಹಃಪಗೆಯಾಂಡನೀಕ್ಷಿಸು
ತ್ತನುಪಮಾಽನಂದವಾನುತೆ ಪುಳಕಿಸುತ್ತವರ್ತುತ್ತಿಡಲ್ತಾಂ ತೇಗುತೆ ೯

---

೧ ಳಂಕುರುವೆ (ಹ) ೨ X (ಹ)

೧ಅಂತವರ್ತಣೆಯೆ ತಾಂ ಹಿಗ್ಗಿ ಹೊರೆಯೇರುತಾ
ನಂತರದಿ ಪರಿಮಳ ಜಳಂಗಳಂ೧ ಕೈಗಿತ್ತು
ಸಂತಸದಿ ಮಲಯಜಾದ್ಯನುಲೇಪನಂಗಳಂ ದಿವ್ಯ ವೀಳ್ಯಂಗಳಿತ್ತು
ಚಿಂತಿಸದೆ ನುಡಿದುದಂ ನೆನೆದುದಂ ನೆಸೆಯದುವ
ನಂತವರ್ಗಿತ್ತು ಕೊಂಡಾಡಿ ಮುಂಡಾಡುತಂ
ತಾಂ ತವೆ ಸುಖಾಬ್ಧಿಯೊಳಗೋಲಾಡುತೀತೆರದ ಭಕ್ತಿಯಿಂದಿರತಿರ್ದನು ೧೦

ಕರೆದೀವನಿಲ್ಲೆನ್ನದೀವನುರ್ಬುತ್ತೀವ
ನುರವಣಿಸುತೀವನಾರುತ್ತೀವನೊಲಿದೀವ
ನಿರದೆಯಿಲ್ಲೆನ್ನದಿಹ ಭಾಷೆಯಂ ಬಲಿದು ಭಕ್ತಿಗೆ ಕೊರತೆಯಿಲ್ಲದಂತೆ
ಅರುವತ್ತು ವತ್ಸರಗಳೀತೆರದಿ ನಡೆಯಲಾ
ನರಿವೆನಿವನಮಳ ಭಕ್ತಿಯನೆಂದು ಕಪಟದಿಂ
ಚರವೇಷಮಂ ತಳೆದ ಚರ್ಯಮಾನೊರೆವೆನಿವನಾಲಿಸೆಲೆ ಸೌಂದರೇಂದ್ರಾ ೧೧

ಜಡೆಗಳಂ ಕಪ್ಪೆಸೆವ ಪೊಸಕುಂತಳಂ ಮಾಡಿ
ಉಡುಪತಿ ಸುರಾಪಗೆಗಳಂ ಮುಡಿವ ಹೂ ಮಾಡಿ
ತೊಡವಾದ ಫಣಿಕುಂಡಲವನು ಮಾಣಿಕದ ಕಡುಕಿಕುಂಮಾಡಿ ಪಣೆಗಣ್ಣನು
ಒಡನೆ ನೊಸಲಿನ ಭಸಿತದಿಂದದಂ ಮರೆಮಾಡಿ
ಇಡಿದ ಸುರರುರು ಶಿರೋಮಾಲೆಗಳ್ಕಳ್ ಮೌಕ್ತಿಕದ
ತೊಡವೆನಲ್ಮಾಡಿ ದಶಭುಜಗಳೆರಡೇ ಭುಜದೊಳಡಗುವಂತನುವಮಾಡಿ ೧೨

ವರಪಂಚ ಮುಖಗಳೊಂದೇಮುಖದೊಳಳವಡಿಸಿ
ಕೊರಳಗರಳವನು ಕತ್ತುರಿಯಂತೊಡಂಬಡಿಸಿ
ಕರಿಚರ್ಮಮುಮನುತ್ತರೀಯದಂತಂ ರಚಿಸಿ ಪೊದೆವ ಪುಲಿದೊವಲನುಂದು
ಸುರುಚಿರ ದುಕೂಲವನಿದೆಂಬಂತೆಯನುಗೊಳಿಸಿ
ಧರೆಗೆ ಪೊಸತೆನಿಪ ಚೆಲುವಾದ ರೂಪವ ಧರಿಸಿ
ಸುರರಂ ಮರುಳ್ಗೊಳಿಸುತಂ ಧರಾತಳಕಿಳಿದು ಚೋಳದೇಶಂ ಪೊಕ್ಕನು ೧೩

೧ X (ಹ) ೨ ಗಂ (ಹ) ೩ X (ಜ) ೪ ಕ್ಕ (ಹ)

ನಡೆದಿಹಃಪಗೆಯಾಂಡರೂರ ಹತ್ತಿರೆಬಂದು
ಸಡಗರದಿ ಪುರದ ಬಾಗಿಲ್ವಾಡದೊಳು ನಿಲಲು
ಇಡಿದ ಪರಿಮಳದ ಚೊಲ್ಲೆಯ ಕಳೆಗಳೆರಗುತಿರೆ ಕುರಳ್ಗಳೊಂದೆರಡು ನೊಸಲೊಳ್
ಬಿಡದೆ ಸೂಸುತ್ತಲಿರೆ ಪಣೆಯ ಭಸಿತದ ಬೊಟ್ಟು
ಒಡನೊಡನೆ ಬೆಳಗುತಿರೆ ಕಿವಿಯೊಳಿಹ ಮಾಣಿಕದ
ಕಡಂಕುಂ ಹೊಳೆಹೊಳೆವುತಿರೆ ಬೆಳೆವ ತುಪ್ಪಳಮೀಸೆ ಕಳಕಳಿಸಿ ನಳನಳಿಸಲು ೧೪

ಒಂದೆರಡು ವೀಳೆಯದ ಸುಲಿಪಲ್ಲುವೊಪ್ಪುತಿರೆ
ಸಂದಣಿಪ ಚೆಲುವಿಂದ೩[ಬೆಳುಪು]೩ವೊಗವಲರುತಿರ
ಲಂದು ಮುತ್ತಿನ ಹಾರವಗಲದುರದೊಳು ಮೆರೆಯೆ ಸೊಬಗ ವರ್ಣಿಸುವಡರಿಯೇ
ಸಂದಣಿಸಿ ನೋಳ್ಪ ಪುರಜನ೩ದ೩ ಮನಸಿಂಗೆ ಚೋ
ದ್ಯಂದೋರುವಂತೆ ಕರನಖದ ಬೆಳಗಾವರಿಸಿ
ಸುಂದರತೆವೆತ್ತಿರ್ದ ವಿಟವೇಷದಿರವ ನಾನೇವೇಳ್ವೆನೈ ಸೌಂದರಾ ೧೫

ಬೆಳುದಿಂಗಳಿಂದೆ ಮಾಡಿದ ಮೂರ್ತಿಯಂದದಿಂ
ಬೆಳಗು ಚೆಲುವಾಕಾರವಾದುದೆಂಬಂದದಿಂ
೪[ಬಳು]೪ಕುತ್ತ ಕೊಂಕುತ್ತ ಮೆಲ್ಲಡಿಯನಿಡುತ ಸುವಿಲಾಸಮಂ ವರಸೂಸುತ
ಪೊಳಲ ಜನಕ್ಕೈದೆ ಜವ್ವನಗಾಳಿ ತೀಡುತ್ತ
ಪಲವು ಜನರಲ್ಲಲ್ಲಿ ಎವೆಯಿಕ್ಕದೀಕ್ಷಿಸುತ
ನಳಿನಮುಖಿಯರ್ನಿಂದು ನೋಡುವರ್ತಿರುತಿರುಗಿ ನೋಡುವರ್ ಮಾತಾಡುವರ್ ೧೬

ಈ ಕಂಗಳೀ ನೋಟವೀ ಹರೆಯುವೀ ಚರ್ಯ
ಲೋಕಕ್ಕಿದಚ್ಚರಿಯ ರೂಪ ಸುಳಿಯಿತ್ತುಮವು
ಜೋಕೆಯಿಂ ನಡೆವ ಪರಿಪೊಸತು ನೋಡುವ ಪರಿಕರಂ ಪೊಸತು ಪೊಸತಿದಾಯ್ತು
ಈ ಕುಶಲ ನುಡಿಗಳಿವು ಪೊಸತು ನಿಲುವಿನ ಪರಿಯ
ನೇಕ ಪೊಸತಾಯ್ತು ಸೋಜಿಗದ ಸುಕುಮಾರನಿವ
ನೀ ಕಲಿಯರೂ೫ಪ೫ ಪೊಸತಂ ತಾಳಿ ಬಂದನೆಲಗವ್ವ ನೀನೀಕ್ಷಿಸವ್ವಾ ೧೭

೧ ಗ (ಹ) ೨ ಬೆಳಸ (ಹ, ಜ) ೩ X (ಹ) ೪ ಬೆಳ (ಹ, ಜ) ೫ ಪಂ (ಹ)

ಎನುತೆ ತಮ್ಮಂ ಮರೆದು ಬೆಂಬತ್ತಿ ಬರುತಿರ್ದು
ತನತನಗೆ ಮೀರುತಂ ಬೆಂಬತ್ತಿ ಬರುತಿರ್ದ
ರಿನಿತಲ್ಲಪೆನ್ನ ಪೆಜ್ಜೆಯ ಸೋಂಕಿ ಹಿಗ್ಗುತ್ತೆ ಸವಿಸುಡಿಗೆ ಮರುಳಾಗುತೆ
ವನಿತೆಯರ್ಬೆಂಬತ್ತಿ ಬಂದರು ವಸಂತ ರಾ
ಜನ ಬಳಿಯಲೊಪ್ಪುವ ಲತಾವಳಿಗಳಂತಿಂದು
ವಿನ ಬಳಿಯಲಿರ್ಪ ತಾರಾನಿಕರದಂತಮಾ ಪುರವ ಕೇರಿಕೇರಿಗಳೊಳು ೧೮

ಈ ಪರಿಯೊಳಾಪುರದೊಳತ್ತಿತ್ತ ಚರಿಸುತ್ತ
ಲಾ ಪರಮಭಕ್ತನರಮನೆಯ ಕಾಂಬಳತೆಯೊಳು
ನಾ ಹೋಗಿ ನಿಲ್ಲಲಾತಂ ಕಂಡು ಶರಣಾರ್ಥಿ ದೇವ ಶರಣೆಂದು ನಮಿಸಿ
ಗೋಪವಾಹನನೆ ಬಿಜಯಂಗೈವುದೆಂದು ಮಹಿ
ಮಾ ಪೂರ್ಣನಹನಿಹಃಪಗೆಯಾಂಡ ಗೃಹಕೆ ಸ
ಲ್ಲಾಪದಿಂದೊಡಗೊಂಡು ಪೋಗುತಾಸನವಿಕ್ಕಿ ಚರಣಂಗಳಂ ತೊಳೆವುತ ೧೯

ದೇವ ಬಿಜಯಂಗೈವುದೆಡೆಮಾಡಿತೊಳಗೆನಲು
ನಾವಿದಕ್ಕಿಚ್ಛೈಸಲಿಲ್ಲೆಲೆ ಭೂಪ ಕೇ
ಳಾವುದಕ್ಕಂ ಕೊರತೆಯಿಲ್ಲವೆಮಗಿನ್ನು ನೀಂನೀಪಂ ವಾರ್ತೆಯನೆ ಕೇಳ್ದು
ಭಾವಿಸುತ್ತಾಸೆಶಿವಮಡುತಿಲ್ಲಿಗೈತಂದೆವೆಲೆ
ಭೂವರನೆ ಉಳ್ಕೊಡುಂಟೆಂಬುವುದು ಇಲ್ಲವೆನೆ
ನಾವತ್ತ ಪೋಪೆವಿದಕುಸುರೆನಲ್ಕಾಭೂಪ ಸಂತಸದೊಳಿಂತೆಂದನು ೨೦

ಎಲೆ ದೇವ ನಿಮ್ಮ ಚಿತ್ತದೊಳಿರ್ದುದಂ ಕೇಳಿ
ಒಲವಿಂದಶಿವಂಶಿ ನೀವು ಕೈಕೊಂಡು ತದ್ದಾನ
ಫಲವನೆನಗಿತ್ತು ಕರುಣಿಪುದೆಂದು ನಲಿದಿಹಃಪಗೆಯಾಂಡ ನುಡಿಯಲೊಡನೆ
ಇಳೆಯಾಣ್ಮ ಕೇಳಿತ್ತಲೆಮ್ಮ ದೇವಾರ್ಚನೆಗೆ
ಲಲನೆಯೊರ್ವಳು ಕೊರತೆಯಾಗಿರ್ದಳದರಿಂದೆ
ಪಲವು ಬಗೆಯಿಂದೆ ನಿಳನ್ನಂಳ ಬೇಡಿಕೊಂಡೆವಿಂದೀವ ಭಾಷೆಯನುಳ್ಳಡೆ ೨೧

---

೧ X (ಹ) ೨ ವಿ (ಹ) ೩ ದಿಂ (ಹ) ೪ ನ್ನ (ಹ)

ವಿಮಲ ಮತಿಯಂ ಶುಭಗೆಯಂ ಭಕ್ತಿಯುಕ್ತೆಯಂ
ಕಮಲಮುಖಿಯಂ ಕರ್ಮರಹಿತೆಯಂ ನಿನ್ನವರ
ಯುವತಿಯರೊಳೊರ್ವ ಸತಿಯಳನಂ ಸರಾಗದಿಂದಿತ್ತಡೀಶಾರ್ಚನೆಯದು
ಕ್ರಮದಿಂದೆ ನಡೆವುದು ಮಹಾಸಂದವೆಮಗಹುದು
ಸಮರಾಜರೊಳು ನಿಮ್ಮ ಕೀರ್ತಿ ಬೆಳೆವುದು ಇದಂ
ರಮಣೀಯವೆನಲುಸು[ರೆ]ಲ್ಲೈ ಭೂಪಯೆನೆ ಕೇಳ್ದು ಮತ್ತಾತನಿಂತೆಂದನು ೨೨

ಕರೆಸಿದಪೆನೆನ್ನಯ ವಿಳಾಸಿನಿಯರಂ ಮನಕೆ
ಸರಿಯಾದ ಸಖಿಯಳಂ ಕೊಂಬುದೆಂದಬಲೆಯರ
ನೆರವಿಯಂ ತಂದು ನಿಲ್ಲಿಸಲಾನು ನಸುನಗುತ್ತಾತನೊಡನಿಂತೆಂದೆನು
ಸರಿಸರಿಯಿದಂ ಸಾಲ್ಗು ತಪ್ಪುಂಟೆ ನಿನ್ನಲ್ಲಿ
ಭರದಿಂದೆ ನೀಂ ಕೊಟ್ಟುದಂ ಕೊಳ್ಳದೆನ್ನೊಳುಂ
ನೆರೆ ತಪ್ಪಿದಲ್ಲದಿನ್ನೇನುಂಟು ನಿನ್ನ ಶಪಥದ ನುಡಿಯೆ ಹಸನಾದುದೈ ೨೩

ಎಮಗೆ ಹೆಂಡರು ಬೇಡ ತೊತ್ತಿರಂ ನಾವೊಲ್ಲೆ
ವೆಮಗಿಂತ ಮಾತು ಸೈರಿಸದಿದಂ ನೀ ಬಲ್ಲೆ
ಕ್ರಮದಿಂದೆ ಕೊಡುವನೆಂದಡೆ ಬಂದೆವಲ್ಲದಿನ್ನೇತಕೀಕಾಂಕ್ಷೆಯೆನಲು
ವಿಮಲ ಮತಿಯಾದಿಹಃಪಗೆಯಾಂಡ ನಡನಡುಗು
ತಮಮ ತಪ್ಪಿದೆನು ತನುಜನೊಳು ತಪ್ಪರಸುವರೆ
ನಿಮಗೆ ಬೇಕಾದಡಿನ್ನುಂಟು ಸತಿಯನೂರ್ವರದರೊಳೊಬ್ಬಳ ಕೊಂಬುದು ೨೪

ಎನುತಲ್ಲಿ ನೂರು ಸತಿಯರನೈದೆ ಚಿತ್ತರಿಸಿದಂ
ಮಿನುಗುವಂಗನೆಯರೆನ್ನೆದುರಿನೊಳು ನಿಲಿಸಿದಂ
ಮನಕೆ ಬಂದವಳನೊಬ್ಬಳನೈದೆ ಕೊಂಬುದೆಲೆ ದೇವಯೆನುತಾತ ನಮಿಸೆ
ಎನಿತೆನಿತು ಸತಿಯರಂ ತೋರುತ್ತಲಾತನಿರೆ
ಅನಿತನಿತು ಸತಿಯರಂ ಒಲ್ಲೆನುತ್ತಾನು ಬರೆ
ವನಿತೆಯರ್ತನ್ನರಮನೆಯೊಳಿರ್ದರೆಲ್ಲರಂ ತೋರಲಾನೊಲ್ಲೆನೆನಲು ೨೫

೧ ರ (ಹ, ಜ) ೨ ಕ (ಹ)

ಕೇಳುತಲಿಹಃಪಗೆಯನಿನ್ನೆಂತು ಮಾಡುವೆಂ
ಬಾಲೆಯರ್ಕ್ಕಂಡರೆಲ್ಲರನೊಲ್ಲನೇಗುವೆ ಸು
ಶೀಲಳಹ ಪತಿಹಿತೆಯಳಂ ತೋರ್ಪೆನೊಲ್ಲೆನೆಂದಡೆ ಬಳಿಕ ನೋಡಿಕೊಳುವೆ
ಬಾಲೇಂದುಧರಗೆನ್ನ ತನುವಂ ಸಮರ್ಪಿಸುವೆ
ನಾಲೋಚನಂಗೈವುದೇಕೆನುತ್ತಾತೆಯಂ
ಆಳಿಯರನಟ್ಟಿ ಕರೆಸಲ್ಬಂದಳಾತನ ಮನಂ ಹರುಷದೊಳ್ಬೆರಸಲು ೨೬

ಬರೆ ಕಂಡು ದೇವ ಪರಿಚರ್ಯಕ್ಕೆ ತಕ್ಕ ಸತಿ
ಹರನೆ ಕೈಕೊಂಬು[೧]ದು ಬೇರಿಲ್ಲ ನೀವೆ ಗತಿ
ಕರುಣಿಸೆಂದೆನುತ ಚರಣಕ್ಕಾತ ನಮಿಸಲ್ಕೆ [೨]ಸುಮ್ಮಾನಮಂ ತಾಳುತೆ
ಧರಣಿಪತಿಕೇಳು ನಿನ್ನಯ ಭಕ್ತಿಯಂ ನಾವು
ಪರಮ ಹರುಷಿತರಾಗಿ ಕೈಕೊಂ[೩]ಡೆವೈ ನಿನ್ನ
[೪][ಬಿರು]ದು ಸಾಫಲ್ಯಮಾದುದು ಭಳಿರೆಭಳಿರೆನುತ್ತಾತನಂ ನುತಿಗೈದೆನು ೨೭

ನುಡಿಗೆ ಪುಳಕಿತನಾದನೊಲಿದಿಹಃಪಗೆಯಾಂಡ
ನಡಿಗಡಿಗೆ ಹೆಚ್ಚುತಾನಂದಮಂ ಕೈಕೊಳುತ
ಪ್ಪೊಡನೆ ಕೃತಕೃತ್ಯನಾದೆಂ ದೇವ ನಡೆತಂದೆಯಿಂದು ನಾಂ ಧನ್ಯನಾದೆಂ
ಎಡೆವಿಡದ ಸುಖವ ಕರುಣಿಸಿದೆಯೆಲೆ ತಂದೆ ನಿ
ನ್ನಡಿಯ ಒಲುಮೆಯನಿಂದು ಬಲವಾದುದೆನಗೆನು
ತ್ತೊಡನೆ ಪತಿಹಿತೆಯುಂ ಸರಾಗದಿಂದಿತ್ತು ಕಳುಪ್ಪವನಾದ ನಮ್ಮೀರ್ವರಂ ೨೮

ಸಾರ್ದ[೫]ದಿ ನಾವೀರ್ವರೈತರಲ್ಕಾ ಪುರದ
ಬೀದಿಯೊಳ್ ಜನವೆಲ್ಲಿದೇನಿದೇನಘಟಿತಂ
ಈ ದಿವ್ಯ ತರುಣಿಯಂ ಕೊಂಡೊಯಿವನಿವನೇಂ ಮರುಳ್ಗೈದನೆಂದರಿಯೆವು
ಆದಡಿನ್ನೇನಿಹಃಪಗೆಯಾಂಡನೇನಾದ
ನೀಧರೆಯೊಳಿಂತು ಕೊಟ್ಟವರುಂಟೆ ಸತಿಯರಂ
ಮೋದದಿಂ ಬಯಸಿ ಮದನಂ ಹಡೆಯದಿಃಹಃ ರೂಪವತಿಯನಿವಗೇತಿತ್ತರೋ ೨೯

---

ದಂ (ಹ) ೨ ಸಮ್ಮಾನಮಾ (ಹ) ೩ ಡೈ (ಹ) ೪ ಬರಿ (ಜ), ಬರೆ (ಹ) ೫ ದೀ (ಹ)

೧[ನೇ]ಂಸರಂ ಗಾಣದಿಂತೀ ಸೌಕುಮಾರಿಯಂ
ವಾಸಿಪಂಥಗಳಿಂದೆ ಮೋಸಮಾಡಿದಸಿವಂ
ಗೇಸಾಡಿ ಫಲವೇನು ಮೀಸಲ ತಪಂಗೈದನೀ ಸರೋಜಾಕ್ಷಿಗಾಗಿ
ಬೀಸರಕ್ಕೆ ಪಕ್ಕಾದುದೀ ಸತಿಯ ವಂಶವದು
ಲೇಸೆನುವರೋ ಕೇಳುತಾ ಸಕಲ ಬಂಧುಗಳ್
ಗಾಸಿಗೈವರೊ ನೊಡುತೀ ಶಿವನ ರೂಪವೆನುತಾ ಸರ್ವಜನ ನುಡಿದುದು ೩೦

ಇಂತು ನುಡಿವರ್ಗೆ ಪತಿಹಿತೆ ಕೋಪಿಸುತ್ತೆ ನಿಮ
ಗೆಂತಾದಡಂ ಶಿವನ ಭಕ್ತಿ ಸಮನಿಸದಿರ್ಕೆ
ಚಿಂತೆ ನಿಮಗೇತಕೆನುತವರಂ ಜರಿದು ನುಡಿಯಲಾಕೆಗಿಹ ಬಂಧುಜನರು
ಅಂತರಿಸದೀ ವಾರ್ತೆಯಂ ಕೇಳುತುರಿದೆದ್ದು
ಸಂತಸದಲೆಮ್ಮನುಜೆಯಂ ಮರುಳ ಶಿವಗಿತ್ತ
ನೆಂತೊಯ್ವನವನೆನುತಲಾರ್ಭಟಿಸುತಾಕ್ಷಣದೊಳವರ್ಗಳೆಮ್ಮಂ ತಡೆದರು ೩೧

ಕೊಟ್ಟನಿಂತಭಿಮಾನಮಂ ನೆರೆ ವಿಚಾರಿಸದೆ
ಕೊಟ್ಟನೀ ಲೋಕಾಪವಾದಮಂ ಮನ್ನಿಸದೆ
ಕೊಟ್ಟನವನೊಳು ಕುಲವಿದೆಂತೆಂಬುದರಿಯದಲೆ ಏನೆಂದು ನುಡಿವೆವಿದಕೆ
ದಿಟ್ಟನವನಾವ ಕೊಂಡೊಯ್ವಗೆಂಟೊಡಲುಂಟೆ
ನೆಟ್ಟನಂಗನೆಯನೊಯ್ವಗೆ ನೊಸಲ ಕಣ್ಣುಂಟೆ
ಪಟ್ಟದರಸಿಯನಿತ್ತಿಹಃಪಗೆಯನಂ ಪಿಡಿಯೆನುತ್ತೆ ಕಿಡಿಕಿಡಿಯಾಗುತೆ ೩೨

ಚೋಳನಾಗಲಿಯವನ ಕೈಯಿಂದೆ ತಂದಪೆವು
ಭಾಳಲೋಚನನಾದಡಂ ಕಾದಿ ತಂದಪೆವು
ಏಳೇಳೆನುತ್ತಾಕೆಯನುಜರಗ್ರಜರಾದಿ ಬಂಧುಗಳ್ ಸಂದಣಿಸಿತು
ಪೇಳಲೇನಮಮ ಗಜದೊಡ್ಡು ರಥದೊಡ್ಡು ಹಯ
ಜಾಲಂ ಪದಾತಿಯೊಡ್ಡಂ ಛತ್ರಚಾಮರಂ
ಕೋಲಾಹಲಂಗಳಿಂದಿಡಿದ ಗಿಡಿಬಿಡಿ ಕೊಂಬು ಕಹಳಾರವಂಗಳಿಂದೆ ೩೩

೧ ನ್ಯಾ (ಹ, ಜ)

ಬೆಂಬತ್ತಿ ಬರುತಲೆಲೆ ಮಿಂಡಗೊರವಂ ನಿಲ್ಲು
ಹಂಬಲಿಸಿ ಸಖಿಯಳಂ ಕೊಂಡೊಯ್ದು ಬದುಕುವೆಯ
ಮುಂಬರಿದು ಪೋಗದಿರ್ಮರುಳೆ ಪತಿಹಿತೆ ನಿನಗೆ ದಕ್ಕುವಳೆ ಚಕ್ಕನೀಗ
ರಂಬಿಸಲಿಹಃಪಗೆಯನೊಲ್ಮರುಳರಾವಲ್ಲ
ರಂಭೆಯಂ ಬಿಟ್ಟು ಪೋಗೆನಲಾಪುರದ್ವಾರ
ದಿಂ ಭರದಿ ಪಿಂದಿರುಗಿ ಇಹಃಪಗೆಯನಂ ಕಾಣುತಾತನೊಡನಿಂತೆಂದನು ೩೪

ನೀಂಕೊಟ್ಟೆ ನಾಂಕೊಂಡೆನೇನುಂ ಕೊರತೆಯಿಲ್ಲ
ಶಂಕಿಸದೆ ಬಡಭಕ್ತರೊಡನಿದೇಂ ಕಿಚ್ಚಲ್ಲಿ
ಯೇಂ ಕಾರಣಂ ತರುಣಿಯಳನಿತ್ತೆ ಇತ್ತ ಭಕ್ತಿಯೊಳು ಹೊಸಯುಕ್ತಿಗೈದೆ
ಕಿಂಕರತೆಯುಂಟುಂಟು ನಿನ್ನ ಸುಡಿಗಡಣದಲಿ
ಕೊಂಕುಂಟು ನಿನ್ನ ಭಕ್ತಿಯಲೀತೆರಂಗೈಿಯೆಂ
ಶಂಕರಂ ಮೆಚ್ಚ ಮೊದಲಿಲ್ಲೆನಲ್ದೋಷವೇನೆನಲಾತನಿಂತೆಂದನು ೩೫

ಆರಿಂದೆ ನಿರ್ಗಮನವಾಯ್ತು ಪೊಳಲೊಳ್ ನಿನ್ನ
ನಾರಿಯಳ ಸಕಲ ಬಂಧುಗಳಿಂದದೇಕೆ ಸುಕು
ಮಾರಿಯೆಮ್ಮವಳನೀ ಮಿಂಡ ಜಂಗಮಕಿತ್ತನಾವ ಕೊಂಡೊಯ್ವನಾವ
ತೋರೆನುತ್ತಾರ್ಭಟಿಸುತತಿ ಬಂಲಂಂವೆರಸಿ ಬಂ
ದೀ ರಮಣಿಯಂ ನಮ್ಮನುಂ ತಡೆದರಹಹ ಮ
ದ್ವೀರತ್ವವರಿಯದೆನ್ನೊಳು ಸೆಣಸಿ ಜಯಿಸುವರೆ ನಾಂ ಬರುವೆನೆಂದನವನು ೩೬

ಎಲೆಲೆ ಬೇಡೈ ಮಗನೆ ಗೆಲಲರಿದವರ್ಗಳಂ
ಬಲಮುಳ್ಳವರ್ ಬಾಹುಬಲಮುಳ್ಳವರ್ಬಿರುದ
ಚಲಮುಳ್ಳವರನೆಂತು ಗೆಲುವೆನೀನೋರ್ವ ನಿನಗರಿದರಿದು ಪೋಗಬೇಡ
ಪಲವು ದಿನವಿಲ್ಲೆನ್ನದಿತ್ತುದದು ಸಾಲದೇ
ಲಲನೆಯೊರ್ವಳನೀಯದಿರೆ ಕೊರತೆಯಾದಪುದೆ
ಕಲಹವೆಮ್ಮಿಂದೇತಕ್ಕೈ ನಿನ್ನ ಸತಿಯ ಕೈಕೊಳು ನಾವು ಪೋಪೆವೆನಲು ೩೭

---

೧ ಯ್ಯ (ಹ) ೨ ಲ (ಹ)

ಕೇಳುತಲಿಪಃಪಗೆಯನೊಳಗೊಳಗೆ ನಸುನಗುತ
ತಾ[1]ಳ[1]ದುರುಗೋಪಮನಿದಾವುದೆಂದರಿದೆನುತ
ಸೀಳುವೆನು ಶಿವದೂಷಕರನೆಲ್ಲನೀಕ್ಷಣದೊಳೆನುತಲವನುಬ್ಬೇರುತಾ
ಭಾಳಾಕ್ಷ ಶಿವರೂಪನೀನೀಕ್ಷಿಸೆನ್ನ ಕ
ಟ್ಟಾಳುತನ ತಲೆಹೋದಡಟ್ಟೆಯಿಂದರಿಗಳಂ
ಬೀಳಹೊಯಿವುತ್ತ ಬಿಡಿಸುವೆನವರ ಬಿಂಕಮಂ ನೋಡೆನುತ್ತುರಿದೆದ್ದನು ೩೮

ಭಸಿತ ರುದ್ರಾಕ್ಷಿಮಾಲಾವಿಭೂಷಿತನಾಗು
[2]ತೊ[2]ಸೆದು ಪೊಂಬಟ್ಟೆಯಂ ಬಿಗಿದುಟ್ಟು ಘುಳು ಘುಳಿಪ
ಪೊಸತೊಡರನೆಡಗಾಲೊಳಿಟ್ಟು ತಾನಾರಾಧಿಪಸಿ ಫಳಕಮಂ ಕೊಳುತ್ತೆ
ಅಸಮವೀರನ ಪಟ್ಟಮಂ ಭುಜದೊಳಾನುತ್ತೆ
ಮಿಸುಪ ತಿಸುಳ ಕಠಾರಿಗಳನಾಂತು ರಭುಳಪಿಸುತೆ
ಪಶುಪತಿ ಶರಣರಂಘ್ರಿಗಳಿಗೆ ಜಯಜಯವೆನುತೆ ನಡೆದನಮಗಭಯ ಕೊಡುತೆ ೩೯

ನಡೆದೇವ ನೀನಂಜಲೇಕೆನುತ್ತಂ ಮುಂದೆ
ನಡೆತಂದನಪ್ರತಿಮನಥಟನುರುವಣೆಯಿಂದೆ
ಬಡದಕ್ಷನೆಸಗಿದ ಮುಖಕ್ಕೆ ವೀರೇಶ್ವರಂ ನಡೆವಂತೆ ಘುಡುಘುಡಿಸುತಾ
ಒಡನೊಡನೆ ಕೂಗುತ ಭುಜಾಸ್ಫಾಲನಂಗೈಪ್ಪು
ತಿಡಿದ ಬಲಕಿದಿರಾಗಿ ನಡೆಯಲರಿಚತುರಂಗ
ಎಡೆವಿಡದೆ ಬಂದು ಮುತ್ತಿತು ತರಗುರಿಯ ಮೇಲೆ ಕವಿದು ಬೀಳುವ ತೆರದೊಳು ೪೦

ಹೊಕ್ಕನರಿಬಲದೊಳು ಮಹಾವೀರರೊಡ್ಡಮುರಿ
ದಿಕ್ಕಿದಂ ರಥವಾಜಿಗಳ ತಂಡದೊಳಗೆ ಧು
ಮ್ಮಿಕ್ಕಿದಂ ರಥಿಕರಾವುತರಸುಗಳಂ ಶಮನ ಪುರವ ಕಾಣಿಸುತ ಮತ್ತೆ
ಇಕ್ಕೆಲದೊಳುರವಣಿಪ ಬಂಧುಗಳ ಸಂದಣಿಯು
ಬಿಕ್ಕಿ ಬೀಳುವ ತೆರದಿ ಕಡಿಕಡಿದು ಕಡಿದೊಟ್ಟು
ತಕ್ಕಟ ಶಿವದ್ರೋಹಿಗಳು ಬನ್ನಿಯೆನುತ ಬೊಬ್ಬಿರಿದಾರ್ದು ಭುಜ[3]ಹೊಯಿ[3]ವನು ೪೧

೧ ಳ (ಹ)   ೨ ಪೊ (ಹ)   ೩ ವೈ (ಹ)

ಇರಿಕೊಲ್ಲು ತಿವಿ ಚುಚ್ಚು ಕಡಿಯಿಹಃಪಗೆಯನಂ
ದೊರೆಯೆನುತ್ತ್ತಂಜದಿರಿ ಕೈಮರೆಯದಿರಿ ಇವಂ
ಶರಣನೆನ್ನದಿರಿ ಕಲಿತನದ ಮನಂವಿಳುಹದಿರಿ ಇವನ ವಿಕ್ರಮವ ನೋಡಿ
ಧುರಕಳುಕಿ ಬೆಂಗೊಡದಿರೀತನೇಂ ದಕ್ಷ ಸಂ
ಹರನೆ ಪುರಹರನೆ ಇವನಂ ಬಿಡದಿರೆನುತಲಾ
ದುರುಳ ಬಂಧುಗಳ ಗೊಂದಣವೈದೆ ಮುತ್ತಿತ್ತೈ ಮತ್ತೀತನಂ ಧುರದೊಳು ೪೨

ಮುತ್ತಿದರಿಬಲವನೋಡುತ್ತೀತ ಶೂಲದಿಂ
ದೊತ್ತಿ ತಿವಿವುತ್ತ ಪೊಯ್ವುತ್ತಸಿಯನೆತ್ತಿ ಮ
ತ್ತತ್ತಿತ್ತ ಬಿಡದೆ ಬೆಂಬತ್ತಿ ತರಿವುತ್ತ ಕೊರೆವುತ್ತ ಪೆರೆಗತ್ತಿಯಿಂದ
ಒತ್ತಿಬಹ ಮತ್ತಗಜ ವೊತ್ತಮಂ ಬಿಡದೆ ಸವ
ರುತ್ತುತ್ತಮಾಶ್ವಮಂ ಕತ್ತರಿಸಿ ಕೆಡಹುತು
ಬ್ಬುತ್ತ ಹಾರುತ್ತ ಚೀರುತ್ತಿರ್ದ ಕೊಳಗುಳದ ಬಿತ್ತರವನೇವೇಳ್ವೆನು ೪೩

ಖಂಡಿಸಿದನಮಮ ಕಾಲಾಳ್ಗಳ ಶಿರಂಗಳಂ
ತುಂಡಿಸಿದನುರವಣಿಪ ರಥಿಕರ ಕರಂಗಳಂ
ದಂಡಿಸಿದನಮಿತ ಬಂಧುಗಳ ಗೊಂದಣವು ಕಡಿಖಂಡಮಯವಾಗುತೆಸೆಯೆ
ದಿಂಡುರುಳಿತರಿ ಸೇನೆ ಮುಟ್ಟಿಕಾದುವ ಮಹಾ
ಚಂಡಪ್ರತಾಪರೆಲ್ಲರ್ತೊರೆದರಸುಗಳಂ
ಪುಂಡನಿವ ವೈರಿಗಳ ಗಂಡನೆನುತಾ ಜನಂ ಕೊಂಡಾಡುತಿರುತಿರ್ದುದು ೪೪

ಬಲವೆಲ್ಲ ನಸಿದು ಪೋಗಲ್ಕುಳಿದಿಹ ಕ್ಷೀಣ
ಬಲರಿಹಃಪಗೆಯಾಂಡನುರುತರದ ದಿವ್ಯಭುಜ
ಬಲಕಂಜೆ ಶಸ್ತ್ರಮಂ ಇಳುಹಿ ಕೊಲ್ಲದಿರಯ್ಯ ನಮ್ಮನೆನುತವರು ನುತಿಸೆ
ಕೊಲುವುದಿಲ್ಲವು ನಿಮ್ಮನೆಲೆ ಪಾಪಿಗಳಿರ ಕೇಳ್
ಸಲೆ ಶಿವದ್ರೋಹಿಯಂ ಪೊರಲಾರದಿಹ ಧರಾ
ಲಲನೆಯಳ ಭಾರವಂ ಇಳುಹಿ ಕಳೆದೆನೆನುತ್ತಿಹಃಪಗೆಯು ನಗುತಿರ್ದನು ೪೫

೧ + ವಿಮಳ (ಹ) ೨ ರ್ಕೆ (ಹ)

ತನ್ನೊಡನೆ ಕಾದುವರಿಭಟರಿಲ್ಲದಂತಾಗೆ
ನನ್ನಿಯಿಂ ಬಂದೆನಗೆ ವಂದಿಸುತ್ತೆಲೆದೇವ
ಕುನ್ನಿಗಳ ಕಂಟಕಂ ಕಡೆಗಾಯ್ತು ತಮ್ಮಿಷ್ಟವಿದ್ದತೆರದಿಂ ನಡೆವುದು
ಇನ್ನು ಸಂಶಯವಿಲ್ಲವೆನಲು ತರ್ಕೈಸುತ್ತ
ಲೆನ್ನಿಂ ಬಳಲ್ದಿನೋಂದಾ ಕಂದ ಮೇಲೆ ಮುಂ
ದಿನ್ನಾರುಮಿಲ್ಲವೆ ನೋಡುತಿರುಯೆನುತವಳನೊಡಗೊಂಡು ನಡೆತಂದೆನು ೪೬

ಇಲ್ಲಿಂದ ಮೇಲಿನ್ನು ಕಾಡಲೆನ್ನಳವಲ್ಲ
ಬಲ್ಲಿದನಿಹಃಪಗೆಯನೋಸರಿಸುವವನಲ್ಲ
ನಲ್ಲೆಯಳಿಗಿಲ್ಲಿ ನಿಜರೂಪಮಂ ತೋರ್ಪೆನೆಂದಾನು ಸಂತಸದಿಂದಲೀ
ಸಲ್ಲಲಿತ ಪಂಚಮುಖ ದಶಭುಜಂಗಳು ತೋರ
ಲಲ್ಲಿ ಪತಿಹಿತೆ ಕಂಡು ಬೆರಗಾಗಿ ಭರದಿಂದೆ
ನಲ್ಲ ಬಾ ಬಾ ಎನ್ನ ವಲ್ಲಭನೆ ಬಾ ಬಾಯೆನುತ್ತಾತನಂ ಕರೆಕರೆವಳು ೪೭

ಕರಿಯಲಾವಂ ಮತ್ತೆಯಡಗಟ್ಟಿದನೆನುತ್ತೆ
ಭರದಿಂದಲಾತನೈತಂದು ಕಂಡಂ ಎನ್ನ
ಶಿರದ ಸುರನದಿಯಿಂದೆ ಕರಿಗೊರಳನಿಂದೆ ಮಿಂಚಿನ ಗೊಂಚಲಂದದೆಸೆವ
ಉರುಜಟಾಭಾರದಿಂದಸಿಫಳಕ ಶೂಲದಿಂ
ದಿರದೆ ದಶಭುಜ ಪಂಚಮುಖದಿಂದೆ ಪೆರೆಯಿಂದೆ
ವರಗಜಾಜಿನದಿಂದೆ ಪೊದೆದ ಪುಲಿದೊವಲಿಂದೆ ಮೆರೆವ ನಿಜರೂಪದಿರವಂ ೪೮

ನೆರೆಕಂಡಿಹಃಪಗೆಯನಸಿಫಳಕಮಂ ಬಿಸುಟು
ಹರುಷದಿಂದದರೊಡನೆ ಭವದುಃಖಮಂ ಬಿಸುಟು
ಸರಸದಿಂದೆನ್ನ ಮೆಲ್ಲಡಿಗಳಂ ಬಿಗಿದಪ್ಪಿ ಹರ್ಷಾಶ್ರುವಿಂದಪ್ಪುತೆ
ಗುರುದೇವ ನಿಮ್ಮನರುಹಿಸದೆ ಬಪ್ಪರೆ ತಂದೆ
ವರಭಕ್ತಿಯಿತ್ತೆನ್ನ ಮನವನೋಳ್ಪರೆ ತಂದೆ
ಧುರದಿ ನಿಂದೀಕ್ಷಿಸಲ್ಪಾದಂಗಳಕ್ಷಿಗಳ್ನೊಂದವೇ ತಂದೆಯೆಸಲು ೪೯

ಕಪಟವೇಷವನಾಂತು ಕಾರ್ಪಣ್ಯನುಡಿಗಳಿಂ
ಚಪಲಚಿತ್ತದಿ ಒರೆದು ಒರೆದುಂ ಪರೀಕ್ಷಿಸಿದ
ಅಪರಾಧವೆನ್ನದೈ ಮಗನೆ ಸೈರಿಪುದು ನೀನೆನುತವನ ತರ್ಕೈಸುತೆ
ಅಪರಿಮಿತ ಕಾರುಣ್ಯದಿಂದೆ ಮೈದಡವಿ ತ
ದ್ವಿಪುಲ ಭಕ್ತಿಸಲಿ ಮೂರ್ಧ್ನಾಘ್ರಾಣಮಂ ಪಡೆವು
ತುಪಮಿಸಲ್ಕರಿದಾದ ಸುಖದೊಳೋಲಾಡುತಿರುತಿರ್ದನಾಂ ಸೌಂದ್ರರೇಂದ್ರಾ ೫೦

ಅನಿತರೊಳಗಾಕಾಶದಿಂದೆ ಪೂಮಳೆ ಸುರಿದು
ದನಘ ನಂದೀಶ ವೀರೇಶ ಗಿರಿಜಾತೆ ಸಹ
ವಿನುತ ಗಣವರರೈದಿದರ್ಕನಕಮಯರನ್ನಮಯ ವಿಮಾನಂಗಳಿಂದೆ
ಅನುಪಮನಿಹಃಪಗೆಯನುಂ ಸತಿಯನುಂ ಮತ್ತ
ವನ ಕೈಯಲಳಿದ ಜನಮುಂ ಸಹಿತ ಪುಷ್ಪಕದೊ
ಳನುವಿನಿಂದಿಟ್ಟು ಕೈಲಾಸಕ್ಕೆ ಕೊಂಡೊಯ್ದು ಸಾಯುಜ್ಯಮುಮನಿತ್ತನು ೫೧

ಇದು ಕಾರಣದಿ ಕೇಳು ಮದ್ಭಕ್ತರೆಂಬುವ
ರ್ಸದಮಳ ಚರಿತ್ರರನಘರಜೇಯರನುಸೂಯ
ರುದಧಿ ಗಾಂಭೀರ್ಯರನುಪಮ ಶಾಂತಿಮಯರಪ್ರತರ್ಕ್ಯರುರುಶೌರ್ಯಯುತರು
ಮದನ ಮದಮರ್ದನರನಾಥರಕ್ಷಕರಹಿತ
ಕದನಕೋಲಾಹಲರಮಿತದಾತರತಿ ಭಕ್ತಿ
ಚದುರರೆನಗಧಿಕರಿವರಂ ಮತ್ತೆ ಮತ್ತೆ ಪೊಗಳುತ್ತಿರೈ ಸೌಂದರೇಂದ್ರಾ ೫೨

ಅಂತು ಸಂಧಿ ೫ ಕ್ಕಂ ಪದಗಳು ೨೮೯ ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

## ಸಂಧಿ : ೬

ಸೂಚನೆ :

ಇಳೆಯೊಳನುಪಮ ಭಕ್ತಿಭಾವದಿಂದೆಸೆದಿರ್ದ
ಇಳೆಯಾಂಡಗುಡಿಮಾರರಿತಿಹಾಸಮಂ ಕೇಳ್ದು
ಇಳೆಯಾಣ್ಮ ಸೌಂದರಾಧಿಪನತುಲ ಸಂತಸದೊಳೋಲಾಡುತಿರುತಿರ್ದನು

ಕೇಳೈ ಕುಮಾರ ಸೌಂದರ ವಿಸ್ತರಿಪೆನಿನ್ನು
ಚೋಳದೇಶದೊಳಗಿಳೆಯಾಂಡವೆಂದೆನುತಿರ್ಪ
ಪಾಳೆಯಂ ಪರಮ ಸೌಭಾಗ್ಯದಿಂದಿರಲದರೊಳಿರುತಿರ್ದನೊರ್ವ ಭಕ್ತಂ
ಪೇಳಲೇನಿಳೆಯಾಂಡಗುಡಿಮಾರನೆಂದಿಹ ವಿ
ಶಾಲನಾಮದಿ ಮೆರೆವುತಿರ್ದನೊಕ್ಕಲಮಗಂ
ಭೂಲೋಕದೊಳಗವನ ಭಕ್ತಿಗೆಣೆಯಿಲ್ಲ ಮತ್ತೊರೆವೆನಾಲಿಸು ಭೂವರ ೧

ಸನ್ನುತಿಪ ಸಮಚಿತ್ತವೆಂಬ ಭೂಮಿಯ ಮಾಡಿ
ನನ್ನಿಯಿಂದೆನ್ನ ನೆನಹೆಂಬ ನೇಗಿಲ ಮಾಡಿ
ಗನ್ನಹಂಕಾರಮುಮನಿರದಚ್ಚು೧[ವಂ]೧ ಮಾಡಿ ಒಂದೊಂದನನುಗೊಳಿಸುತೆ
ಭಿನ್ನಿಸದಲಿರುವ ಮನವಂ ರಜ್ಜುವಂ ಮಾಡಿ
ಇನ್ನಿದಕ್ಕರಿವರ್ಗವೆನಿಸುವೆತ್ತಂ ಹೂಡು
ತೆನ್ನ ನಿಷ್ಠೆಯನು ತಳೆವರಿವ ಬೀಜಂ ಮಾಡಿ ತದ್ಭೂಮಿಯೊಳು ಬಿತ್ತುತೆ ೨

ಸುರುಚಿರ ಶಿವಜ್ಞಾನ ಶಶಿಕರಂ ಸೋಂಕುತಿರೆ
ಸರಸ ಪರಮಾನಂದ ರಸದ ಮಳೆ ಕೊಳುತಮಿರೆ
ಉರುತರ ಕ್ಷುತ್ಪಿಪಾಸಾದಿ ಕಳೆಯಂ ಕಳೆದು ಸದ್ಭಕ್ತಿ ಸಸಿಯ ಬೆಳಿಸಿ
ನೆರೆ ತನ್ನೊಳಿಂತು ಭಕ್ತ್ಯಾರಂಭವಂ ಮಾಳ್ಪ
ಹೊರಗೆಲ್ಲರರಿವಂತೆ ಕೃಷಿಗಳಂ ಮಾಡುತ್ತ
ಲಿರುತಿರ್ದನತಿಭಕ್ತಿಸಸಿಯ ಬೆಳೆಸಿರಿವಂತ ಕರೆದೀವ ಮತಿವಂತನು ೩

ಎನಿತು ಭಕ್ತರ್ಬಂದಡನಿತು ಹೊರೆಯೇರುತಂ
ಮನದೊಳಗೆ ಹೆಚ್ಚಿ ಕಿಂಕರತೆಯಂ ತೋರುತಂ
ಎನಿತು ಭೂಮಿಯನು ತನಗುಂಟದರ ಬೆಳಸನುಂ ಶರಣ ಸಂತತಿಗೀವುತೇ
ತನಗೆ ಸೊಗಸೆನಿಸಿರ್ದುದಂ ನವ್ಯಮಾದುದಂ
ವಿನುತ ಮಾನ್ಯಂಗಳೇನಿರ್ದವೆಲ್ಲಂ ಶರಣ
ಜನರಿಗಿತ್ತುಂ ಬಿಟ್ಟು ಬೆಳಸುಂಗಳಂ ಭಕ್ತರಿಗೆ ಮಾಡುತಂ ನೀಡುತಂ ೪

ಇಂತು ಜಂಗಮಕೆ ಮಾಳ್ಪುದು ಕರಂ ಪಿರಿದಾಗೆ
ಸಂತತಂ ಭಕ್ತಕುಲ ಬರುವುದುಂ ಪಿರಿದಾಗೆ
ಸಂತಸದಿ ಕೊಡುತಲಿರೆ ತನ್ನರ್ಥವೆಲ್ಲಮುಂ ತೀರಿತಿನ್ನೇವೇಳ್ವೆನು
ಅಂತಾಗಲಾ ಶರಣನಾಳೋಚಿಸದೆ ಕೃಷಿಗ
ಳಂ ತೋಟವಂ ಮಾರಿಕೊಡುತಿರಲ್ಕದು ತೀರ
ಲುಂ ತನ್ನ ಮನೆಯೊಳರ್ಥಂ ಮಾರುತಿತ್ತನುಳಿದರ್ಥಮಂ ಮಾರುತಿತ್ತಂ ೫

---

೧ ಳಂ (ಹ, ಜ)   ೨ + ನ (ಹ, ಜ)

ಮತ್ತೆ ಶರಣರ್ಬಂದಡುಟ್ಟುದಂ ಪೊದೆದುದಂ
ತಿತ್ತು ಸತಿಗೊಂದು ಕಪ್ಪಡಮುಳಿಯೆ ತನಗೊಂದ
ನುತ್ತಮ ತನುಜಗೊಂದು ಕೋವಣಂಗಳನಾಂತು ಮುವ್ವರಿರುವನಿತೆ ಮನೆಯೊಳ್
ಸತ್ಯಶರಣರ್ಬರಲು ಮಾಡುವಂ ನೀಡುವವ
ನತ್ಯಧಿಕತನವನೇನೆಂಬೆ ಧನ ಕಿರಿದಾಯ್ತು
ಅತ್ತ ಶರಣರ್ಗೆ ನೀಡುವೆನೆಂಬ ಮನವು ಪಿರಿದಾದುದಿನ್ನೇನುಸುರ್ವೆನು ೭

ಧನಮಿಲ್ಲದಿರ್ದಡೇಂ ಧಾನ್ಯಮಿಲ್ಲದೊಡೇನು
ಮನೆಯಿಲ್ಲದಿರ್ದಡೇಂ ಏನಿಲ್ಲದಿರ್ದಡೇಂ
ತನುವಿರ್ದಪುದು ತನುವಿನೊಳಗರ್ಥಮಂ ಕೊಡುವೆ ಕೊಡುವೆನೆಂದೆಂಬ ನಿಜದ
ಮನವಿರ್ದಪುದು ಮನದೊಳರ್ಥಮಂ ಕೊಡುವೆನೀ
ಮಿನುಗುತಿಹ ಕಣ್ಗಳೆರಡುಂಟದರೊಳೊಂದೀವೆ
ಘನವೆನಿಪ ಹರಣಮುಂಟದರೊಳರ್ಥಂ ಶರಣತತಿಗೀವೆನೆನುತಿರ್ದನು ೭

ವರಭಕ್ತಿಯಿಂದಲೀತೆರದಿ ತೊಂಬತ್ತೈದು
ಬರಿಸಮಿರಲವನಂ ಪರೀಕ್ಷಿಸುತೆ ಕೈಲಾಸ
ಗಿರಿಗೆ ಕೊಂಡೊಯ್ವೆನೆನುತಿಳೆಗೆ ಪೊಸತೆನಿಪ ಶತವೃದ್ಧ ಭಾವವನೆ ತಳೆದು
ಶಿರದ ಸರೆ ಮೆಯ್ಯತೆರೆ ಕೈಯ ಕೋಲಿಂದವನಿ
ಗಿರದೆ ಬಾಗಿದ ಬೆನ್ನು ಜೋಲ್ದ ಸೆವ ಪುರ್ಬಿನಿಂ
ಚರವೇಷವಾಂತು ಚೋಳಾವನಿಯ ಪ್ರಾಂತಕ್ಕೆ ನಾಂ ತಳುಹದೈತಂದೆನು ೮

ಇಳೆಯಾಂಡಮೆಂಬ ಪುರಕೈತರಲ್ಕನಿತರೊಳ್
ಜಳದ ಜಾಳಂಗಳೊತ್ತರಿಸಿ ಮುತ್ತಿತು ನಭ
ಸ್ಥಳದಿ ಮುಸುಕಿದ ಮರ್ಬನೇನೆಂಬೆ ಕಜ್ಜಳದ ಕಪ್ಪನಳಿಗಳೊಳೊಪ್ಪುವಾ
ಮಲಿನವಂ ಮಧುರಿಪುವಿನ ಸುನೀಲಮ್ಮೃದೆ ಕೋ
ಕಿಲಗಳೊಳಗೊಪ್ಪಿರುತ್ತಿರುತಿಪ್ಪಸಿತವೆಮುನೆ
ಯೊಳಗಿರ್ಪ[೧] ಕರಿಯನಂಜನಗಿರಿಯೊಳಿಹ ಕೃಷ್ಣರುಚಿಗಳೊಳಕೊಂಡೊಲಾಯ್ತು ೯

---

೧ ಗ (ಹ)   ೨ ರ್ದ (ಹ)

ಇನಿತು ಮೇಘಾಡಂಬರಂ ಕವಿಯಲಲದರೊಳಗೆ
ಘನ ನಿನಾದಂ ಪೊಣ್ಮೆ ಮಿಂಚು ಮಳೆಗಾಳಿಯದು
ವನಜೋದ್ಭವಾಂಡಮಂ ತುಂಬಲೆಲ್ಲಿಯು ನೋಡಲಲ್ಲಿ ಜಲಮಯವಾದುದು
ನೆನೆದುದಾಗಸಮೆಂಬೊಲಾಯ್ತು ದೆಸೆಗಳ್ಮುಸುಡ
ಮಿನಿತೆಂದು ತಿಳಿವಡರಿಯದೊಲಾಯ್ತು ರಜನಿ ಮ
ತ್ತನಿತೆನಿತು ಘಳಿಗಿಗನಿತನಿತು ಮರ್ಬಂ ಮುಚ್ಚಿತೇನೆಂಬೆನೈ ಸೌಂದರಾ ೧೦

ಇಂತಿಡಿದ ಕತ್ತಲೆಯೊಳಾಪೂರ ನಾಂ ಪೊಕ್ಕು
ತುಂತುರ್ವನಿಗಳೊಳಗೆ ನಡುಗುತ್ತ ತತ್ತರಿಸು
ತಂತರಿಸದಿಳೆಯಾಂಡಗುಡಿಮಾರನವರ ಮನೆಗೈತಂದು ಮುಂದೆ ನಿಂದು
ಚಿಂತೆಗೈವುತ್ತೆ ಕಡುಶೀತದಿಂ ಬಳುಕುತಾಂ
ನಿಂತಿರಲ್ಕಾ ಶರಣನೊಳಗೆ ಚಳಿಹತ್ತದ
ತ್ಯಂತ ಸುಖದಿಂದಿರ್ದನಾತಗಿರುತಿರ್ದ ಸುಖವೇನೆಂದು ಬಣ್ಣಿಸುವೆನು ೧೧

ಹಾಸಲುಂ ಹೊದೆಯಲುಂ ಎನ್ನ ನಾಮವೆಯುವರ್ಗೆ
ಆಸುರದ ಚಳಿಗೆ ಮರೆಯೆನ್ನ ನಾಮವೆಯುವರ್ಗೆ
ಲೇಸೆನಿಸುವೆನ್ನ ನೆನಹಿಂದಿರ್ದ ಕಾರಣದಿ ವ್ಯಸನವವರಿಗೆ ಹೊದ್ದದು
ಆ ಸುಪ್ರಸಾದ ದೊರೆಯದೆ ಮೂರು ದಿವಸದುಪ
ವಾಸದಿಂದವರಿರ್ದರಾ ವೇಳೆಯೊಳು ಪೋಗಿ
ಭಾಸುರಧ್ವನಿಯಿಂದೆ ಶಿವಶಿವ ನಮಶ್ಶಿವಾಯಾ ಎಂದು ನಾಂ ನುಡಿದೆನು ೧೨

ದನಿಗೇಳುತಿಳೆಯಾಂಡಗುಡಿಮಾರನೊಲವಿಂದೆ
ಅನಘರೆನ್ನಾಳ್ದರು ಬಳಲ್ದ ಸರವಾಯಿತೆನುತೆ
ಘನವಾದ ಕತ್ತಲೆಯೊಳೈತಪ್ಪರೇ ದೇವ ಎನುತೆ ಕದವಂ ತೆರೆವುತೇ
ವಿನುತ ಭಕ್ತಿಯೊಳು ಬಂದೆರಗುತ್ತೆ ಮರುಗುತ್ತೆ
ಇನಿತು ಮಳೆಯೊಳಗೆ ಚಳಿಯೊಳಗೆ ಬಂದಿರೆ ದೇವ
ಎನಿತುಸುರ್ವನೆನ್ನ ಪುಣ್ಯದ ಫಲವನೆನುತಾತ ಮನೆಯೊಳಗೆ ಕರೆದೊಯ್ದನು ೧೩

ಎಲೆ ಮಗನೆ ನಿಲಲಾರೆ ಚಳಿಯಿಂದೆ ಮಳೆಯಿಂದೆ
ಹಲುಗಳ್ಗಡಚುಗೊಂಡುವಿರದೆ ಕೈಕಾಲುಗ
ಳ್ಸಲೆ ಸೆಡೆದುವುಬ್ಬಸಂ ಪಿರಿದಾಯ್ತು ಹರಣಕ್ಕೆನಲ್ಕಾತ ಭಯಗೊಳುತ್ತೆ
ತಳುಹವಲೆ ತನ್ನ ಸತಿ ಸುತರಿರ್ಪ ಮಾಳಿಗೆಗ
ಳೊಳಗಿರ್ದ ಜಂತೆಗಳನುಚ್ಚುತುರಿಯಂ ಮಾಡಿ
ಒಲವಿಂದಲೆನ್ನವಯವಂಗಳಂ ಕಾಸಿದರದೇನೆಂಬೆನೈ ಸೌಂದರಾ ೧೪

ತೊಡೆಗಳಂ ತೋಳ್ಗಳಂ ಚರಣದ್ವಯಂಗಳಂ
ನಡು ಬೆನ್ನನುರುವದನಮಂ ಪೊಡೆಯನಾ ಮುವ್ವ
ರೆಡೆವಿಡದೆ ಕಾಸಿದರ್ಲೇಸಾಗುವಂತೆ ಮೆಲ್ಲನೆ ತನುವನೊತ್ತುತಿರಲು
ದೃಢಭಕ್ತಿಯಂ ಕಂಡು ಮನದೊಳಗೆ ಕೌತುಕಂ
ಬಡುತಲಿರೆಯೆನಿತೆನಿತು ಚಳಿಹೋಗಲನಿತು ಹಸಿ
ವಡಸಿ ಹಸಿದೆಂ ಮಗನೆ ಹಸಿದೆನೆನಲಿಳೆಯಾಂಡಗುಡಿಮಾರರುಂ ಕೇಳುತಾ ೧೫

ಎಂತೆಂದು ತಮ್ಮರಸಿಯರ ಮೊಗಂ ನೋಡುತಿರೆ
ಚಿಂತಿಸಿದಳೊಂದು ತೆರಸಂ ನಾನು ಮೆಚ್ಚುತಿರೆ
ಎಂತಿರ್ದಡಂ ಮೊನ್ನೆ ಬಿತ್ತಿರ್ದ ಮೊಳೆವಿತ್ತನೊಂದೊಂದನೆತ್ತಿತಂದು
ಅಂತಕಾಂತಕರೂಪಗಾದ ಕ್ಷುಧೆಯಂ ಕಳೆದು
ಸಂತಸಂ ಮಾಳ್ಪುದೆಂದವಳರುಪಲಾತನ
ತ್ಯಂತ ಹರುಷಂ ತಾಳ್ದು ಪೊರಮಟ್ಟನಲ್ಲಿ ಮಧ್ಯಮರಾತ್ರಿಯೊಳಗೊರ್ವನೆ ೧೬

ಮತ್ತೆ ಮಳೆ ಪಿರಿದಾಗೆ ಮತ್ತೆ ಚಳಿ ಘನವಾಗೆ
ಮತ್ತೆ ಕತ್ತಲು ಸುತ್ತಿಸುತ್ತಿ ಉನ್ನತವಾಗ
ಲಿತ್ತತ್ತ ನೋಡದಪ್ರತಿಮ ಗುಡಿಮಾರನೈತರುತಿರ್ದನುರವಣಿಸುತೆ
ಪತ್ತನಂ ದಾಂಟಿ ಹೊಲನಂ ದಾಂಟಿ ಹಳ್ಳಂಗ
ಳೊತ್ತಾಯದಿಂ ದಾಂಟಿ ಕೆರೆಗಳಂ ಕೊಳ್ಳಗಳ
ನುತ್ತರಿಸಿ ಹೋಗಿ ಗದ್ದೆಯೊಳರ್ದ ಮೊಳೆವಿತ್ತನೆತ್ತಿ ಗೂಡೆಯೊಳಿಕ್ಕಿದಂ ೧೭

ತಿರುಗಿ ಬರುತಿರ್ದಂ ಹರಂ ಹಸಿದನೆಂದೆನುತೆ
ಉರವಣಿಸಿ ಬರುತಂ ಬಳಲ್ದನೀಶ್ವರನೆನುತೆ
ಭರದಿಂದೆ ಬಂದು ತಮ್ಮರಸಿಯರ ಮುಂದೆ ಗೂಡೆಯನಿಳುಪಲವರು ನಲಿಯೆ
ತ್ವರಿತದಿಂ ತಂದ ಮೊಳೆವಿತ್ತನಾನಂದದಿಂ
ಹುರಿದಮೃತಮಯವೆನಿಸುತಿಹ ಓಗರಂ ಗೈದು
ಸರಸದಾರೋಗಣೆಗೆ ಕದಳೀದಳಂಗಳಂ ತರಲು ಸುತನಂ ಕಳುಹಿದರ್ ೧೮

ಅವನೆಲೆಗಳಂ ಕೊಯ್ಯುತಿರಲು ಸರ್ಪಂ ಕಚ್ಚಿ
ಭುವನದೊಳಗೊರಗುತಸುವಳಿಯೆ ತಡವಾಯಿತೆಂದು
ತವೆ ಶರಣನೈತಂದು ಕಂಡನಳಿದಣುಗನಂ ಇದನುಸುರಬಾರದೆಂದಂ
ಇವನಳಿದನೆಂದುಸುರಿದಡೆ ಕೇಳುತುಣ್ಣನಾ
ಶಿವನೆನುತ್ತರಿದೆಲೆಗಳಂ ಕೊಯ್ದು ತಂದನಿ
ನ್ನವನ ಭಕ್ತಿಯನೇನುಸುರ್ವೆನೆಲೆಗಳ ಪಾಸುತೆಡೆಮಾಡುತಿರ್ದನೆನಗೆ ೧೯

ಸಾರಾಮೃತಕ್ಕೆ ಸರಿಯೆನಿಪನ್ನವೆಡೆಮಾಡಿ
ಆರೋಗಿಸೈ ಸದಾಶಿವ ಕರುಣದಿಂದೆನುತೆ
ಹಾರೈಸುತಂ ಶಂಭುವೇ ಕರುಣಿಸೆಂದೆನುತ್ತಿಳೆಯಾಂಡಗುಡಿಮಾರರು
ಪೂರೈಸಿದುರು ಭಕ್ತಿಭಾವದಿಂ ಶರಣನೆ
ಲ್ಲಾರೋಗಿಸಲ್ಬಾರದೊರ್ವರುಂ ನಿನ್ನಯ ಕು
ಮಾರನುಂ ನೀನಿರ್ವರುಂವೆರಸಿ ಕುಳ್ಳಿರ್ಪುದೆನಲಾತ ಚಿಂತಿಸಿದನು ೨೦

ಮಗನಿಲ್ಲದುದನರುಪಬಾರದಿದನೇಂಗೈವೆ
ಮಗನಿಲ್ಲದಿರ್ದಡುಣಲೊಲ್ಲ ಮತ್ತೇಂ ಗೈವೆ
ಅಘಹರ ಮಹಾದೇವನುಣಲೊಲ್ಲನಿನ್ನೆಂತು ಗೈವೆನೇನಾದೊಡೇನು
ಮಗನಂ ಕರೆದುನೋಳ್ಪೆನವಬಾರದಿರ್ದಡೀ
ಸೊಗಸಾದ ಶಿರವೀವೆನುಣ್ಣದ ಮಹೇಶಂಗೆ
ಮಿಗೆ ಚಿಂತೆಯೇತಕೆನುತಾತನೈತಂದು ಸುತನಂ ಕರೆದನಲ್ಲಿ ನಿಂದು ೨೧

---

೧ ಮೆ (ಹ) ೨ ಮೆ (ಹ)

ಬಾ ಮಗನೆ ಮನೆಯೊಳು ಮಹಾದೇವ ನುಣ್ಣದಲೆ
ಪ್ರೇಮದಿಂ ಕುಳಿತಿರ್ಪ ನಿನ್ನ ಸಹಪಜ್ಕ್ತಿಯಿಂ
ದಾ ಮಹಿಮನುಣುವನೆನುತಿಹ ತಳುಹಮಾಡದೇಳೈ ಮಗನೆ ಏಳೆನಲ್ಕೀ
ಆ ಮಹಾನಿದ್ರೆ ತಿಳಿದವರೇಳುವಂತೆದ್ದ
ನಾ ವೋಹದಣುಗನವನಂ ಕೂಡಿಕೊಂಡು ಸ
ತ್ಪ್ರೇಮದಿಂ ಧಾಮಕ್ಕೈತರಲು ದಶಭುಜ ಪಂಚಮುಖದಿಂದಲೆಸೆದಿರ್ದನು ೨೨

ನೆರೆ ಕಾಣುತಿಳೆಯಾಂಡಗುಡಿಮಾರರೈತಂದು
ಚರಣದೊಳು ಬಿದ್ದು ಪೊಗಳುತ್ತೆ ಪುಳಕಿಸುತಂದು
ವರಜರಾಜೀರ್ಣ ವೇಷವನು ಕೈಕೊಂಡು ಮಳೆಚಳಿಯೆನ್ನದೆನ್ನ ಬಳಿಗೆ
ಕರುಣಿಸಿದೆ ದೇವ ಕರುಣೆಗಳರಸ ಗಿರಿಜೇಶ
ಪರಮ ಕೃಪಾಬ್ಧಿ ಪರಮೇಶ್ವರ ಮಹಾದೇವ
ಹರಹರ ಮಹಾದೇವ ಶಿವ ಶಿವ ಮಹಾದೇವ ಎನುತೆನ್ನನುಂ ಪೊಗಳ್ದನು ೨೩

ಆ ವೇಳೆಯೊಳು ರಜತಗಿರಿಯಿಂದೆ ಗಣಕುಲ ಮ
ಹಾವಿಭವದಿಂ ಪುಷ್ಪಕಂಗಳಂ ಕೊಂಡುಬರ
ಲಾ ವಿನುತ ಶರಣನಾದಿಳೆಯಾಂಡಗುಡಿಮಾರನಂ ಸತಿಯನುಂ ತನಯನುಂ
ಕೇವಲಾನಂದದಿ ವಿಮಾನಂಗಳೊಳಗಿರಿಸಿ
ದೇವತತಿ ಸುರಿವ ಪೂಮಳೆಯೊಳಗೆ ಕೈಲಾಸ
ಕಾ ವಿಮಲ ಚರಿತರಂ ಕೊಂಡೊಯ್ದುವತಲ್ಲಿ ಸಾಯುಜ್ಯಮುಮನಿತ್ತೆ ಕೇಳ್ದಾಧ್ಯ ೨೪

ಒಗುಮಿಗೆಯ ಮಳೆಚಳಿಯೊಳಿಂತು ಪೋದವರುಂಟೆ
ಮಗನ ಸಾವಂ ನೋಡುತುಣಲಿಕ್ಕಿದವರುಂಟೆ
ಜಗದೊಳಗೆ ನಿರ್ದಂಭರೆನಿತಿರ್ದಡಿಂತುಂಟೆ ಸತಿಸುತರ್ಮೊದಲುಗೊಂಡು
ಮಿಗೆಭಕ್ತಿಯುತರು ಮಾನಿತರು ಮಹಿಮಾನ್ವಿತರು
ಅಘರಹಿತರುರುದಯಾಪರರಿವರನುಂ ಮತ್ತೆ
ಸೊಗಸಿನಿಂ ನೆನೆ ನುತಿಸು ಕೊಂಡಾಡು ಮಗುಳೆ ಪೊಗಳುತ್ತಿರೈ ಸೌಂದರೇಂದ್ರಾ ೨೫

ಅಂತು ಸಂಧಿ ೬ ಕ್ಕಂ ಪದಗಳು ೨೩೪ ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

## ಸಂಧಿ : ೭

**ಸೂಚನೆ :**

ಚರವೇಷಮಂ ಧರಿಸಿ ಬಂದ ದಾಯಾದನಿಂ
ದುರುಗಾಯಮಂ ತಾಳ್ದು ಮತ್ತವನ ಸಂತೈಸಿ
ಹರನೊಲುಮೆಯಂ ಪಡೆದ ಸೇದಿರಾಜಯ್ಯನಿತಿಹಾಸಮಂ ನಂಬಿ ಕೇಳ್ದಂ

ಮತ್ತೊರೆವೆನಿದನಾಲಿಸೆಲೆ ಸೌಂದರೇಂದ್ರ ಭೂ
ಪೋತ್ತಮನೆ ಚೋಳದೇಶದೊಳು ತಿರುನಾವಲೂ
ರತ್ಯಧಿಕ ಸಂಪದದ ಪೆಂಪಿಂದಲೊಪ್ಪುತಿರಲಾ ಪುರಕ್ಕಧಿಪನೆನಿಸಿ
ಸತ್ಯಗುಣಿಯೆನಿಸಿ ಸದ್ಭಕ್ತಿಭೂಷಣನೆನಿಸಿ
ಚಿತ್ತಜನ ಸಮರೂಪವೆನಿಸಿ ಶಿವಸುಖಿಯೆನಿಸು
ತುತ್ತಮಂ ಸೇದಿರಾಜಯ್ಯನೆಂಬಭಿಧಾನದಿಂದಾತನೆಸೆದಿರ್ದನು ೧

ಆಯತದಿ ಮಾಳ್ಪ ನಿಜಭಕ್ತಿಗಡ್ಡಂ ಬರ್ಪ
ಮಾಯೆಯನು ಮುರಿದು ದುರಿತಂಗಳಂ ಸುಟ್ಟು ದಶ
ವಾಯುಗಳ ಬಿಡದೊತ್ತಿಕಟ್ಟಿ ಮೆಟ್ಟುತ್ತಾಗ ಒಳಗಣರಿವರ್ಗಂಗಳಂ
ನ್ಯಾಯದಿಂ ಸೋಲಿಸುತ ತಾಪತ್ರಯಂಗಳಂ
ಬಾಯ ಮೇಲ್ಪೊಯ್ದು ಹರಿವಿಂದ್ರಿಯಂಗಳಿಗೆ ಪೂ
ರಾಯ ಗಾಯಂಗೈದು ವ್ಯಸನಂಗಳಂ ಬೇಂಟೆಯಾಡುತ್ತ ಕೊಲ್ಲುತಿರ್ದಂ ೨

ಒಲವಿಂ ವಿವೇಕ ಪ್ರಧಾನಿಯಂ ನಚ್ಚಿಪ್ಪ
ನಲಘು ಬುದ್ಧಿಯೆನಿಪ್ಪ ಮಿತ್ರನಂ ಮಚ್ಚಿಪ್ಪ
ಸುಲಲಿತ ನಿಜಜ್ಞಾನಮೆಂಬಾತ್ಮಜನು ತನ್ನನೊಲಿಸುವಿಚ್ಛೆಯೊಳಿರ್ದನು
ಚೆಲುವ ಭಕ್ತ್ಯಂಗನೆಗೆ ತಾನು ಮಚ್ಚಿರುತಿಪ್ಪ
ನಿಳೆಯಾಣ್ಮರಾದ ಚೋಳಾದಿಗಳ್ಬರವಡೆಯು
ನಲಿವು ಮಿಗಿಲಿವನ ಸಮಯವನರಿದು ಬಪ್ಪರಿವನಪ್ರತಿಮನೆನುತೆರಗುವರ್ ೩

ಎರಗುವಂ ತಾನೆನ್ನ ಭಕ್ತರ್ಗಂನಾಥರ್ಗೆಂ
ಮರುಗುವಂ ಬೇಡಿದಿಷ್ಟವನಿತ್ತು ಕಲುಹೃದಯು
ಕರಗುವಂತೊಲಿದು ಮಾತಾಡುವಂ ಶಿವಭಕ್ತರೆನ್ನೊಡೆಯರೆನುತಿರುವನು
ಹರನ ಭಕ್ತರ್ಬರವೆ ತನ್ನ ಸಿರಿಯೆನುತಿಪ್ಪ
ಹರನ ಭಕ್ತರ್ಬರವೆ ತನ್ನಾಯುವೆನುತಿರ್ಪ
ಹರನ ಭಕ್ತರ್ನುಡಿದುದೇ ತನಗೆ ಶಿವಶಾಸನಮಿದೆಂದು ನುಡಿವುತಿರ್ದಂ ೪

ತಾ ನುಡಿವುದೆಲ್ಲ ಭಕ್ತರ ೧ಬೀಳ್ನುಡಿಯು೧ ಮತ್ತೆ
ತಾನುಂಬುದೆಲ್ಲ ಭಕ್ತ ಪ್ರಸಾದಂ ತಿಳಿಯೆ
ತಾನಧಿಪನೆನಿಸಿ ತನ್ನಾಣೆಯೆಂಬುವುದಿಲ್ಲ ಭಕ್ತರಾಣೆಯೆ ಶಾಸನಂ
ಕ್ಷೋಣಿ ಭಕ್ತರದು ತೇಜಂ ಭಕ್ತರದು ನೋಡೆ
ಆನೆ ಕುದುರೆಗಳು ಭಂಡಾರವದು ಭಕ್ತರದು
ಯೇನಿರ್ದುದೆಲ್ಲ ತನ್ನರಸುತನವೆಲ್ಲ ಭಕ್ತರದೆಂದು ಭಾವಿಸಿರ್ದಂ ೫

---

೧ X (ಹ) ಬೀಳುನುಡಿ (ಹ)

ಇಂತು ಸದ್ಭಕ್ತಿ ಪ್ರಸಿದ್ಧಮಾಗಿರೆ ತನಗೆ
ಸಂತತಂ ಸೇದಿರಾಜಂ ಸುಖದೊಳಿರುತಿರಲು
ಪಿಂತೆ ದಾಯಾದನೊರ್ವಂ ದೂರದೇಶದೊಳು ಪರನೃಪ ನಿವಾಸದಲ್ಲಿ
ಚಿಂತಿಸುತ್ತಿರ್ದವರ ಬಲದಿಂದೆ ರಥಹಯಂ
ದಂತಿ ಮೊದಲಾದಮಿತಬಲವೆರಸಿ ಬಂದು ಭೂ
ಕಾಂತನಹ ಸೇದಿರಾಜಯ್ಯನೊಳು ಕಾದಿ ಗೆಲಲರಿಯದವ ಸೋತೋಡಿದಂ ೬

ತನಗಾದ ಭಂಗಮಂ ನೆನೆದವಂ ಚಿಂತಿಸಿದ
ನನುವಾವುದೆನ್ನ ಪಗೆಯಂ ಗೆಲುವುದಕ್ಕೆಂದು
ಮನದೊಳಗೆ ಯೋಚಿಸಿದನೊಂದು ಪಾಪದ ಕಾರ್ಯಮಂ ಪರಮ ಪಾಪಿಷ್ಠನು
ಎನಿತಾದಡೇನು ಸಾಮಾದ್ಯುಪಾಯಂಗಳೊಳ
ಗನುಕೂಲಮಾದೊಂದುಪಾಯಮಂಗೈದೆಮ್ಮ
ವನ ಕೊಲುವೆನೆಂದು ಕಾಪಟ್ಯದಿಂ ಚರವೇಷಮಂ ಧರಿಸಲುಜ್ಜುಗಿಸಿದಂ ೭

ಕರಗಳ ಹೊರಗೆ ಮೆರೆವ ರುದ್ರಾಕ್ಷಿಯಂ ಸೂಡಿ
ಶರಿರ ಕಂಠದಲಿಹ ವಿಭೂತಿಯೊಪ್ಪಂ ಮಾಡಿ
ಬರಿಯ ಮಾಟದ ಜಡೆಯನಿಕ್ಕಿ ಪುಲಿದೊವಲುಟ್ಟು [೧]ನೋಟಕ ಜನಕ್ಕೆ[೧] ನಿಜದಾ
ಚರವೇಷವೆನಿಸುವಂತಳವಟ್ಟು ಕವಳಿಗೆಯೊ
ಳಿರದೆ ಘುಳುಘುಳಿಪಲಗನೊಳಗಿಟ್ಟು ಧರಿಸುತ್ತ
ಹೊರಗೆ ಬೆಬ್ಬನೆ ಬೆರೆತು ಹೃದಯದೊಳು ಕೊಲೆಯ ಕುಡಿ ಹಬ್ಬಿರ್ದುದೇವೇಳ್ವೆನು ೮

ಹೊರಗೆ ಮೆರೆದುದು ವೇಷ ಒಳಗೆ ಬೆಳೆದುದು ರೋಷ
ಹೊರಗಿಹುದು ಸಂನ್ಯಾಸ ಒಳಗೆ ಕೊಲೆಯ ವಿಲಾಸ
ಹೊರಗಿಲ್ಲದಿಹ ಸಕುತಿ ಒಳಗೆ ಕೊಲ್ಲುವ ಯುಕುತಿ ಹೊರಸೂಸುತಿಪ್ಪ ಭಕುತೀ
ಹೊರಗೆ ಕಾರುಣ್ಯರಸ ಒಳಗಿತ್ತು ವೀರರಸ
ಹೊರಗೆ ಪುಣ್ಯದ ಬಟ್ಟೆ ಒಳಗೆ ಪಾಪದ ಮೊಟ್ಟೆ
ಯರರೆ ಇನಿತಿಪ್ಪ ವೇಷವ ಧರಿಸಿ ಚರಿಸುತ್ತೆ ಚೋಳದೇಶಂ ಪೊಕ್ಕನು ೯

---

೧ ನೋಟಕ್ಕೆ ಜನಕ (ಹ)

ತಡೆಯುದಲ್ಲಿಂ ಸೇದಿರಾಜನೂರಂ ಪೊಕ್ಕು
ಒಡನೆ ಬೀದಿಗಳನೀಕ್ಷಿಸುತೆ ಮೆಲ್ಲನೆ ಬಂದು
ಪೊಡವಿಪತಿಯುರಮನೆಯ ಬಾಗಿಲುಗಳಂ ಮೀರಿ ನಡೆತಂದು ಒಳಪೊಕ್ಕನು
ಜಡೆಕುಂಡಲಂಗಳಿಂ ಮೆಯ್ಯೊಳಿಹ ಭಸಿತದಿಂ
ಪಿಡಿದ ಕವಳಿಗೆಯುಟ್ಟ ಪುಲಿದೊವಲಿನಿಂ ಮತ್ತೆ
ಕಡುರಮ್ಯವಾದವನ ವೇಷಮಂ ಸೇದಿರಾಜಂ ಕಾಣುತಿದಿರೆದ್ದನು ೧೦

ಭಯಭರಿತ ಭಕ್ತಿಯಿಂದೈತಂದು ನಮಿಸುತ ವಿ
ನಯಪೂರ್ವಕದಿ ೧ಪಾದಪ್ರಕ್ಷಾಳನಂ೨ಗೈದು
ಪ್ರಿಯದಿ ಪಾದೋದಕವನುಂ ಮಸ್ತಕದಿ ತಾಳ್ದು ಸಿಂಹಾಸನವನೀವುತೆ
ಜಯತೆಂದು ನುತಿಸುತಾನಂ೩ದಾ೪ಶ್ರು೫ವಿಳಿವುತಂ
ದಯವೆನ್ನ ಮೇಲಾದುದಂ ಬೆಸಸು ದೇವ ನಿ
ಮ್ಮಯ ಕಾಂಕ್ಷೆಯುಳ್ಳತೆರನನುಕೂಲಿಸಿರ್ಪೆ ನಾನೆನುತೀತ ಕೈಮುಗಿದನು ೧೧

ಎಲೆ ರಾಯ ಕೇಳು ನಿನಗೊಳ್ಳಿತಂ ತಂದೆವಾ
ವಿಳೆಯೊಳಗೆ ಮುನ್ನಾವ ಕವಿಗಳಿದನಂ ಕೇಳಿ
ಬಳಸಿದಾಗಮವಲ್ಲವಿನ್ನೂರ್ವ ಹಿರಿಯರ್ಗೆ ಮರೆದು ಮಾಡುವುದಿದಲ್ಲ
ಚೆಲುವೆನಿಪಪೂರ್ವವೆಂದೆನಿಪ ಶೈವಾಗಮಂ
ಸಲೆ ಶಿವಂ ಪುಳಕಿಸುತೆ ಕೇಳ್ವ ದಿವ್ಯಾಗಮಂ
ತಳೆದಿ೬ರ್ಪೆ೭ವಿದೆ ಕವಳಿಗೆಯೊಳಿದಂ ನೆರೆ ಕೇಳ್ವುದತಿ ರಹಸ್ಯದೊಳೆಂದನು ೧೨

ಎನೆ ಕೇಳ್ದು ಸೇದಿರಾಜಂ ಹರ್ಷಮಂ ತಾಳ್ದು
ಮನವೊಸೆದು ನೀವೆಂದ ತೆರನ ಮಾಳ್ಪೆನು ದೇವ
ಎನಗದಂ ಕರುಣಿಸುವುದೆಂದು ಶೈವಾಗಮಂಗಳ ಗೋಷ್ಠಿಯೊಳಗಿರುತಿರೆ
ಅನಘ ಭಕ್ತರ ಚರಿತ್ರ ಪ್ರಸಂಗದೊಳಿರಲು
ಘನಭಕ್ತ ಸೇದಿರಾಜನನಿರಿವ೮ನೀ೯ದ್ರೋಹ
ವನು ನೋಳ್ಪುದನುಚಿತಮಿದೆಂದರಿದು ಪೋದಂತೆ ರವಿಯಸ್ತಗಿರಿಗಿಳಿದನು ೧೩

---

೧ ಪಾ (ಹ) ೨ ದ (ಹ) ೩ ವ (ಹ) ೪ ವೆಂದೆ (ಹ) ೫ ರೈ (ಹ) ೬ ನಿ (ಜ)

ಆ ಸಮಯದೊಳು ಸರ್ವ ಜನರನುಂ ಬೀಳ್ಕೊಟ್ಟ
ನಾ ಸೇದಿರಾಜಂ ದಯಾರಹಿತ ಕಪಟ ಸಂ
ನ್ಯಾಸನಂ ಕೂಡಿಕೊಂಡಂತಃಪುರಂ ಪೊಕ್ಕು ಪರಮ ಪರಿತೋಷದಿಂದ
ಸೂಸುವ ಸುಗಂಧೋದಕದಿ ಮಜ್ಜನಂ ಗೈಸಿ
ಈಶಾರ್ಚನೆಯ ಮನೆಯೊಳಾತನಂ ಕುಳ್ಳಿರಿಸಿ
ಭಾಸುರದ ದೀಪ ಧೂಪಂಗಳಂ ಪುಷ್ಪಂಗಳೆಲ್ಲವಂ ತಂದಿರಿಸಿದರ್ ೧೪

ದಿಟ ಭಕ್ತನಂತೆ ಭಸಿತೋದ್ಧೂಳನಂ ಮಾಡಿ
ತಟಪಟನೆಸುತ್ತ೧ಲಿಂಗನ್ಯಾಸವಂ ಮಾಡಿ
ಕುಟಿಲ ಗುಣದಿಂ ಬಕಧ್ಯಾನದಂತಿರುತಿರ್ದ ಬರಿಯ ಮನವರಿಯಲಾಗಿ
ತುಟಿ ಮಿಡುಕುತಂ ಮೂಗುವಿಡಿದಾಡುತಂ ಕರಂ.
ನಟಿಸುತಂ ಕಡೆಗಣ್ಗಳಿಂದಿತ್ತ ನೋಡುತಾ
ಭ್ರಟಗೈವನೊಮ್ಮೆ ಮೌನದಲಿರ್ಪನೊಮ್ಮೆ ಮುಸುಕಿನೊಳಿರ್ಪನೊಮ್ಮೊಮ್ಮೆಯು೧೫

ಎನಿತೆನಿತು ನೋಡುತಿರಲನಿತನಿತು ಪಿರಿದಾಗಿ
ಎನಿತೆನಿತು ನೋಡದಿರಲನಿತನಿತು ಕಿರಿದಾಗಿ
ಇನಿತು ಪರಿಯಿಂದೆ ದೇವಾರ್ಚನಂ ಮಾಡಿ ದಂಭಂ ಮೆರೆದನಂದು ನಲಿದು
ಇನಿದಾದ ದಿವ್ಯಪ್ರಸಾದ ಸುಖಮಂ ಪಡೆದು
ಘನ ಹರ್ಷಮಂ ತಾಳ್ದು ಕುಳ್ಳಿರಲ್ಕನಿತರೊಳ್
ವಿನಯದಿಂ ಸೇದಿರಾಜಂ ಬಂದು ನಮಿಸಿ ಮತ್ತಾತನೊಡನಿಂತೆಂದನು ೧೬

ಎಲೆದೇವ ಕರುಣಿಪುದು ದಿವ್ಯಾಗಮುವನದಂ
ಸಲೆ ಕೃತಾರ್ಥನ ಮಾಳ್ಪುದೆನ್ನನಿದು ಸಂಪದಂ
ಒಲಿದೀವುದೆನಲಾತನಂತಾಗಲೆಂದು ಮಧ್ಯಮರಾತ್ರಿಯೊಳಗಿರ್ವರು
ಲಲನೆಯುಂ ಹಡಪಿಗನಿರದ ತೆರದಿ ಕದವಿಕ್ಕಿ
ಸಲುವುದಿದು ನಿನಗೆ ಮತ್ತಾರಿಗಿದನೊರೆಯದಿರು
ನಲುವಿಂದೆ ಮೊದಲೊಳೀ ಕವಳಿಗೆಗೆ ಭಕ್ತಿರಸವೆರಸಿ ಮೈಯಿಕ್ಕೆಂದನು ೧೭

---

೧ ಲಿಂ (ಹ)

ನಿಂದು ಸದಮಳ ಮನಂ ಹರ್ಷದಿಂ ಸೈಗೆಡೆದ
ನಂದು ಭಯಭರಿತ ಭಕ್ತಿಯಲಿ ಪುಳಕಾಶ್ರುವಿಂ
ಮಿಂದು ಮೈಯಿಕ್ಕಿರ್ದನವಯವಂ ಹೆಚ್ಚಿ ಹಿಗ್ಗುತ್ತ ಮೈಯಿಕ್ಕಿರ್ದನು
ಸಂದೇಹವಿನಿತಿಲ್ಲದಿಂತು ಸೈಗೆಡೆದಿರ್ದ
ನಂ ದುರುಳ ಕಂಡು ಹವಣಿಸುತಿರ್ದನೇವೇಳ್ವೆ
ನಂದು ತನುವಿನೊಳು ಧರಿಸಿದ ಭಸಿತ ರುದ್ರಾಕ್ಷಿಗಳ್ಪಳಿವುತಿರ್ದುವವನಂ ೧೮

ಮಗನೆ ಕೇಳ್ ಘುಳಿಘುಳಿಸುವಲಗನುರವಣೆಯಿಂದೆ
ತೆಗೆದು ನಡು ಬೆನ್ನನಿರಿಯಲ್ಕೆ ನೆಲನಂ ಗೆಲಲು
ಸುಗಿಯದುರು ಗಾಯಕಳುಕದೆ ಬಳುಕದಾನಂದಕಿರದೆ ಕೊರತೆಯ ತಾರದೆ
ಬಗೆಬಗೆಯ ಕಿಂಕರತೆಯಿಂದೆ ಬೆನ್ನೊಡ್ಡಿಕೊಂ
ಡೊಗುಮಿಗೆ ವಿಲಾಸದಿಂದೀತನಿರುತಿರೆ ಕಂಡು
ಸೊಗಸಿನಿಂದಿರಿವುದನಿರಿದು ಮುಂದುಗೆಟ್ಟನಾ ಡಂಬಕನದೇವೇಳ್ವೆನು ೧೯

ಹೆರೆಮೆಟ್ಟಿ ನಡುಗಿ ಬೆಂಬಿದ್ದನಾ ಪಾತಕಂ
ನೆರೆ ಭಯದೊಳುಂ ತನು ಬೆಮರ್ದು ಬೆಬ್ಬಳಿಗೊಂಡು
ಹರಣದುಳಿವಂ ಮರೆದು ಬಾಯಾರಿ ನುಡಿವಡರಿದಾಗಿ ತತ್ತರಿಸುತ್ತಲೀ
ಇರೆ ಸೇದಿರಾಜನೊಯ್ಯನೆ ನೋಡಿ ತಲೆಯೆತ್ತಿ
ಹರನೆ ಕೈನೊಂದವೇ ಅಲಗೊತ್ತಿಯೆಲೆ ದೇವ
ಮರೆದಾದರಂಜದಿರು ದೇವ ನಾನಳುಕದೀ ತನುವ ನಿಮಗೊಪ್ಪಿಸಿದೆನು ೨೦

ಎನುತವನ ಕೈಯಿಂದೆ ಮೆಲ್ಲನೆತ್ತಿಸಿಕೊಂಡು
ಮನದೊಳಂಜದಿರೆನುತ ಕೈವಿಡಿದು ನಡೆಗೊಂಡು
ಮೊನೆಗಾಣುತಿರಿದಲಗ ಕಾಣಬಾರದ ತೆರದಿ ಮುಸುಕಿಟ್ಟು ಧೈರ್ಯವೆರಸಿ
ಪರಮ ಸಿಂಹಾಸನದೊಳಿರ್ವರುಂ ಕುಳ್ಳಿರ್ದು
ಕರ ಕಂಪಿಸುವ ಭಕ್ತನಂದು ಸ್ತೈತಿಡುತಿರ್ದು
ಕರಿಸಿದಂ ಬೆಳಗಪ್ಪಜಾವದೊಳಗಾಪ್ತನಂ ತನ್ನ ಮನದಂತಿಪ್ಪನಂ ೨೧

ಬಂದ ಸಚಿವಂಗೆಂದನೆನ್ನ ಸಂಪದವಿವರು
ಇಂದು ಶೈವಾಗಮಂಗಳನರುಪಿದವರಿವರು
ಸಂದೇಹವೆಂಬುದನು ಕಡೆಗಾಣಿಸಿದರು ಕೆಲಕೆಲವು ಸೂತ್ರಂಗಳೊರೆದು
ಕುಂದು ಹೆಚ್ಚುಗಳ ತಂಳೆದೆಂಸೆದಿರ್ದ ಗುಣಗಣದ
ಬಂಧನಂ ಪರಿದಿಕ್ಕಿದರು ಮಹಾ ಕರುಣಿಗಳ
ಮಂದ ಕೀರ್ತಿಪ್ರಭಾಪುಂಜರಘಭಂಜಕನರು¹ ದೇವಪೂಜಾಕೌಶಲರ್ ೨೨

ಇವರಿಂದೆ ಹಲವು ಲೇಸುಗಳೆಮಗೆ ಹೊದ್ದಿದವು
ಇವರಿಂದೆ ಪರಮಶಿವಮಂತ್ರಂಗಳೊದಗಿದವು
ಇವರಿಂದೆ ಸಕಲ ಸಿದ್ಧಿಗಳಾದವೆಮಗಿಂದು ಇವರನೇನೆಂದರಿದಿಯಾ
ಇವರಿಂದೆ ರಾಜಸಂಪದವಾಯಿತಿಂತೆಲ್ಲ
ಇವರಂತೆ ಶೈವಾಗಮಾಚಾರ್ಯರಿನ್ನಿಲ್ಲ
ಇವರ್ಗೆನರಿದಾರಾಧಿಪಡೆ ವಸ್ತು ಬೆಲೆಯಿಲ್ಲವಮಿತ ಮಹಿಮಾಚಾರ್ಯರು ೨೩

ಎನುತೆ ಭಂಡಾರದವನಂ ಕರಿಸಿ ನಯದಿಂದೆ
ಮನವೊಲಿದು ಪೊಸಪೊಂಗಳಂ ತರಿಸಿ ಮುದದಿಂದೆ
ವಿನುತ ಕವಳಿಗೆಯೊಳಗೆ ಸುರಿದು ಕರುಣಂಗರೆದು ಕೈಮುಗಿವುತ್ತೈದೆ ನಿಂದು
ಘನಮಹಿಮರಿವರೊಡನೆ ಬೆಳಗುವನಿತಂ ಪೋಗು
ತನುವಿನಿಂ ಕಳುಹಿಬಾಯೆನಲಾನೆ ಕುದುರೆಗಳ
ಜನದ ಸಂದಣಿಯಿಂದೆ ಡಂಬಕನ ಕೊಂಡೊಯ್ದರತ್ತಿತ್ತ ಬೆಳಗಾದುದು ೨೪

ಕರುಣಿಯಿವ ಕಪಟಿಯಿವನೆಂಬುವೆಚ್ಚರವಿಲ್ಲ
ಇರಿದರಿವದಿಲ್ಲ ಘಾಯದ ಸೋವದಣುಮಾತ್ರ
ಕುರುಹಿಲ್ಲವೀ ಸೇದಿರಾಜನೇಂ ಶಾಂತಿಮಯನಿಂತಪ್ಪ ಶಿವಶರಣನಂ
ನೆರೆ ಕಾಣ್ಬೆನೀಶರಣಗೊಲಿವ ಹರನಂ ಕಾಣ್ಬೆ
ಹರನ ಬಳಸಿಹ ಗಣಸಮೂಹಮಂ ಕಾಣ್ಬೆ ಕಂ
ಡಿರಿದ ಪಾಪಿಯು ಕಂಡಘಂ ಕಳೆವೆನೆಂದೈದಿದಂತೆ ರವಿಯೈತಂದನು ೨೫

---

೧ ಳ್ತಿ (ಹ) ೨ ರನು (ಹ)

ಹರಭಕ್ತನಂ ಪದುಳದಿಂದೆ ಕಳುಪಿದೆವೆಂದು
ಸರಸನಹ ಸಚಿವನೈತಂದು ಬಿನ್ನೈಸಲಾ
ವರ ಸೇದಿರಾಜಂ ಮಹಾಸಂತಸಂಬಟ್ಟು ಸರ್ವಜನರರಿವಂದದಿ
ಅರಸಿಯರು ಸಚಿವರು ಕುಮಾರರ್ಕಳಂ ಬರಸಿ
ಗುರುಭಕ್ತರಂ ಹಿರಿಯರಂ ಮಾನ್ಯರಂ ಕರಸಿ
ಪರಮ ಧೈರ್ಯದ ಮೊದಲ ಗವಸಣಿಕೆ ತೆಗೆವಂತೆ ಶಾಂತಿಯಂ ಮುಚ್ಚಿರುತಿಹ ೨೬

ಜವನಿಕೆಯನೋಸರಿಸುವಂತೆ ಮುಸುಕಿರುತಿರ್ದ
ಭವಬಂಧಮಂ ತೆಗೆದು ಕಳೆವಂತೆ ಮೆಲ್ಲನವ
ಯವದ ಮುಸುಕಂ ತೆಗೆದನೇವೇಳ್ವೆನೈ ಮಗನೆ ನೋಳ್ಪರೆದೆ ನೋಯುವಂತೆ
ತಿವಿದಲಗು ಬೆನ್ನಿಂದುರಕ್ಕೆ ಮೂಡಿರೆ ಕಂಡು
ಶಿವಶಿವ ಮಹಾದೇವನೆನುತೆಲ್ಲರುಂ ಶಿವಾ
ಧವನು ನಿನಗಿನಿತೇಕೆ ಮಾಡಿದನಿದೇನೆನುತ ಸರ್ವರುಂ ಮರುಗುತಿರಲು ೨೭

ಮರುಗುವ ಜನಂಗಳಂ ಕರಸಂಜ್ಞೆಯಿಂ ನಿಲಿಸಿ
ಕರೆದೊರ್ವ ಭಕ್ತನಂ ಹಿಂದೆ ತಾಂ ಕುಳ್ಳಿರಿಸಿ
ಸರಸದಿಂದೆನ್ನನುಂ ಧ್ಯಾನಿಸಲ್ತೊಡಗಿದಂ ಅಲಗನುಚ್ಚಿಂದು ಬೆಸಸಿ
ಕರಣಂಗಳೆಲ್ಲವುಂ ಶಿವನಿಗರ್ಪಣವೆನುತೆ
ಬೆರೆದಂತೆ ಬೆಚ್ಚಂತೆ ಹೊಲಿದಂತೆ ಒತ್ತಿದಂ
ತಿರಿಸಿದಂ ತನ್ನುರದಿಯೆನ್ನ ನಿಜರೂಪಮದನೇನೆಂಬೆನೈ ಸೌಂದರಾ ೨೮

ಮೂಡುವೆಳನಗೆಯಿಂದಲಾ ಸೇದಿರಾಜನಿಗೆ
ಗಾಢದಿಂದವನಲಗನುಚ್ಚಲನುವಾಗುತಿರೆ
ನೋಡಲಮ್ಮದೆ ಜನಂ ಕಣ್ಮುಚ್ಚಿಕೊಳುತಲಿರೆ ಸತಿಸುತರ್ಮರುಗುತ್ತಿರೆ
ಕೂಡೆ ಸ್ವೈರಗಾಗಿ ಕೌತುಕಂಬಡುತಲಿರೆ
ಆಡಲಿನ್ನೇನವನ ಭಕ್ತಿಗಾಂ ನುತಿಸುತಿರೆ
ರೂಢಿಯ ಜನಂ ಕೆಲರ್ತಮ್ಮ ತನುವಂ ಮರೆದು ನೋಡುತ್ತಲಿರುತಿರ್ದರು ೨೯

ಈಶಪ್ರತಿಷ್ಠೆಯ ಸಲಾಕೆಯನುಗಿವ ತೆರದಿ
ಹೇಸದಲಗಂ ತೆಗೆದನಾಭಕ್ತನಂದುರದಿ
ಭಾಸುರತೆವೆತ್ತು ನಾನಲ್ಲಿ ನಿಜರೂಪಮಂ ತೋರಿಸಿದೆನದೇನೆಂಬೆನು
ಆ ಶಶಿಕಳಾ ಜೂಟದಿಂ ನೊಸಲ ಕಣ್ಣಿಂ ವಿ
ಲಾಸಕರವೆನಿಪ ಪುಲಿದೊವಲಿಂ ತ್ರಿಶೂಲದಿಂ
ಲೇಸೆನಿಪ ಪಂಚವದನಂಗಳಿಂ ದಶಭುಜಗಳಿಂದಲಾನೊಪ್ಪಿರ್ದೆಸು ೩೦

ಸ್ಫುರದುರುತರ ಶಿರಪ್ರಘೋಂಷಃ ದುಂದುಭಿಗಳಂ
ಭರದಿ ಭೋರೆಂದು ಮೊಳಗಿದವು ಕುಸುಮದ ವೃಷ್ಟಿ
ಗರೆದುದು ಮಹಾನಂದಿ ಭೃಂಗ್ಯಾದಿ ಗಣವಿಸರ ನೆರೆದುದುತ್ಸವದಿಂವಲೀ
ಸರಸದಿಂದಾ ಸೇದಿರಾಜನೆರಗಲ್ಕವನ
ಹರುಷದಿಂ ತೆಗೆದು ಬಿಗಿಯಪ್ಪುತವರ್ಗಳನೆಲ್ಲ
ವರಪುಷ್ಪಕದೊಳಿರಿಸಿ ಕೊಂಡೊಯ್ದೆ ಕೈಲಾಸಗಿರಿಗೆ ಕೇಳೆಲೆ ಸೌಂದರ ೩೧

ಅಂತು ಸಂಧಿ ೭ ಕ್ಕಂ ಪದಗಳು ೨೬೫ ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

---

೧ ಟ (ಹ)

## ಸಂಧಿ : ೮

ಸೂಚನೆ :

ತನಯನುಂ ತನ್ನಿನಿಯಳುಂ ತಾನುವುಂವೆರಸಿ
ಅನಘನಹ ಶಿವನ ಕೌಪೀನಕ್ಕೆ ಸಮತೂಕ
ವೆನಲು ಜನರಿಗೆ ತೋರಿದಮರನೀತಿಯ ಕಥೆಯನಾಲಿಸಿದನಾ ಸೌಂದರಂ

ಕೇಳೈ ಕುಮಾರ ಸೌಂದರಭೂಪ ಮತ್ತೊರೆವೆ
ಚೋಳದೇಶದೊಳು ತಿರಿನಲ್ಲೂರೆನಿಪ್ಪ ಪುರ
ವಾಲಲಿತ ವಿಭವದಿಂದೊಪ್ಪಿರ್ದುದಾ ಪುರದೊಳಿರುತಿರ್ದನೊರ್ವ ಭಕ್ತಂ
ಪೇಳಲಿಕ್ಕರಿದಾದ ಸಂಪದದ ಪೆಂಪಿಂದೆ
ಭೂಲೋಕದೊಳಗವನಿಗೆಣೆಯಿರದ ಶೀಲದಿಂ
ಲೀಲೆಯಿಂದಮರನೀತಿಯೆನಿಪ್ಪ ನಾಮದಿಂದಾ ಮಹಿಮನಿರುತಿರ್ದನು ೧

ಇಂತಿರ್ದು ಶಿವನನರ್ಚಿಸಲೆಂದು ಮೈದಂಡು
ಚಿಂತಿಸಿದನೊಂದು ಕಾರ್ಯಂ ಚಿತ್ತದೊಳಗಂದು
ಸಂತಸದಿ ವಸ್ತ್ರಕ್ಕೆ ಸುಲಭವಾದುದು ಭಕ್ತಿ ದಾಸೂನಿಂದೆಂದರಿವುತೆ
ಎಂತಾದಡಂ ವಸ್ತ್ರವಿತ್ತೊಲಿಸುವೆನುಮೇಶ
ನಂ ತಾನೆಸುತ್ತರಿದು ವ್ಯವಹಾರದೊಳಗೆ ಮ
ತ್ತಂ ತನುಜನಲ್ಲಿರಿಸಿ ಭಸಿತಮಂ ಧರಿಸಿ ರುದ್ರಾಕ್ಷಿಯಂ ತಳೆವುತ್ತಲಿ ೨

ಲಿಂಗಾಲಯಕ್ಕಿರದೆ ಸಂತಸದೆ ಬಂದಲ್ಲಿ
ರಂಗಮಂಟಪದೊಳು ನಮಸ್ಕಾರಮಂ ಗೈದು
ಲಿಂಗಕ್ಕೆ ಪರಿಪರಿಯ ಪುಷ್ಪಂಗಳಿಂದೆ ಗಂಧಾಕ್ಷತೆಗಳಿಂ ಪೂಜಿಸಿ
ರಂಗಿಪ ಲತಾವಳಿ ಸುರಾವಳಿ ಸುಚಿತ್ರಾವ
ಳಿಂ ಗಜಾವಳಿಯು ಪುಷ್ಪಾವಳಿಯು ಹಂಸಾವ
ಳಿಂ ಗಜಾರಾತಿವಳಿ ನೇತ್ರಾವಳಿಗಳೆನಿಪ ವಸ್ತ್ರಾಳಿಯಂ ತರಿಸಿದಂ ೩

ಬಂದ ದಿಂಡುಗಳನೊಯ್ಯಾರದಿಂದಿರಿಸುತಂ
ನಿಂದವಂ ನೋಡಿ ಮನದಿಂದಲಂಕರಿಸುತಂ
ಅಂದವುಗಳೊಳಗೆ ಮಿಗಿಲೆನಿಪ ವಸ್ತ್ರಂಗಳಂ ಕೊಂಡು ನವಕುಸುಮಂಗಳಂ
ಗಂಧದಿಂ ಹೊರೆದು ಪರಿಮಳವುಂಡು ಮಘಮಘಿಪ
ಚಂದವಹ ವಸ್ತ್ರಂಗಳಂ ತಂದು ಪರಿಪರಿಯ
ಲಿಂದೆ ಬಗೆವೆಚ್ಚಿ ತಲ್ಲಿಂಗಕ್ಕೆ ಪೂಜೆಯಂ ಮಾಡುತವನೊಲವಿನಿಂದೆ ೪

ತೊಳಗುವ ದುಕೂಲದ ನಯಂಗಳಂ ತೆಗೆದುಡಿಸಿ
ಥಳಥಳಿಯ ಪಟ್ಟಾವಳಿಯು ಹೊಸವಸ್ತ್ರಮಂ ಪೊದಿಸಿ
ಲಲಿತ ಚಂದನದ ಪರಿಮಳವನೊಯ್ಯನೆ ಪೂಸಿ ಕರಣಂಗಳೊಂದುಗೊಳಿಸಿ
ಚೆಲುವೆನಿಪ ದಂಡೆಯಂ ವಸ್ತ್ರಂಗಳಂ ಕಟ್ಟಿ
ಪಲವು ಬಗೆಯಿಂದೆ ಪೂಜಾಸಂಭ್ರಮವನೆಸಗಿ
ಒಲವು ಮಿಗಿಲಾಗಿರ್ದ ಸಲುಗೆಯಿಂ ಲಿಂಗವಂ ಮುಂಡಾಡಿ ಕೊಂಡಾಡುತೆ ೫

೧ ನೆಂ (ಹ) ೨ + ವ (ಹ) ೩ ಬ (ಜ)

ರಸವೊಸರ್ವ ಗುಗ್ಗುಳದ ಪೊಸಕಂಪಿನಿಂ ಸುತ್ತಿ
ಮಿಸುಗುತಿರ್ಪಾ ಜೆಳಗನೊಸೆದಾರತಿಯನೆತ್ತಿ
ಲಸಿತ ದೇವಾನ್ನ ದಿವ್ಯಾನ್ನದೊಳಿಹಮೃತಾನ್ನ ಷಡುರಸಾನ್ನಗಳೊಳಿಪ್ಪ
ಪೊಸ ಸವಿಗಳಂ ತಂದು ಹಾರೈಸಲಿಕ್ಕುತಂ
ವಿಶದ ಪರಿಮಳ ಘಟ್ಟಿ ಕೈಗಿತ್ತು ಒಂದೆರಡು
ಮಿಸುನಿವಣ್ಣದ ಬಿಳಿಯೆಲೆಗಳೊಳಗೆ ಪಚ್ಚೆಕರ್ಪೂರವೆರಸುತಿತ್ತನಂದು ೬

ಇಂತು ಲಿಂಗವನರ್ಚಿಸುತ್ತಮರನೀತಿಗಳು
ಸಂತಸದೊಳಿರಲಿತ್ತ ಭಕ್ತರುಗಳಲ್ಲಲ್ಲಿ
ಯಿಂ ತಳುಹದೈತಂದು ನೆರೆದುದು ಸಕಲಜನದ ತಿಂಥಿಣಿಯನೇವೇಳ್ವೆನು
ಶಾಂತರುಗ್ರರ್ವೆಗ್ರರುರು ನಿಷ್ಠುರರ್ಮಥುರ
ರುಂ ತವಕ ಸಾಹಸಿಗಳೆಲ್ಲರುಂವೆರಸುತ್ತ
ಮುಂತಿರ್ದಮರನೀತಿಯಂ ನೋಡಿ ತಾಂ ತಮ್ಮ ಮನಕೆ ಬಂದೊಲ್ನುಡಿವರು ೭

ಪರಸುತಿರ್ದರ್ಕೆಲರು ಪರಸಲೇಕೆಮಗೇನು
ಹೊರಿಸಿಕೊಡುವಂ ಎನುತಲಿರ್ಪರ್ಂಕೆಲರು ಮತ್ತೆ
ಧರೆಯೊಳಿಂತಪ್ಪನುಂಟೇನೆಂಬುವರ್ಕೆಲರು ಶಿವನೀಯ[ಲ]ರಿದಾವುದು
ಸಿರಿವಂತರಪ್ಪುದಚ್ಚರಿಯೆ ಎನುವರ್ಕೆಲರು
ಪರಿಪರಿಯ ನುಡಿಯಿಂದೆ ನುಡಿವುತಿಹ ಗಣನಿಕರ
ಮರು ಸಭೆಗೆ ಪೈಯಿಕ್ಕುತಮರನೀತಿಯು ಮತ್ತವರನಂದು ಪೊಗಳುತಿರ್ದಂ ೮

ಅಹಹ ಎನ್ನಾಳ್ದರಪ್ರತಿಮರಚಲರ್ಬಂದ
ರಹಹ ಎನ್ನಾನೆಗಳು ಎನ್ನನಿಧಿಗಳು ಬಂದ
ರಹಹ ಶಂಕರಶನಿ ನೇಹಂ ರೂಪುಗಳನಾಂತು ಬಂದರೈಯೆನ್ನ ಬಳಿಗೆ
ಅಹಹ ಶಶಿಧರನ ಸದ್ಭಕ್ತರೆಲ್ಲರ್ಬಂದ
ರಹಹ ಇಹಪರ ಸುಖವನೀವರಸುಗಳ್ಬಂದ
ರಹಹ ಎನ್ನಯ ಪುಣ್ಯಕೆಣೆಯಿಲ್ಲವೆನುತೆ ಪುಳಕಿಸುತೆ ನಯನಾಶ್ರುವಿಂದೆ ೯

೧ ರ್ದರು (ಹ) ೨ ಲಿ (ಹ, ಜ) ೩ ನೆ (ಜ)

ಬಂದು ಗಣಮಧ್ಯದೊಳು ನಿಂದು ದೀಂಡಂ ಬಿಡಿಪ
ಸಂದ ಪಟ್ಟಾವಳಿಯಸಾನಂದದಿಂ ತೆಗಿಸಿ
ಅಂದೇನನೆಳಸಿದರ್ಗಿಮ್ಮಡಿಯನೀವುತಂ ಮೌನದಿಂದಿರ್ದವರ್ಗೆ
ಚಂದದಿಂ ನಾಲ್ಮಡಿಯನೀವುತೋರೊರ್ವ್ವರಾ
ನಂದದಿಂದಿರುವರ್ಗೆ ನೂರ್ಮಡಿಯನೀವುತಂ
ಸಂದೇಹವಿರದೆ ಪುಳಕಿಸುತೀವ ಪುಟವೇರುತೀವ ತೊಳತೊಳಗುತೀವಂ ೧೦

ಕೋಡವರು ತೂಗಾಡಿ ಬೆರಗಾಗಲೀವುತಂ
ಕಂಡವರಿಗದ್ಭುತವ ದಾನವೆನಲೀವುತಂ
ಹಿಂಡುಭಕ್ತರ್ಕೂಡಿ ಕುಣಿದಾಡಲೀವುತಂ ಮಣಿದಾಡಲೀವುತಿಂತು
ಚಂಡಿತನದಿಂದೆಣಿಕೆಗೆಟ್ಟೀವುತಂ ಮಹಾ
ಪುಂಡತನದಿಂ ಬೇಡುವರ್ಗೀವುತಂ ಮತ್ತೆ
ಚಂಡನುಡಿಯಿಂದೆ ಬೇಡುವರ್ಗೀವನಾವುದೊಳಿತಂ ಕೋವಣಕ್ಕೀವನು ೧೧

ಅನ್ನಂ ಸುವರ್ಣಂ ಸುವಸ್ತ್ರಮುಮನೀವುತಂ
ಎನ್ನನೀವೆಂ ಬೇಳ್ಪರಿಲ್ಲೆಂದು ಸುಯ್ವುತಂ
ಎನ್ನಸತಿಯುಳನೀವೆನೆಳಸರಯ್ಯೋ ಶರಣರೆನ್ನ ಸುತನನ್ನೀವೆನು
ನನ್ನಿಯಿಂ ಭಕ್ತರುಗಳೊಲ್ಲರಯ್ಯೋ ಎನುತೆ
ಮುನ್ನೆ ಭಕ್ತರ ಸತಿಸುತರ್ಗೆ ಉಡಲೀವುತಂ
ಉನ್ನತದಿ ನೆನೆದರ್ಗೆ+ ಎನುಡಿದರ್ಗೆ೨ ಬೇಡಿದರ್ಗಿಲೆನ್ನದೀವುತಿರ್ದಂ ೧೨

ಇಂತಿಂತು ಪಲಕೆಲವು ವತ್ಸರಂ ಮಾಡುತಿರೆ
ಅಂತಂತು ದಿನದಿನಕೆ ಮಿಗಿಲೆನಿಸುತೀವುತಿರೆ
ಸಂತಸದಲಲ್ಲಿ ಮಾಡಿದ ಭಕ್ತಿ ಕೈಲಾಸದಲ್ಲಿ ಪಲ್ಲವಿಸಿರ್ದುದು
ಎಂತುಸುರ್ವ್ವೆನೆಲೆ ನಂಬಿ ನಾಂ ಪೊದೆದ ಗಜಚರ್ಮ
ವಂತಲ್ಲದುಟ್ಟ ಪುಲಿದೊವಲಿವಂ ಕನಕಮಯ
ದಂತೊಪ್ಪುತಿರ್ದ ಪಟ್ಟಾವಳಿಗಳಾದುವಾ ಸತಿಯುಟ್ಟುದಿಂತಾದುದು ೧೩

---

\+ ಎನು (ಹ) ೨ x (ಹ)

ಕಾಣುತ್ತಲಾಗ ನಾನತಿ ಕೌತುಕಂಬಟ್ಟು
ಕ್ಷೋಣಿಯೊಳಗಿದು ಪೊಸತೆನುತ್ತೆ ಹರ್ಷಂಬಟ್ಟು
ಏನಾದಡಂ ಪೋಗಿ ನೋಡುವೆನಮರನೀತಿಗಳ ಭಕ್ತಿಯಂ ಭೂಮಿಯೊಳ್
ಸಾನುರಾಗದಿ ತೂಗಿ ನೋಳ್ಪೆನವನಂಗಮಂ
ನಾನಿತ್ತ ಕೊಂಡುಬಹೆನೆನುತಮರ ನೀತಿಯಂ
ಧ್ಯಾನಿಸುತ್ತೊಂದು ಶತವೃದ್ಧ ವೇಷವನು ಕೈಕೊಂಡೆನದನೇವೆಳ್ವೆನು ೧೪

ಎಳಲ್ವ ಕಿವಿ ತೆರೆ ಬಾಯಿ ಜೋಲ್ದ ಪುರ್ಬಿಂದೆಸೆಯೆ
ಪಳೆಯ ತನುವಿಂದೆ ಕೋಲ್ತುದಿಯ ಕೋವಣವೆಸೆಯೆ
ತೊಳತೊಳಗುತಿಹ ನೊಸಲಭಸಿತದಿಂದಾನೆಸೆದು ಚೋಳದೇಶದೊಳಿರುತಿಹ
ಅಸಮಸದ್ಭಕ್ತನಾದಮರನೀತಿಗಳಿಪ್ಪ
ಜಸವೆತ್ತ ಪುರವನೊಳಪೊಕ್ಕು ಬರುತಲ್ಲಿ ಗಣ
ವಿಸರನೆರೆದಿರಲಾತನವರ ನಡುವೆಸೆದಿರ್ದನಾ ಶಿವಾಲಯದೊಳಂದು ೧೫

ಮೆಲ್ಲಮೆಲ್ಲನೆ ಶಿವಾಲಯದೊಳಯಕೈತಂದು
ಅಲ್ಲಿ ಸಂಭ್ರಮಿಪ ಶರಣರನೀಕ್ಷಿಸುತ್ತಾರು
ಮಿಲ್ಲವಂತೊಂದು ಗೊಂಟಿನೊಳು ಕುಳ್ಳಿರ್ದ ನಾನಾಭಕ್ತರಂ ನೋಡುತೆ
ಸಲ್ಲಲಿತನಾದಮರನೀತಿ ಎಂದಿನ ತೆರಂದ
ಲೆಲ್ಲರ್ಗೆ ಕೊಡುತೆ ಭಕ್ತರನೆಲ್ಲ ತಣಿಸುತ್ತ
ಲುಲ್ಲಾಸದಿಂದಿಂತು ಮೂರುಜಾವಂ ಕೊಟ್ಟು ಸಕಲರಂ ಕಳುಹಿಸಿದನು ೧೬

ಎಡಬಲಂ ನೋಡುತ್ತಲಲ್ಲಿ ಗೊಂಟಿನೊಳಿರ್ದ
ನೊಡನೆನ್ನ ಕಾಣುತ್ತಲಿತ್ತ ಬನ್ನಿರಿ ದೇವ
ತಡವಾಯ್ತು ಹೊತ್ತು ಹೋದುದು ಸುಮ್ಮನೇಕಿರ್ದಿರಯ್ಯ ಅಯ್ಯಾ ಎನುತ್ತೆ
ಮೃಡರೂಪ ನೀಂ ಪೊದ್ದುದೊಂದುಟ್ಟುದೊಂದರಿವೆ
ಕಡೆಯೊಳೀ ಕೋಲ್ತುದಿಗೆ ಕಟ್ಟಿರ್ದ ಕೋವಣಂ
ಬಿಡಿಬಿಡಿ ಇವೇಕೆ ನಿಮಗಿನ್ನು ಕೊಳ್ಳಿರಿ ದಿವ್ಯ ಪಟ್ಟಾವಳಿಯನೆಂದನು ೧೭

---

೧ ದಿರೆ (ಹ)

ಸೊಗಸಿನಿಂದುಟ್ಟು ಹೊದೆಯಿರಿ ದೇವ ಎನುತಾತ
ನಗಣಿತ ಸುವಸ್ತ್ರಗಳನೆನ್ನ ಮುಂದಿರಿಸಲ್ಕೆ
ಒಗುಮಿಗೆಯಲಾನು ಗಹಗಹಿಸೆ ನಗಲೇಕೆ ನಿಮ್ಮರಸಿಯರ್ಗೀವೆನೆನಲು
ತೆಗೆ ನಿನ್ನ ಸಂಪದವನೇಕೆ ತೋರುವೆ ಎನಗೆ
ಮಗನೆ ಬಡವರ್ಗೆ ಉಡತಕ್ಕುವೇ ಪಿರಿದೆಮಗೆ
ಹಗರಣವಿದೇಕೆ ನಾವೇಕೀಯರಿವೆಯೇಕೆ ನಮ್ಮ ಪರಿಬೇರೆ ಕಂಡ್ಯಾ ೧೮

ಎನಗೀವಭಕ್ತರವನಿಯೊಳಮಿತರಿರುತಿಪರು
ಧನಧಾನ್ಯವೆಂಬವಂ ಮನೆಗೀವರೆಮ್ಮವರು
ವಿನುತರತ್ನಾಳಿಗಳ ತಂದೀವರೆಮ್ಮವರು ಬೇಡಿದುದನೀವರವರು
ಇನಿತವರ್ಗಳಿಂ ತಂಮ ನಾನಿತ್ತಲಿತ್ತಿತ್ತು
ಘನವೆನಿಪ ಸಂಪದಂ ನಿಂದುದದರಿಂ ನಾನು
ಎನಿತಾದಡಂ ಭಕ್ತರಂ ೧ಬೇಡದಲ್ಪ ಸುಖಕೆಳಸದಲ್ಲಲ್ಲಿ ಪೋಗಿಂ ೧೯

ಶಿವನ ಸದ್ಭಕ್ತರಂ ನೋಡುತ್ತ ನಲಿವುತ್ತ
ಶಿವನ ದಿವ್ಯಕ್ಷೇತ್ರಗಳನೈದೆಯೀಕ್ಷಿಸುತೆ
ಸುವಿವೇಕದಿಂದಿಲ್ಲಿ೨ಗೈದೆವಲ್ಲದೆ ನಿನ್ನ ವಸ್ತ್ರಂಗಳೆಮಗೆ ಬೇಡಾ೨
ತವೆ ಭಕ್ತರುಗಳು ತಣಿವಂತೀವುದದುವೆ ಸುಲ
ಭವೆ ಕೇಳಮರನೀತಿಯೆನುತೆ ಮುಖದೊಳು ಕಟಕಿ
ತವಕಿಸುವ ಹರ್ಷಂ ಮನದೊಳಿಟ್ಟು ಸುಡಿಯಲಾತಂ ಎನ್ನೊಳಿಂತೆಂದನು ೨೦

ಹರನ ಭಕ್ತರ್ಪಿರಿದು ಕರುಣಿಸುವರೆಲೆದೇವ
ಅರಸುವಲ್ಲಿಂ ಮುನ್ನ ಬಂದಿಪ್ಪರೆಲೆದೇವ
ಮರೆಯಲೀಯದೆ ಉತ್ಸವದಿ ಬರ್ಪರೆಲೆದೇವ ನಾನೆನಿತರವನೀವಡೆ
ಸರಸದಿಂ ತಾವೈದುದಂ ಕರುಣಿಸುವುದೆನಲು
ನೆರೆ ಕೇಳಿದೇನುವಂ ಬೇಡ ಬಂದವರಲ್ಲ
ನರರನಾಶ್ರಯಿಸಬಂದವರಲ್ಲ ಭಕ್ತರಂ ಬೇಡಿಕೊಂಡೊಯ್ವರಲ್ಲ ೨೧

---

೧ ಬೇಡರಲ್ಪ ಸುಖಕೆಳಸದಲ್ಲಲ್ಲಿ ಗೈದೆವಲ್ಲದೆ ನಿನ್ನ ವಸ್ತ್ರಂಗಳೆಮಗೆ ಬೇಡ ಪೋಗಿ (ಹ)
೨ x (ಹ)

ಧರೆಯೊಳಗೆ ದಾತರೆನಿತುಂಟವರನೆಲ್ಲರಂ
ನೆರೆ ಕಾಣುತಾ ಭಕ್ತರಲ್ಲಿಪ್ಪ ಗುಣಗಳಂ
ಪರಿಕಿಸುತೆ ಪರಮ ಪರಿತೋಷದಿಂದಲ್ಲಲ್ಲಿ ಚರಿಸುತ್ತಲಿರುತಿರ್ದೆವೂ
ಶರಣರ್ಗೆ ನೀನೀವುದಂ ನೋಡಲರ್ಥಿಯಿಂ
ನಿರುತದಿಂ ಕೇಳಿಬಂದೆವು ನಿನ್ನವಾರ್ತೆಯಂ
ಪುರದಲೊರ್ವಂ ಭಕ್ತನರ್ಪಣಕೆ ಬರ್ಪುದೆಂದದರಿಂದೆ ತೊಡಕಾದುದು ೨೨

ಈ ಕೋವಣವನಿಲ್ಲಿಯಲ್ಲಿರಿಸಬಾರದಿದ
ನೀ ಕೌಪವಿಂದು ಬಚ್ಚಿಟ್ಟುಕೊಡು ನಮಗೆನು
ತ್ತಾ ಕೋವಣವನವನಿಗೀಯಲಾತಂ ಕೊಂಡು ತನ್ನವನ ಕೈಗಿತ್ತನು
ಜೋಕೆಯಿಂದಿರಿಸೆಂದು ನಿನಗೀಯೆ ಮತ್ತವನಿ
ಗೇಕಿತ್ತೆ ಪರಊರು ಕೈಯೊಳಗೀವುದಲ್ಲಿದಂ
ನೀ ಕೆಳೆಲ್ಕೈಯಮರನೀತಿ ಕೌಪದ ಮಹಿಮೆಯೆನಿತೆಂದು ನಾಂ ಪೇಳಲೇ ೨೩

ನಮ್ಮ ಭಕ್ತರ್ಮೊದಲಿದಿತ್ತ ಭಕ್ತಿಯು ಕೌಪ
ಬೊಮ್ಮಾದಿಗಳ್ಬಯಸಿ ಹಡೆಯಲಾರದ ಕೌಪ
ಗಮ್ಮನೀ ಪಟ್ಟಾವಳಿಯ ಬೇಕನಲ್ಕದಂ ಕಿನೆಕೆಯ್ದು ತಂದೀವ ಕೌಪಂ
ತಮ್ಮ ಬಳಿಯಲ್ಲಿದಿಂತಿರೆ ನೆನೆದುದಂ ನುಡಿದು
ದಂ ಮುದದಿ ಕೊಡುವುದಿದಕಿನ್ನಾವುದೆಣೆಯಲ್ಕೆ
ಸುಮ್ಮಾನದಿಂದಿದಂ ಮುಡಗು ದಿಂಡಿನೊಳೆಂದು ಮುಡಗಿಸುತೆ ನಾಂ ಪೋದೆನು ೨೪

ಅಮರನೀತಿಗಳಿಳಿತ್ತಳ ತಮ್ಮರಮನೆಗೆ ಬಂದು
ನಮಗಿಂದು ಕಟಕಿಯಾಡಿಸಿದನೀಶ್ವರನೆಂದು
ಸುಮನದೊಳಗದ್ಭುತವಿದೇನೆಂದು ಬಂದ ಭಕ್ತನ ಭಾವವೇನಿದೆಂದು
ಕ್ರಮತಪ್ಪಿ ನುಡಿದ ನುಡಿ ಮನದೊಳಗೆ ನಟ್ಟಿರಲು
ಅಮಮ ಇಂದಿನ ಭಕ್ತಿ ಹರನಿಂತುಗೈದನೆಂ
ದಮಿತ ವ್ಯಸನದೊಳಿರುಳಗಳೆಯಲನಿತರೊಳುದಯವಾದುದಾ ಸದ್ಭಕ್ತನು ೨೫

೧ ರ್ದರೂ (ಹ) ೨ x (ಜ) ೩ ನೈ (ಹ) ೪ ಪ್ಪ (ಹ)

ದೇವಾಲಯಕ್ಕೆಂದಿನಂದದಿಂ ನಡೆತಂದು
ದೇವರ್ಗೆ ಸಕಲವಸ್ತ್ರದ ಪೂಜೆಗೈದಂದು
ಭಾವಶುದ್ಧದಲಿ ಪೊಡಮಟ್ಟೈದೆ ರಂಗಮಂಟಪದ ನಡುವಂ ನಿಲ್ಲಲು
ಆ ವಿನುತ ಶರಣತತಿ ಘುಡಿಘುಡಿಸುತ್ತೈತಂದು
ತೀವಿದುದ ನಾಲ್ಕೆಂಟು ಸಾವಿರಂ ಮುಂಗುಡಿಯು
ಲಾ ವಿಭವಮಂ ಕಂಡಮರನೀತಿಯುವರಿಂಗೆ ನಮಿಸಿ ಕುಳ್ಳಿರುತಿರ್ದನು ೨೬

ಅನಿಮಿತ್ತವಮರನೀತಿಯ ಬಲದ ಕಣ್ಕೆತ್ತೆ
ತನಿಹರುಷವೇರಿ ಸಾಲ್ಗೊಂಡು ಪುಳಕಮನೆತ್ತ
ಲನಿತರೊಳಗಾನು ಕುಳ್ಳಿರ್ದ ಸಪ್ಪಕ್ತರಂ ದಾಂಟುತಂದುರವಣಿಸುತೆ
ಒನೆದಾಡುತಂ ತೇಂಕುತಂ ಬಂದು ತಾರೊ ಕೋ
ವಣವೆಮ್ಮ ನೆರವಿ ಪೋದಪುದತ್ತ ತಡವೇತ
ಕಿನಿತೆನಗೆ ತಡೆಯದಿದು ತಾತಾರ ಹೂಂ ತಾರೊ ತಾಯೆನುತ್ತಂ ನುಡಿದನು ೨೭

ಆತುರಂಗೈದು ಬೇಡುತ್ತಿರಲ್ಕೆನ್ನನಿ
ನ್ನಾತನೀಕ್ಷಿಸಿ ನುಡಿದನೆಲೆದೇವ ಕಚ್ಚುಟಕಿ
ದೇತಕಿನಿತಾತುರಂ ಕೋವಣಕಿಂತು ಸಂಭ್ರಮವೇತಕೀವೆನಯ್ಯಾ
ಓತು ನಿಮ್ಮರಿವೆಯಂ ಕೊಳ್ಳಿರೈಯೆಂದು ವಿ
ಖ್ಯಾತ ಭಕ್ತಂ ತಾನು ಬೈಚಿಟ್ಟ ದಿಂಡನ
ತ್ಯಾತುರದಿ ಬಿಚ್ಚಿ ನೋಡಲ್ಕದರೊಳಿಲ್ಲದಿರಲತಿ ವಿಸ್ಮಯಂಬಡುತ್ತ ೨೮

ಎಲ್ಲ ದಿಂಡುಗಳೊಳಗೆ ಲೇಸಾಗಿ ನೋಡುತಿರ
ಲೆಲ್ಲಿಯುಂ ಎನ್ನ ಕೌಪದ ಸುದ್ದಿಯಿಲ್ಲದಿರೆ
ಮೆಲ್ಲನವನರಿದಾನು ಉರಿದೆದ್ದು ಬಸಿರಂ ಹೊಸೆದುಕೊಳುತ ಬಾಯಿ ಮುಚ್ಚುತ
ಎಲ್ಲರುಂ ಕಂಡಿರೇನಮರನೀತಿಯ ಚರ್ಯ
ಸಲ್ಲಲಿತ ಭಕ್ತನೆಂದರಿದು ಕಚ್ಚುಟವ ನಿ
ನ್ನಲ್ಲಿರಲಿ ಬೈಚಿಟ್ಟುಕೊಡುಯೆಂದು ಕೊಟ್ಟೊಡೀಗಿಲ್ಲೆಂಬನೇವೇಳ್ವೆನು ೨೯

ಎನಲಮರನೀತಿಗಳು ದೇವ ನಾಂ ಕೊಂಡೆನೇ
ತನಗೆ ತಾನೇ ಕೊಟ್ಟು ಪೋದುದಾಂ ಬಲ್ಲೆನೇ
ಇನಿತಾಂಸುರಂ ನೀವು ಗೈಯಲಿನ್ನೇಂಗೈವೆ ಪೋಗಿರ್ದ ಕಚ್ಚುಟಕ್ಕೆ
ಘನವಾದ ಪಟ್ಟಾವಳಿಗಳಿವಂ ಕೊಳ್ಳಿರೆಂ
ದೆನುತಾತನೊಂದು ದಿಂಡಂ ತರಿಸಿ ಮುಂದಿರಿಸೆ
ಕನಲುತ್ತೆ ನಾನಾರ್ಭಟಿಸಿ ದಿಂಡನೊದೆಯೆ ಸಭೆಯುವರೆಲ್ಲ ನಗುತಿರ್ದರು ೩೦

ಎಲವೊ ಕೇಳ್ ಪಟ್ಟಗಿಟ್ಟಾವಳಿಗಳದಕೆಣೆಯೆ
ಎಲವೊ ಹುಲುನೇತ್ರಾವಳಿಗಳಿನ್ನದಕೆ ಸರಿಯೆ
ಬಲುಮಹಿಮೆಯುಳ್ಳುದೀ ಕಚ್ಚುಟವಿದೆಂದು ನಿನಗೊರೆದೊರೆದು ಕೊಟ್ಟೆವೆನಲು
ಎಲೆ ದೇವ ಕಚ್ಚುಟವು ಮಹಿಮೆಯುಳ್ಳುದದೆಂದು
ತಿಳಿದೆ ನಾಂ ಮಡಗಿದಲ್ಲಿರದೆ ಪೋದುದೆನಲ್ಕೆ
ಫಲವೀವ ಕೌಪವಚ್ಚರಿಯೆನಿಪ ಕೌಪವದು ಪೋದು೧ದಾ೨ನರಿಯೆನೆಂದಂ ೩೧

ಈ ತೆರದಿ ಕಟಕಿಯಾಡುವುದರಿದೆನ್ನೈಯಮರ
ನೀತಿಯೆ ಮಹಿಮೆಯಲ್ಲಂ ಬರಿಯ ಕೌಪವದು
ಏತಕೀಯಲ್ಬಾರದೇನಿರ್ದಡೇನೆಮ್ಮ ಕೌಪಮಂ ಕೊಡು ಕೊಡಯ್ಯಾ
ಜಾತ ಪಟ್ಟಾವಳಿಯನೆಲ್ಲ ಭಕ್ತರ್ಗೆ ಸಂ
ಪ್ರೀತಿಯಿಂದೀವೆ ನಾಂ ಕೊಟ್ಟುದೆನಗೇಕೆ ಕೊಡೆ
ಘಾತಕತನವಲೆಸಗಲೊಳಿತಲ್ಲ ಕರುಣಮಂ ಗೈದೆನಗೆ ಕೊಟ್ಟುಕಳುಹಾ ೩೨

ಕೊಡುವುದುಂ ಕೊಂಬುದುಂ ಘನಭಕ್ತರೊಳು ಮತ್ತೆ
ನುಡಿವುದುಂ ಬಿಡುವುದುಂ ಸದ್ಭಕ್ತರೊಳು ಭಾಗ್ಯ
ಡೊಡೆತನದ ಗರ್ವಮುಂಟಾದರ್ಗೆ ಭಕ್ತಿರಸವೆಂದೆಂದು ನೆಲೆಗೊಳ್ಳದು
ಪೊಡೆಯೊಡೆವ ತೆರದಲೇನೆಂದಡುಂ ಸುಮ್ಮನಿ
ರ್ದಡೆ ಪೋಪುದೇನು ನಾನಿನ್ನೊಮ್ಮೆ ಬೇಡುವೆಂ
ಕೊಡದೆ ನಿಂದಡೆ ಬಳಿಕ ನಿನಗೆನ್ನನೊಪ್ಪಿಸುವೆ ನೋಡೆನ್ನ ಸಾಹಸವನು ೩೩

---

೧ ತು (ಹ) ೨ ದ (ಹ)

ಎನ್ನನರಸಿಕೊಳುತ್ತ ಬಹ ಭಕ್ತರತಿಯುಂಟು
ನಿನ್ನ ಹವಣಲ್ಲ ಕೇಳ್ನಿನಗೆ ಬಲ್ಲಿದರುಂಟು
ಚೆನ್ನಾಗಿ ಮನದೊಳರಿ ಇದನೆನುತ್ತಾನು ಪಲವಂಪದಿಂ ನುಡಿಯಲಾಗಿ
ಉನ್ನತದ ಭಕ್ತರೆಲ್ಲರ್ಬೆರಗುಬಟ್ಟು ನಮ
ಗಿನ್ನೀವುದಂ ಪ್ರಾಣಿಸಿದನಿವಂ ಮತ್ತಿವನಿ
ಗೇನ್ನೆಗಳ್ಚುವೆವು ಭಕ್ತರ ಪಾಪಮಂ ಕಟ್ಟಿಕೊಂಡನಿನ್ನೇನೆಂಬರು ೩೪

ಕಚ್ಚುಟಕೆ ಪಳಿಯ ದಿಂಡುಗಳನಿತ್ತಡೆ ಒಲ್ಲ
ಅಚ್ಚರಿಯಿದೇನೆಂಬ ಪರಿ ಶಂಭುವೇ ಬಲ್ಲ
ಸಚ್ಚರಿತ ಭಕ್ತನಾದಮರನೀತಿಯ ತೊಡಕ ಪರಿಹರಿಪೆವೆಂದೆಲ್ಲರು
ಮುಚ್ಚುಮರೆಯೇಕೆ ಸಾವಿರ ಹೊನ್ನನೈಯಂಗೆ
ನಿಚ್ಚಳದೊಳಿತ್ತು ಮನಸಿನ ಮುನಿಸ ಕಳೆವೆವೆಂ
ಬಿಚ್ಛೆಯಿಂದೆಲ್ಲರೊಂದಾಗುತ್ತ ಬಂದೆನಗೆ ಪೇಳಲುದ್ಯೋಗಿಸಿದರು ೩೫

ಎಮ್ಮ ಮಾತಂ ಪಲಿಸವೇಳ್ಕುದಿನ್ನೆಲೆ ದೇವ
ನಮ್ಮೆಲ್ಲರಂ ನೋಡವೇಳ್ಕು ನೀನೆಲೆ ದೇವ
ನಿಮ್ಮ ಕಚ್ಚುಟಕೆ ಪವಣಪ್ಪೊಂದು ಸಾವಿರಂಹೊನ್ನನುಂ ಕೈಕೊಳುತ್ತೆ
ಸುಮ್ಮಾನದಿಂ ಪೋಪುದೈ ದೇವಯೀಮಾತು
ವೆಮ್ಮಗಾನಂದವಿರ್ಪುದು ಕರುಣಿಸೈದೇವ
ಇಮ್ಮನಂ ಮಾಡದುಸುರೆನಲವರ ನುಡಿಗೆ ನಾಂ ಸಭೆ ನಡುಗಲುರಿದೆದ್ದೆನು ೩೬

ಕೋಪಿಸುತೆ ಕಂಪಿಸುತೆ ನಿಂದಲ್ಲಿ ನಿಲದೆ ನಾಂ
ಶಾಪಿಸುತೆ ತಾಪಿಸುತೆ ಚೀರುತ್ತೆ ಮರುಗುತ
ಯ್ಯೋಪರಮ ಭಕ್ತರಿರಾ ಲೋಗರಂ ಮುಗ್ಧರಂ ಕಂಡು ಕರುಣಂ ಪುಟ್ಟದೇ
ಈ ಪರಿಯ ದಾನಮಂ ಕೊಡುವವನ ಪಕ್ಷನಿಮ
ಗೈ ಪೂರ್ಣವಿಪುದು ಬಡವನನಾಥನನು ನೋ
ಳ್ಪೀ ಪುಣ್ಯ ನಿಮಗೆಲ್ಲಿಹುದು ಇದಿಂತೆಂದರಿಯದಾದಿರೈ ತಂದೆಗಳಿರಾ ೩೭

ಅದು ನೋಡೆ ಕಪ್ಪಿಟಪದೆಂದು ಬಗೆದಿರಿ ಎನಗೆ
ಅದು ಪರುಷವೆನಗೆ ಚಿಂತಾಮಣಿವ್ರಜ
ಅದು ಕೋವಣವೆ ಸುರಭಿಗಳ್ಗೆ ದಾಪಣ(?)ಯೆನಗೆಯದು ಕಲ್ಪಲತೆಯು ಎನಗೆ
ಅದು ಕೌಪವೇ ಕಲ್ಪಭೂಜವೆನಿಸಿತ್ತೆನಗೆ
ಅದನೆಲ್ಲನಂತಿಂತೆನುತ್ತಾನು ಒರೆದೊಡೇಂ
ಒದಗಿರ್ದಿರೆನ್ನ ಮುಳುಗಿಸುವುದಕೆ ಮಧ್ಯಸ್ಥರೆನಿಸಿ ನಾನೇನರಿಯೆನೇ ೩೮

ಇವರನೇಕೈ ತೋರುತಿರ್ದಪೆಯುಮರನೀತಿ
ಇವರ ಕೈಯಲಿ ಕೊಟ್ಟೆನೇ ಪೇಳಮರನೀತಿ
ಇವರ ಕರಕರಿ ಎನಗಿದೇಕೆ ನೀಂ ಸುಮ್ಮನಿಹ ಪರಿಯದೇಂ ಪೇಳೆನಲ್ಕೆ
ಇವರೇಕೆ ನೀನೇಕೆ ಕೌಪವೇಕೈ ಭಕ್ತ
ಇವರಿಗೇನಾಪಡೊಂದೆನ್ನುವುದೆಮುಗಯುಕ್ತ
ವಿವರಿಸುತ್ತೈದೆ ನಿಮ್ಮೊಳು ನೀವೆ ಸಮನಿಸಿಕೊಳುವುದೆಂದರಾ ಭಕ್ತನು ೩೯

ಆದಲಿನ್ನೇನಿವರ್ಗೊಕ್ಟುದು ನಿಜಂ ಮತ್ತೆ
ನೋಡಲಲ್ಲಿಯುಮಿಲ್ಲವಾ ಕೋವಣವನಿವ
ರ್ಬೇಡಲುಚಿತಂ ಕಳೆದ ಕಾರಣದೊಳಪರಾಧಿಯಾನಿಂತಿದಕೆ ತಕ್ಕುದಂ
ಮಾಡುವರಿವರ್ಮಾಡಿಸಿಕೊಂಬೆ ನಾನಿಂದು
ಕಾಡುವರಿವರ್ಕಾಡಿಸಿಯೆಕೊಂಬೆ ನಾನಿಂದು
ಬೇಡಬಂದವರು ನಿಮ್ಮೊಳು ದೋಷವೇ ಬಳಲ್ದಿರಿ ಪೋಗಿರೈ ಎಂದನು. ೪೦

ನುಡಿಯೆ ಭಕ್ತರ್ಮರುಗಿ ನಮ್ಮ ಪಶವಲ್ಲವಿದು
ಮೃಡನೆ ಬಲ್ಲಂ ಮಿಕ್ಕವರ್ಗರಿಯಬಾರದೆನು
ತ್ತೊಡನೆಲ್ಲರೇಳಲುದ್ಯುಕ್ತರಾಗಲ್ಕದಂ ತಿಳಿದು ಮತ್ತಿಂತೆಂದನು
ನಡಗತದ ಭಕ್ತರೆಲ್ಲರ್ಪೋಗದಿರಿ ಒಡಂ
ಬಡುವಂತೆ ನಿಮಗೊಂದನುಸುರ್ವೆ೧ನಾಂಕೋವಣಂ
ದೃಢಭಕ್ತನಾತನೇಂ ಕಾರಣಂ ಕೊಂಡಪಂ ನಾನೆ ಸೋಲ್ದಪೆನೀತಗೆ ೪೧

---

೧ ನಾ (ಜ)

೮೫
ಆತಂಗೆ ಜಲವಾಡಡೆನಗೆ ಜಲವಪ್ಪುದೇ
ಆತ ಮುಗುವೆನಗಾತನೊಳು ದೋಷನೋಳ್ಪುದೇ
ವಿತಕಿದನೆಮಗೆ ಭಕ್ತದ್ರೋಹಮಂ ನಿಮ್ಮ ಕೋಪಮಂ ಮಾಣಿಸುವೆನು
ಸಾತಿಶಯ ಕೌಪಕೆಣೆಯಾದೊಂದು ಕೌಪಮುಂ
ಟಂತವರ ತೂಕಕ್ಕೆ ಸರಿತೂಕವಿತ್ತಡತಿ
ಪ್ರೀತಿಯಪ್ಪುದು ನಮಗೆ ಪೋದ ಕೋವಣದ ಹಂಬಲವಿಲ್ಲ ನಮಗೆಂದನು ೪೨

ಪರಮ ಹರುಷಿತರಾವರೆಲ್ಲರೀನುಡಿಗೆ ೧ತ
ಚ್ಛರಣನತಿ ಸಂತಸಂ ಬಟ್ಟ ಮುಂದಾಗುವುದ
ನರಿಯದಾತಂ ಕಿರಿಯದೊಂದು ತ್ರಾಸಂ ತರಿಸುತವರೊಳಾ ಕೋವಣವನು
ಇರಿಸಲಾ ಭಾರಕ್ಕೆ ಹಲ್ಲೆಗಳೊಡೆದು ಮುರಿವು
ತುರು ಜೂರ್ಣಮಾಗೆ ಮತ್ತೊಂದು ಪಿರಿದಪ್ಪುದತಿ
ಭರದಿಂದೆ ತಂದವರೊಳಾ ಕೋವಣವನಿರಿಸಲದು ನುಚ್ಚುನೂರಾಗಲು ೪೩

ನೆರೆಕಾಣುತಮರನೀತಿಗಳಿದಂ ಗಹಗಹಿಸಿ
ಬರಿಯ ಕಪ್ಪುಟವಲ್ಲ ಕಂಡೆನಿದರಂದಮಂ
ಹೊರಗೆ ನಡೆಯಿರೆ ತೋರ್ಪೆ ಸಾಮಾಹುವಂದಮಂ ಎನುತೆ ರಾಜಾಂಗಣದೊಳು
ಹರಶಾಸನಸ್ತಂಭವಿವು ನೋಡಿರೈಯೆನುತೆ
ಪರನ ಭಕ್ತಿಯ ನೀಳ್ದ ನಿಷ್ಠೆಯಿವನೋಡಿರೆನು
ತೆರಡು ಕಂಬಗಳನಂಬರವನೆತ್ತುವ ತೆರದಿ ನಟ್ಟು ನಡುವೊಲೆಗಳಿಟ್ಟು ೪೪

ಕಟ್ಟಿದಂ ಕಬ್ಬುನದ ಸಂಕಲೆಗಳಂ ತರಿಸಿ
ತುಟ್ಟತುದಿಗೆರಡು ಕೊಪ್ಪರಿಕೆಗಳನಳವಡಿಸು
ತಟ್ಟಹಾಸದಿ ನಿಂದು ನೋಡುತ್ತಲೆಲೆದೇವ ನಿಮ್ಮಕೋವಣವನಿದರೊಳ್
ನೆಟ್ಟನಿರಿಸೈಯೆನಲು ಕೌಪವಿಡಲಾ ಹಲ್ಲೆ
ನಟ್ಟಿತ್ತು ಧರೆಗೆ ಮಗುಳಾ ಹಲ್ಲೆ ಗಗನಕ್ಕೆ
ಮುಟ್ಟಿತ್ತು ನೋಳ್ಪಜನವೆಲ್ಲಿದೇನಚ್ಚರಿಯವೆನುತೆ ಬಾಯಿಮುಚ್ಚಿರ್ದುದು ೪೫

---

೧ ಶರಣ (ಹ)

ನೀಳಾದ ನಿಚ್ಚಣಿಕೆಯನ್ನಿಟ್ಟು ದಿವ್ಯವ
ಸ್ತ್ರಾಳಿಯಂ ತಂದಿಡುವರೇನೆಂಬೆನೈ ನಂಬಿ
ಆಳುಗಳ್ಪೊತ್ತು ತರುವರ್ದ್ದಿಂಡುನಿಂಡುಗಳನಾ ಪಲ್ಲಿಯೊಳಗೊಟ್ಟುವರ್
ಪೇಳಲೇನೀಹಲ್ಲೆಯಣುಮಾತ್ರ ಚಲಿಸದಿರೆ
ಬಾಳುಗೆ ಮಹಾದೇವನೆನುತಮರನೀತಿಗಳು
ತೋಳಪೊಯ್ವುತ್ತೆ ಸಂತಸದಿ ಕುಣಿದಾಡುತ್ತೆ ಭಕ್ತಿಗಿದು ಕಡೆಗೆನುತ್ತೆ ೪೬

ನೆರೆಯ ವ್ಯವಹಾರಿಗಳ ವಸ್ತ್ರಮಂ ತಂದೊಟ್ಟಿ
ಪುರದೊಳಗೆವುಳ್ಳ ವಸ್ತ್ರಂಗಳೆಲ್ಲವನೊಟ್ಟಿ
ವರರತ್ನಖಚಿತದಾಭರಣಮಂ ಮನೆಯೊಳುಳ್ಳರ್ಥಮಂ ತಂದೊಟ್ಟಲು
ಸರಿಯದಲ್ಲಾಡದೊನದಾಡದಿರಲೀ ಹಲ್ಲೆ
ಪುರಜನಂ ಪರಿಜನಂ ಸುಡಬಂದುದೀಕೌಪ
ನೆರೆದವರ ನಿಂದವರನಂಜಿಸಿತ್ತೀಕೌಪವೆನುತೆಲ್ಲರೆನುತಿರ್ದರು ೪೭

ಏವೇಳ್ವೆವಿದು ಮಾಯವೆಂದು ನುಡಿವರ್ಕೆಲರು
ಆವುದೆಂತೆಂದರಿಯಬಾರದೆಂಬರ್ಕೆಲರು
ದೇವನೊಲವಿಂ ಕಾಡಬಂದನೆಂಬರ್ಕೆಲರು ಕೆಲರು ತಾವು ಸುಮ್ಮನಿಪರು
ಆವುದರಿಂದಮರನೀತಿಗಳಿಗೆಂಬರ್ಕೆಲರು
ದೇವಭಕ್ತರಿಗಿತ್ತ ಫಲವೆಂಬುವರ್ಕೆಲರು
ಭಾವದೊಳು ನೆನೆದು ಎಂತಪ್ಪುದೋ ಒಟ್ಟಿದ ಕಟಾಕ್ಷಿಪವೆನುತಿಪರು ಕೆಲರು ೪೮

ಇಂತುಜನವೆನುತಿರಲಮರನೀತಿ ತಾನಂದು
ಚಿಂತಿಸಿದನೊಂದು ನಾನೊಲಿವ ತೆರನಂ ಬಂದು
ನಾಂ ತಿಳಿದೆನಿದಕೆ ಸರಿತೂಕಮಂ ಕಂಪೆ ತಕ್ಕುದ ಮಾಳ್ಪೆನೆಂದು ನಗುತೆ
ಅಂತಿಂತು ಭಕ್ತನಲ್ಲಂ ನೋಡುತೀತನುಂ
ಸಂತಸದೊಳೀತನಂ ಮಚ್ಚಿ ಸುವೆಳನಾನೆನು
ತ್ತಂಳತನಯುನಂ ಕರೆಸಿ ತತ್ತನಯುನಂ ನೋಡಿ ಬಿಗಿಯಪ್ಪಿ ಮಿಗೆಪರಸುತೆ ೪೯

೧ ಳ್ಪೊ (ಹ) ೨ x (ಹ) ೩ ಟ್ಟಾ (ಜ) ೪ ನಾನೆಂದು (ಹ)

ಮಗನೆ ನೀಮಾಳ್ಪವ್ಯವಹಾರವದು ಸಾಲ್ಗಯ್ಯ
ಮಗನೆ ಕೊಡುವುದು ಕೊಂಬುವುದು ಪೂರ್ಣವಿಂದಯ್ಯ
ಮಗನೆ ಭಕ್ತರ್ಗ್ಗೀವುದೆಲ್ಲಮುಂ ಶೂಲಿ ತಾನೇ ಕೊಂಡನೇವೇಳ್ವೆಸು
ಸೊಗಸಾದ ಕಚ್ಚುಟಕೆ ತೊತ್ತಾದೆವೆಲ್ಲರುಂ
ಮಿಗೆಭಕ್ತಿಯರ್ಥಿಯುಂ ಕೊಂಡುದೀ ಕೋವಣಂ
ಮಗನೆ ಇನ್ನಂಜಲಾಗದು ಕಂದ ಕಲಿಯಾಗೆನುತ್ತ ಮೈದಡವುತ್ತಲೀ ೫೦

ತನ್ನ ಕೈಯಾರೆ ಭಸಿತವನ್ನೈದೆ ಧೂಳಿಸುತೆ
ನನ್ನಿಯಿಂ ರುದ್ರಾಕ್ಷಿಗಳನಿಕ್ಕಿ ಹೊಸವಸ್ತ್ರ
ವನ್ನುಡಿಸಿ ರುದ್ರನೆ ಬಲ್ಲನೆಂದೆನುತೆ ಮತ್ತಾತನಂ ತೆಗೆದಪ್ಪುತೆ
ಉನ್ನತದ ಮಗನ ಕೈವಿಡಿದಾತ ನಿಚ್ಚಣಿಕೆ
ಯನ್ನೇರೆನುತ್ತಲೇರಿಸುತಲಿರೆ ಸತಿನುಡಿದ
ಳುಂ ನಾನಿರಲ್ಕೀತನೇಕೆನಲು ನಿನ್ನಿಂದಲೀತನಿಂ ತೀರುವುದಿದೇ ೫೧

ಧರೆಗೆ ವೈಚಿತ್ರ್ಯವಾಗದೆ ಹೋಗದಿದು ನೋಡು
ತಿರುಯೆನುತೆ ತನ್ನತನಯುನನೇರಿಸುತ್ತಿರಲು
ನೆರೆದಜನವೆಲ್ಲ ಮರುಗುತ್ತೀಪುರಕೆ ಮೃತ್ಯುವಾದನೀ ಭಕ್ತನೆನುತೆ
ದೊರೆಯು ಮಗನಂತಿಪ್ಪ ಕಂದನಂ ಕಚ್ಚುಟ
ಕ್ಕಿರದೇರಿಸಿದರೆನುತಿರಲ್ಕೆ ಮಗನಂ ಹಲ್ಲೆ
ಗಿರಿಸಲಾಕ್ಷಣದಿ ನೆಲಕಿಳಿದ ಕೌಪದ ಹಲ್ಲೆ ಮೆಲ್ಲನದು ನಸುನೆಗೆದುದು ೫೨

ಕಂಡಮರನೀತಿ ಕುಬುಂಬೆಂದು ಬೊಬ್ಬಿರಿದಾರ್ದು
ಕೊಂಡೆನಿನ್ನೇನು ಸತ್ಯದ ಸೀಮೆಯುಂ ಸೂರೆ
ಗೊಂಡೆನಿನ್ನೇನು ಕೈಲಾಸಮೆನುತಂ ಬಾಹನಪ್ಪಳಿಸಿ ಕುಣಿವುತಿಳಿದು
ಪುಂಡಪ್ರಚಂಡ ಎಲೆದೇವ ಈ ಸಂತಸಂ
ಕಂಡೆಯಾ ಎನಲಿದೇಕೆಮ್ಮೊಡನೆ ಬೇಸರಂ
ಕೊಂಡುದಂ ಕೊಡುವುದಕ್ಕಿನಿತು ಸಂಭ್ರಮವೇಕೆ ಕೊಂಡಿಲ್ಲವೇನು ಪೋಪೆವು ೫೩

ಮಗನನೇರಿಸಲೆಂದು ಪೇಳ್ದಿಪೇ ಜಗವರಿಯೆ
ಮಗುವುತನದಾಟವಲ್ಲದೆ ಬೇರೆವಿಲ್ಲರಿಯೆ
ಮಗನುಮಾವನಿತೆಯುಂ ನೀನು ಏರಿದೊಡೇನು ಜಗದಜನವೇರಲೇನು
ಮಿಗೆಯೆನ್ನಕೌಪಕ್ಕೆ ಸರಿತೂಕವಾಗಲೆ
ನ್ನಗೆ ಸಾಕು ನಿನ್ನೊಡನೆ ವಾದವೇನೈ ಎನಗೆ
ಸೊಗಸಿನಿಂ ಪೂರ್ವದೊಳು ನುಡಿದಂತೆ ಕೊಡುಯೆನಲ್ಕಿವರ ಪರಿಪೂಸತೆಂದನು ೫೪

ವನಿತೆಗಾಜ್ಞಾಪಿಸಲ್ಕೇರಲರಿಯದೊಲಾಗ
ಲಿನಿಯಳಂ ತಾನೆತ್ತಿಕೊಂಡು ಮತ್ತೇರುತ್ತ
ವನಜಮಂ ಕಚ್ಚುಟಕೆ ತೂಗಲಿಡುವಂದದಿಂ ತೊಳತೊಳಗಿ ಬಳುಕುತಿರುವ
ಕನಕಲತೆಯಂ ಕೋವಣಕೆ ತೂಗುವಂದದಿಂ
ಮನುಮಥನ ಮಸೆದಲಗಿನಂತಿರುವ ನಾರಿಯಂ
ಘನವೆನಿಪ ತ್ರಾಸಿನೊಳಗಿರಿಸಿದಂ ಚೆನ್ನಸುಕುಮಾರಿಯಂ ಧೀರೆಯಳನು ೫೫

ಇರಿಸೆ ಮುನ್ನಿಂದಲುನ್ನತವಾದುದಾ ಹಲ್ಲೆ
ಹರುಷದಿಂದಮರನೀತಿಗಳು ನೋಡುತಲ್ಲಿ
ಸರಸರನೆ ಇಳಿವುತೈತಂದು ವೈಪೆಚ್ಚಿ ಹೊಸವಸನಮಂ ತೆಗೆದುಡುತ್ತೆ
ಪರಮಚೋಳಾದಿಗಳ್ಕೈಮುಗಿಯೆ ನಡೆತಂದು
ಪರರಂಗಮಂಟಪದ ಮಧ್ಯದೊಳು ತಾನಿಂದು
ಹರನೆ ಪುರಹರನೆ ಕೇಳೆನ್ನ ಬಿನ್ನಪವೆನುತಾತ ಕೈಮುಗಿವುತಂದು ೫೬

ಅಮರನೀತಿಯ ಕೊರ್ಬು ಕೈಗುಂದಿತೆಲೆ ದೇವ
ಅಮರನೀತಿಯ ಭಕ್ತಿ ಕೈದಿಯ್ಯೋದುದೆಲೆದೇವ
ಅಮರನೀತಿಗಳೀವ ಪಟ್ಟಾವಳಿಗಳೆಲ್ಲ ಪೂರ್ಣವೆನಿಸಿದುವು ದೇವ
ನಿಮಗೆ ಮಾಡಿದ ಪೂಜೆ ಫಲವಾಇದುಇದ್ದೈತಂದೆ
ಅಮಮ ಕೋವಣಕೆನ್ನ ತೊತ್ತುಮಾಡಿದೆ ತಂದೆ
ರಮಣೀಯವೆನಿಸಿತೆಲ್ಲಾ ಕಾರ್ಯವೆನುತೆ ಪೊಡಮಟ್ಟಾತ ತಿರುಗಿ ಬಂದಂ ೫೭

---

೧ ದಿ (ಹ) ೨ ಯಾ (ಹ) ೩ ವು (ಹ)

ಒಲವುಮಿಗಲ್ಕೈತಂದು ಭಕ್ತರಂ ನುತಿಸಿದಂ
ಎಲೆ ಗಣಂಗಳಿರ ಬಿನ್ನಪವನವಧರಿಸುವುದು
ಸಲೆನಿಮ್ಮ ಡಿಂಗರಿಗನೆಂಬುದಂ ಸಲಿಸುವುದು ನಮ್ಮ ನಿಜಭಕ್ತನೆಂದು
ಸಲಹಿದಿರಿ ನೀವೆಲ್ಲರಿನಿತುದಿನವೈದೆ ನಿ
ಶ್ಚಲಭಕ್ತಿವಂತನಾದೆಂ ನಿಮ್ಮ ಕರುಣದಿಂ
ಕೆಲವು ನೆವದಿಂದೆ ನಿಮ್ಮಂ ನೋಡಿ ನುತಿಸಿ ಹಾರೈಸಿ ಹಿಗ್ಗುತ್ತಲಿರ್ದೆ ೫೮

ನಿಮ್ಮಪದರಜವೆ ಬಾಯ್ಬೆಣ್ಣೆಯಾದುದು ಎನಗೆ
ನಿಮ್ಮಪಾದವೆ ತೊಟ್ಟಿಲಾಗಿ ಬೆಳೆದೆಂ ನಾನು
ನಿಮ್ಮ ಬರವೇ ಬೆಸನವಾಗಿರ್ಪೆಂನಾನಯ್ಯ ಇನ್ನೊಂದನರಿಯೆನಯ್ಯ
ನಿಮ್ಮ ಬರವೇ ಪ್ರಾಣವಾಗಿಪ್ಪೆ ನಾನಯ್ಯ
ನಿಮ್ಮ ಗೋಷ್ಠಿಯ ಸುಖವ ಸೂರೆಗೊಂಡಿರ್ಪೆನ್ನೈ
ಬೊಮ್ಮಾದಿಗಳ್ಬಯಸೆ ಬಾರದಿಹ ಭಾಗ್ಯಮಂ ತಪ್ಪಿಸಿದನೀಭಕ್ತನು ೫೯

ಇನ್ನೊಂದನವಧರಿಪುದೆಲೆಲೆ ಅಪ್ರತಿಮರಿರ
ಚಿಣ್ಣಶಿಶುವಿನ ತೊದಲ್ನುಡಿಯನೆಲೆ ಧೀರರಿರ
ಮನ್ನಣೆಯಲಿನಿತು ದಿನವಾನಿತ್ತೆನೆಂಬುದೆನ್ನಯ ಹೃದಯದೊಳಗುಳ್ಳೊಡೆ
ನನ್ನಿಯಿಂದೆನಗೆ ಸತಿಯರ್ಗೆ ಪುತ್ರರ್ಗೆಂದು
ಭಿನ್ನಭಾವವನೆನ್ನೊಳಗೈದಿರ್ದೊಡಂ ಭಕ್ತ
ರನ್ನೆಳಸದಿರ್ದಡಿಂತಲ್ಲದಾಂ ನಡೆವಡಂ ಶ್ರೀಗುರುವಿನಾಣೆಯೆಂದಂ ೬೦

ಭರದಿ ಬರುವಮರನೀತಿಗಳ ಬರವಂ ಕಾಣು
ತಿರದೇಳ್ವ ಪುಳಕಮಂ ಮೈಗರೆದು ನಿಲಿಸುತಂ
ಇರಲಾರದೇಳ್ವ ಜಡೆಗಳನೊತ್ತಿನಿಲಿಸುತಂ ಮೊರೆವ ತೊರೆಯಂ ಮನ್ನಿಸಿ
ನೆರೆನೆಗೆವ ಶೂಲಮುಮನಲ್ಲಿ ತಗ್ಗೊತ್ತುತಂ
ಪೊರಮಡುವ ಬಿಸಿಗಣ್ಣನೊಳಗೊಳಗೆ ಮುಚ್ಚುತಂ
ಹರವರಿಯ ಚೋಹದೊಡನುರೆ ಜಗಳವಾಡುತ್ತ ಮಿಸುಪ ಬಸವನನಡಗಿಸಿ ೬೧

---

೧ ರ್ದ (ಹ)

ಗಿರಿಸುತೆಯೊಳಸಮಕಾರುಣ್ಯಮಂ ತಗ್ಗಿಸು
ತ್ತಿರಲಮರನೀತಿಗಳ್ನಲಿವುತಲ್ಲಿಗೆ ಬಂದು
ಹರಭಕ್ತ ಕೇಳಯ್ಯ ಎನ್ನಬಿನ್ನಪವನೀಗಳೆ ನಿಮ್ಮ ಕಚ್ಚುಟಕ್ಕೆ
ಸರಿತೂಕಮಂ ಕೈಯಮೇಲೆನಾಂ ತೋರ್ಪೆನವ
ಧರಿಸು ಸತ್ಯವ ನೋಡು ನೋಡೆಂದು ಭಕ್ತಿಯನ
ಡರುವಂದದಿಂದೇರಿನಿಂದು ಶರಣರರ್ಗೆ ಕೈಮುಗಿವುತೆನ್ನಂ ಸ್ಮರಿಸುತ ೬೨

ಶಿವಮುಹೂರ್ತದ ಗಳಿಗೆವಟ್ಟಲೊಳು ಪೊಗುವಂತೆ
ತವೆಕಟಾಹದೊಳಮರನೀತಿಗಳ್ಶೋಭಿಸಲು
ತವಕದಿಂದೆನ್ನ ರೂಹಂ ಸಡಲುತೊಂದೆಸೆಯ ತ್ರಾಸನಾನೇರಿ ನಿಲಲು
ಆವರತ್ತ ನಾನಿತ್ತಲೊಂದೊಂದು ತ್ರಾಸಿನೊಳು
ಭುವಿಗತಿವಿಚಿತ್ರಮೆನೆ ನಿಜರೂಪದಿಂದಿರಲು
ವಿವರಿಸಲ್ಸಪುವಾಯ್ತು ದೇವಭಕ್ತರ ತೂಕದ ತ್ರಾಸನೇವೇಳ್ವೆಸು ೬೩

ಇಲ್ಲಿ ವೃಷಭಧ್ವಜಂ ಅಲ್ಲಿ ಭಕ್ತಿಧ್ವಜಂ
ಇಲ್ಲಿ ವರದಶಭುಜಂ ಅಲ್ಲಿ ವರಯುಗಭುಜಂ
ಇಲ್ಲಿ ಶಿವಶಂಕರಂ ಅಲ್ಲಿ ಶಿವಕಿಂಕರಂ ಇದ್ದೆಸೆಯನೀಕ್ಷಿಸಲ್ಕೆ
ಇಲ್ಲಿ ಶಶಿಶೇಖರಂ ಅಲ್ಲಿ ಗಣಶೇಖರಂ
ಇಲ್ಲಿ ಕರುಣಾಕರಂ ಅಲ್ಲಿ ಮಹಿಮಾಕರಂ
ಸಲ್ಲಲಿತ ತ್ರಾಸಿನೊಳಗೀರ್ವರೇಂ ಸೊಗಯಿಸುವರೆನುತೆ ಜನ ನುತಿಸುತಿಹುದು ೬೪

ಸುರಿದುದಿಬ್ಬರ ಮೇಲೆ ಪೂಮಳೆಯನಾಕ್ಷಣದಿ
ಪರಿದುದೆಣ್ದೆಸೆಗೆ ಭೇರೀರವಂ ಭಕ್ತಜನ
ಸುರಧೇನು ಭಕ್ತವತ್ಸಲ ಭಕ್ತಜನ ಕಲ್ಪತರು ಭಕ್ತಬಂಧುವೆಂದು
ಬಿರುದೆತ್ತಿ ಪೊಗಳ್ವ ಕಹಳೆಗಳ ಘನರವದೊಳಗೆ
ಅರರೆ ಕೋಟ್ಯಾನುಕೋಟ್ಯಾದಿತ್ಯ ಕಿರಣದಿಂ
ಸ್ಫುರಿಸುತಂ ನಂದೀಶ ಗಣನಿಕರವೆರಸಿ ಪುಷ್ಪಕವನುಂ ಕೊಂಡುಬಂದಂ ೬೫

ಅಮರನೀತಿಗೆ ವಿಮಾನಂ ಬೇಡ ನಂದೀಶ
ನಮಗೆ ಭಕ್ತರ್ಗೆ ಹಿರಿದುಂ ಕಿರಿದುವೆಂದಿಲ್ಲ
ಸಮವೆಂಬುದಂ ತೋರಲೊಯ್ವೆ ಕೈಲಾಸಕೆನುತಾ ತ್ರಾಸಸಹಿತ ನೆಗೆದು
ತಪುತಮಗೆ ಜನರೆಲ್ಲ ನೋಡುತಿರೆ ಕೈಲಾಸ
ಕೆ ಮಹಾವಿಭವದಿಂದಲವರ್ಗಳಂ ಕೊಂಡೊಯ್ದು
ಅಮರನೀತಿಗೆ ಸತಿಗೆ ಸುತಗೆ ಗಣಪದವಿಯಂನ್ನಿತ್ತೆಸೈ ಸೌಂದರೇಂದ್ರ ೬೩

ಅಂತು ಸಂಧಿ ೮ ಕ್ಕಂ ಪದಗಳು ೩೩೧ ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

## ಸಂಧಿ : ೯

**ಸೂಚನೆ :**

ಭಕ್ತಾಭಿಮಾನಿಗಳ್ ಭಕ್ತೇಷ್ಟದಾಯಕರ್
ಭಕ್ತಕುಲಬಂಧುಗಳ್ ಭಕ್ತಾಗ್ರಗಣ್ಯರಿರಿ
ಭಕ್ತರೇಣಾದಿನಾಥರ ಕಥೆಯನಾಲಿಸಿದನಾ ಸೌಂದರೇಂದ್ರನಂದು

ಕೇಳೆಲೆ ಕುಮಾರ ಸೌಂದರ ಪೇಳುವೆನು ಮತ್ತೆ
ಚೋಳದೇಶದೊಳು ಕರವೂರೆನಿಪ ಪುರವತಿ ವಿ
ಶಾಲತೆಯೊಳೊಪ್ಪಿರ್ದುದಾ ಪುರಕ್ಕಧಿಪತಿ ಪಗಲ್ಪೋಳನೊಪ್ಪಿರ್ದನು
ಪೇಳಲೇನಾ ಪೊಳಲೊಳೋರ್ವ ಭಕ್ತಂ ಬಹು ೧ದಂ
ಯಾಲವಾಲಂ ಏಕನಿಷ್ಠಾಪರಂ ಕುಮತ
ಕೋಲಾಹಲಂ ನಿಜಮತೋದ್ಧಾರನೆನಿಸುತಿರಿಭಕ್ತನೆಂಬಾತನಿರ್ದಂ ೧

---

೧ ದಾ (ಹ)

ಭಕ್ತರಂ ಭವಿಜನರು ಸೋಂಕಲವರಂ ಕೊಲ್ವ
ಭಕ್ತರಂ ನಿಂದಿಸುವ ಭವಿಯನಾಕ್ಷಣ ಕೊಲ್ವ
ಭಕ್ತರ ಪದಾರ್ಥಮಂ ಕೊರ್ಬಿನಿಂದಾವ ಭವಿಕೊಳ್ಳಲವನಂ ಕೊಲ್ಲುವಂ
ಭಕ್ತನಂ ಕೊಲ್ಲಿದ ಭವಿಯೆನ್ನೈದೆ ಕೊಲ್ಲುವಂ
ಭಕ್ತ ವಜ್ರಾಂಗಿ ಭಕ್ತರ ಸಹಾಯಂ ದಿವ್ಯ
ಭಕ್ತರಾಳ್ಭಕ್ತಕಿಂಕರನೆನಿಸುತಿರುತಿರ್ಪನಾ ಪುರದೊಳಾ ಭಕ್ತನು ೨

ಆವೂರೊಳಿಪ್ಪ ಲಿಂಗಾಲಯಕ್ಕೆ ಪೋಗುತ್ತ
ಲಾ ವಿಮಲ ಲಿಂಗಕ್ಕೆ ಪೂಜಿಸುತೆ ನೋಡುತ್ತೆ
ಭಾವ ಶುದ್ಧದಲಿ ಕೊಂಡಾಡುತ್ತೆ ಕರಿತುರಗ ವಸ್ತ್ರಾದಿ ಸಂಪದವನು
ಆವುದಂ ನಾಸೊಲ್ಲೆದೇವ ನಿನ್ನವರನಿ
ನ್ನಾವನಾದಡು ದೂಷಿಸಲ್ಕದಂ ಕೇಳಿಸದಿ
ರಾವಗಂ ನಿನ್ನವರ ಭಂಗಮಂ ಕಾಣಿಸದಿರೆಲೆ ದೇವ ಮತ್ತೆ ಮತ್ತೆ ೩

ಎಂದುವುಂ ಭಕ್ತರನೆ ಕಾಣಿಸೈ ಕಂಗಳಿಗೆ
ಎಂದುವುಂ ಭಕ್ತ ವಚನಗಳೆ ಕೇಳಿಸು ಕಿವಿಗೆ
ಎಂದು ಬೀಳ್ಕೊಂಡು ಬಪ್ಪಂ ನಿತ್ಯ ನೇಮವಿದು ಮತ್ತಿದನೆ ನೆನೆನೆನೆವುತೆ
ಅಂದಂದು ಮಾಳ್ಪ ಶಿವಪೂಜೆಗಳ ಕಾಮ್ಯವಿದು
ಎಂದಿನಂತಿರ್ದೊಂದು ದಿನ ಚಿಂತಿಸಿದನಾತ
ನಿಂದು ದೂಷಕರನಿಕ್ಕುವುದಕ್ಕೆ ತಕ್ಕಾಯುಧವನು ರಚಿಸುವೆನೆಂದನು ೪

ಎನ್ನನಿಷ್ಠೆಯೆನಿಪ್ಪ ಘಟ್ಟಿಯಂ ತಾಂ ಕೊಂಡು
ಎನ್ನ ಭಯಭಕ್ತಿಯೆಂಬಿಕ್ಕುಳದಿ ಪಿಡಿಕೊಂಡು
ಅನ್ಯ ಭೂಮಿಗಳಿಗೆ ನಿಷ್ಠುರನುಡಿವ ನುಡಿಯೆಂಬ ಕಿಚ್ಚಿನಿಂದವನು ಕಾಯ್ಸಿ
ಗನ್ನವಹ ಮಾಯ್ಗಳುಕದಿಹ ಧೈರ್ಯದಡಿಯ ಮೇ
ಲಿನ್ನಿರಿಸಿ ನಿತ್ಯವೆಂದೆಂಬ ಚಮ್ಮಟಿಗೆಯಿಂ
ದಿನ್ನದಂ ಪೊಯ್ದು ಸತ್ಯದ ಹದದ ನೀರೂಡುತುಗ್ರ ಸಾಣೆಯಲ್ಲಿ ಮಸೆದು ೫

---

೧ ವ (ಹ) ೨ ದಯ್ದಡಿಯ ಮಾಲಿನಿನ್ನಿ (ಹ)

ವೀರಭದ್ರಂ ಮಾಡಿಕೊಟ್ಟನೆಂಬಂದದಿಂ
ಧಾರುಣಿಗೆ ಮೆರೆವ ಕೊಡಲಿಯ ತಂದು ಲಿಂಗದೆಡು
ರಾರಾಜಿಪಂತಿಟ್ಟು ನಿತ್ಯನೇಮಂಗಳಂ ಮಾಡುತ್ತ ತಲ್ಲಿಂಗದ
ಸಾರಪ್ರಸಾದಮಂ ಸವಿದು ಪರಶುವ ಪಿಡಿದು
ವೀರನಹನಿರಿಭಕ್ತ ಬರುತೆ ನೊಸಲೊಳು ಭಸಿತ
ಧಾರಿಗಳ ಕಂಡು ಹರುಷಂ ಬಡುತೆ ಶಿವಶಿವಯೆನಲ್ಕಲ್ಲಿ ನಲಿದುನಿಲುತೆ ೭

ಇಂತು ಶಿವಲಿಂಗಾರ್ಚನಾಸಕ್ತನಾಗಿರ್ದು
ಸಂತಸದಿ ಶಿವನನರ್ಚಿಸಿ ಮನೆಗೆ ಬರುತಿಸಲು
ಮುಂತೊರ್ವ ಸವಣನಂ ನೋಡೆ ಪಣೆಯಲ್ಲಿ ಏನಿಲ್ಲದುದನಂ ನಿಟ್ಟಿಸಿ
ತಾಂ ತವಕದಿಂದವನಿಗೆಂದನೆಲೆಲೇ ನರಕಿ
ನೀಂ ತೀವ್ರದಿಂದಿದಂ ಹಿಡಿಹಿಡಿ ವಿಭೂತಿಯಿದೆ
ಚಿಂತಿಸದೆ ಧರಿಸಿದಂ ಕೊಳ್ಳೆನಲ್ಕೊಲ್ಲೆನೆನೆ ಒಲ್ಲೆಯಾ ಒಲ್ಲೆನೆನಲು ೭

ಕಡುಕೋಪದಿಂದಲಿರಿಭಕ್ತಯ್ಯ ತಾಂ ಪಿಡಿದ
ಕೊಡಲಿಯಿಂದಾ ಜೈನನುರುಶಿರವ ಪರೆಗಡಿದು
ಕೆಡಹಿದಂ ರುಂಡಮುಂಡಗಳಿಳೆಗೆ ಬಿದ್ದವಿನ್ನೇನೆಂಬೆನದ್ಭುತವನು
ಒಡನೆ ನೆರೆನೆರೆಯೆಂದು ನೆರೆದುದಾತನ ಕುಲಂ
ಕಡುಶೋಕದಿಂದೆ ಪುರದೊಳಗಿಹ ಸ್ತ್ರೀಪುರುಷ
ಕಿರೊಡಗೊಂಡು೩ ನಡೆ ಚೋಳನಲ್ಲಿಗೆನುತಾ ಶಿರಂ ಶರಿರವಂ ಪೊತ್ತರವರು ೮

ಬಂದು ಚೋಳನ ಸಭಾಮಂದಿರದ ಮುಂದಿರಿಸಿ
ನಿಂದು ಮೊರೆಯೋ ಎನಲ್ಕವನು ಕೇಳಿದನಿದೇ
ನೆಂದು ಎಲೆರಾಜ ಕೇಳಿರಿ ಭಕ್ತನೆಂಬವನು ತಲೆಗಡಿದನೆಮ್ಮವನನು
ಒಂದರಿಯದವ ನಿರಪರಾಧಿಯಪವನಂ ವೃಥಾ
ಕೊಂದನಿರಿಭಕ್ತನೆನಲಾ ರಾಯ ಮನದೊಳಾ
ನಂದವಂ ತಾಳಿ ಬರಿಗೋಪದಿಂದಿರಿಭಕ್ತರಂ ಕರೆಸಿ ಕೇಳ್ದನಂದು ೯

---

೧ ಲ (ಹ) ೨ ಡೆ (ಜ) ೩ x (ಹ)

ಇರಿಭಕ್ತರೇ ಇಂತು ಹಿಂಸೆಯಂ ಮಾಳ್ಪರೇ
ಅರಿವೊಡಾತನ ಮೇಲೆ ತಪ್ಪುಂಟೆ ಪೇಳಿರೇ
ಪರಮಯೋಗ್ಯವೆ ನಿಮಗಿದಂ ಪೇಳಿರೆನಲು ಇರಿಭಕ್ತಯ್ಯನುರಿದೇಳುತೆ
ಧರಣಿಪತಿ ಚೋಳ ಕೇಳ್ನೈ ನಿನಗೆ ಮತಿಯಿಲ್ಲ
ನೆರೆ ಭಕ್ತಿಯುಕ್ತಿಯೆಂಬುವದದೆಳ್ಳನಿತಿಲ್ಲ
ನರಕಿ ಜೈನನ ಒರಿಯ ಹಣೆಯನದನೆಂತೀಕ್ಷಿಪೆಂ ತಪ್ಪನೆಂತೆಂಬೆನು ೧೦

ಭಸಿತಮುಮನಿಡಲೆಂದು ಭಾಳಮಂ ಮಾಡಿದಂ
ಎಸೆಯೆ ತುತಿಯಿಸಲೆಂದು ಜಿಂಹ್ವೆಯಂ ಮಾಡಿದಂ
ಕುಶಲದಿಂದೆನ್ನನರ್ಚಿಸಲೆಂದು ದಿವ್ಯವೆನಿಸಿಪ ಕರಂಗಳಂ ಮಾಡಿದಂ
ಒಸೆದೆನ್ನನೀಕ್ಷಿಸಲೆನುತ್ತಕ್ಷಿಯಂಗೈದ
ನಸಮಾಕ್ಷನಿಂತುಗೈದನ ಮರೆದರೀ ದ್ವಿಪದ
ಪಶುಗಳಿವರಂ ಕಂಡು ಸೈರಿಸುವದೆಂತೆನಗೆ ಮತ್ತೆನ್ನ ಶಪಥಕೇಳಾ ೧೧

ಸಡಗರದ ಭಸಿತವಿಲ್ಲದನ ಹಣೆಯಂ ಕಂಡು
ಇಡುವಿಭೂತಿಯನೆಂದು ಕೊಡುವೆನಿಡಲೊಲ್ಲದಡೆ
ತಡವಿಲ್ಲದೈದು ಕೊಂಡುಂ೧ ಕಳೆವೆನವನ ಜೀವವನು ನಾನುಳಿಸಲುಂಟೆ
ಮೃಡನಾಜ್ಞೆಯೆನಗಿಂತು ಎನ್ನಶಪಥವಿದಿಂತು
ನುಡಿದಂತೆ ನಡೆವೆನಲ್ಲದೆ ಬಿಡೆನಸಲ್ಕರಸ
ಕಡು ಹೆದರುತಾಗಳಿರಿಭಕ್ತಂಗೆ ಬಿನ್ನಪಂಗೈದನತಿವಿನಯದಿಂದೆ ೧೨

ಎಲೆದೇವ ಕೇಳಿರೀ ಮಡಿದವಗೆ ಭಸಿತವಿಡೆ
ಘಳಿಲನೆಳ್ದಪನೇನಿದಂ ಪೇಳಿರೈಯೆನಲು
ಒಲವಿಂದಲವನ ಬಂಧುಗಳೆಲ್ಲ ಭಕ್ತರಾಗಲ್ಕಿವನನೆತ್ತಬಹುದು
ಚಲದಿಂದಿವರು ಒಲ್ಲೆವೆನಲವಂ ಬದುಕನಿದು
ತಿಳಿಯೈ ಮಹೀಶ ಎನೆ ನೇಹಿತರಿದಂ ಕೇಳ್ದು
ಅಳಿದವಂ ಬದುಕಿದಡೆ ಸಾಲ್ಗು ಭಸಿತಂ ಧರಿಸಿ ಭಕ್ತರಾವಹೆವೆಂದರು ೧೩

---

೧ ದು (ಹ)

ಭಸಿತಮಂ ಭಾಳದೊಳಗೆಲ್ಲರುಂ ನಲಿದಿಟ್ಟು
ಪಶುಪತಿಯೆ ಶರಣೆನುತೆ ಸಕಲರಿರಿಭಕ್ತರ್ಗೆ
ಒಸೆದು ಸುತರೆನಿಸಲಾ ಭಕ್ತಕಡುಪೋಪದಿಂ ರುಂಡಮುಂಡಗಳನಿಟ್ಟು
ಮಿಸುಪ ಪರಶುವನು ಮುಟ್ಟಿಸಲಾತ ನಿದ್ರೆತಿಳಿ
ದೊಸೆದೇಳುವಂತೆದ್ದು ಮೈಯಿಕ್ಕಲೆಲ್ಲರತಿ
ಹಸನಮುಖರಾದರವನಿಪ ಸಂತಸಂಬಟ್ಟು ಪರುಷ ಪರಶು ವಿದೆಂದವನು ೧೪

ಎಲ್ಲರಿಂ ನುತಿಗೊಳುತ್ತಿರಿಭಕ್ತ ಬರುತಿರ
ಲ್ಕಲ್ಲಲ್ಲಿ ಭವಿಗಳೋಡುತ್ತಿರ್ಪರ್ಗರತಿಭಯದಿ
ಫುಲ್ಲಶರಹರನಣುಗನೀತನೆನುತಾತನಂ ಭಕ್ತತತಿ ನುತಿಸುತಿಹುದು
ಅಲ್ಲಿಂ ಮೊದಲ್ಗೊಂಡು ಪುರದೊಳಗೆ ಭಕ್ತಜನ
ದುಲ್ಲಾಸ ಮಿಗಿಲಾಯ್ತು ಭಕ್ತಿವೆಗ್ಗಳವಾಯ್ತು
ಎಲ್ಲಿನೋಡಿದಡಲ್ಲಿ ಶಿವನೆಂಬ ನುಡಿಯಾಯ್ತು ಇತರಕುಲವಿಲ್ಲದಾಯ್ತು ೧೫

ಈ ತೆರದೊಳರವತ್ತು ವತ್ಸರಂ ನಡೆವುತಿರೆ
ಓತಿರದೆ ದಿನದಿನಕೆ ಭಕ್ತಿಪಿರಿದಾಗುತಿರ
ಲಾತನಿರಿಭಕ್ತಯ್ಯನೊಂದುದಿನ ಲಿಂಗಾರ್ಚನೆಯನೆಸಗಿ ಬರುತಿರಲ್ಕೆ
ಪೂತಾಂಗನೊರ್ವ ಶಿವಬ್ರಾಹ್ಮಣಂ ದಿವ್ಯ
ಜಾತಿಮಲ್ಲಿಗೆಗಳಂ ತುಂಬಿಗಳ್ಮುಟ್ಟದತಿ
ನೂತನಾಬ್ಜಂಗಳಂ ಪರಿಮಳವನೊಸರ್ವ ಪೊಸಪೂಗಳ ಕರಂಡಗೆಯನು ೧೬

ಪಿಡಿದು ತತ್ಪುರದ ಲಿಂಗಾರ್ಚನಕ್ಕೆಂದು ತಾಂ
ಧಡಧಡಿಸಿ ಬೀದಿವಿಡಿದೈತರಲ್ಕನಿತರೊಳ್
ಪೊಡವಿಪನ ಸೊಕ್ಕಾನೆ ಮಾವುತನ ಸೀಳ್ದು ಸಿಕ್ಕಪರನುಂ ಸೀಳುತ್ತಲೀ
ಕಡುರೌದ್ರವೇರಿ ಬರಲಾ ಪಾರ್ವನಂ ಕಂಡು
ಬಿಡದೆ ಬೆಂಬತ್ತಿ ಬರಲವನೋಡುತಂಜುತಂ
ಒಡನೆ ಶಿವಶಿವಯೆನುತೆ ಶಿವದಿಡಲ್ಕಾ ಧ್ವನಿಯನಿರಿಭಕ್ತರುಂ ಕೇಳ್ದರು ೧೭

೧ ರ್ದ (ಹ)

ಕೇಳುತ್ತೆ ಕೆಂಡಮಂ ಮೆಟ್ಟಿದೊಲು ಕೋಪಮಂ
ತಾಳುತ್ತೆ ಮರುಗುತ್ತೈತಂದಿದಂ ಕಂಡು ಕ
ಟ್ಟಾಳುಗಳ ದೇವನಾದಿರಿಭಕ್ತನಾ ಗಜದ ಶುಂಡಾಲಮಂ ಪಿಡಿವುತೆ
ಬೀಳೆನುತ್ತಾ ಕೊಡಲಿಯಿಂ ಗಜದ ಮಸ್ತಕದ
ಮೇಲೆ ಪೊಯ್ಯಲ್ಕೆ ದೊಪ್ಪೆಂದುರುಳುತಳಿದುದದು
ಪೇಳಲೇನಾತನ ಪರಾಕ್ರಮುವನೀ ವಾರ್ತೆ ಚೋಳನಲ್ಲಿಗೆ ಪೋದುದು ೧೮

ಆನೆ ಸತ್ತುದು ದೇವ ಕೊಂದನೊರ್ವಂ ಭಕ್ತ
ನೇನೆಂಬೆನಾತನಂ ನೋಡಬಾರದ ಭಕ್ತ
ತಾನಂಜುತೊರ್ವ ಪಾರ್ವಂ ಶಿವದಿಪಲ್ಕೇಳುತಾತನೈತಂದು ಕೊಂದಂ
ಏನಪ್ಪುದಿಂತಿದಕ್ಕಾಜ್ಞೆಯೆಸಲಾ ಚೋಳ
ಭೂನಾಥನಂಜುತ್ತಲಾನೆಯಂ ಕೊಂದವಂ
ಮಾನವನೆ ಪುಸಿನುಡಿಯಿದಂ ಬಲ್ಲನೀಶ್ವರನೆನುತ್ತಾತನೈತಂದನು ೧೯

ಬರೆ ಕಂಡನಾ ಗಜಾಸುರನ ಸಮ್ಮುಂದೆಗೆವ
ಹರನೀತನೆನುತೆ ವರಪರಶುವಂ ಪಿಡಿದು ಮು
ತ್ತುರುರೌದ್ರರೂಪಿನಿಂದಿರ್ದ ಇರಿಭಕ್ತರಂ ಕಾಣುತ್ತ ಸೈಗೆಡೆದನು
ಕರುಣಸೈದೇವ ಕಾಲಾರಿಸ್ವರೂಪನೀಂ
ನೆರೆಭಕ್ತರಣುಗನಾಂ ತಪ್ಪೆನ್ನೊಳುಂಟದಂ
ಸ್ಮರಿಸದಿರು ತಂದೆ ಭೃತ್ಯಾಪರಾಧ ಸ್ವಾಮಿನೋ ದಂಡ ಎಂದಿರ್ದುದು ೨೦

ಇನ್ನು ಗಜದಲ್ಲಿ ತಪ್ಪಿಲ್ಲವೆನಗೆಂಸು ದಂಡ
ಎನ್ನತಲೆಯಂ ಕಡಿವುದೀ ಕೊಡಲಿಯಿಂದೆಂದು
ತನ್ನ ತಲೆಯೊಡ್ಡಿ ಕೊಂಡಿರೆ ಚೋಳನೃಪನಂದು ಕಂಡು ಕಡುಭಯದಿಂದಲೀ
ಇನ್ನಿದಕ್ಕೇಂ ಗೈವೆನೆನುತಲಿರಿಭಕ್ತಯ್ಯ
ನುನ್ನತದ ಚಿಂತೆಯಿಂದೀ ಭಕ್ತನಾನೆಯಂ
ಮನ್ನಿಸದೆ ಕೊಂದೆನು ವಿಚಾರಿಸದೆ ಕೋಪದೊಳು ಬೆಂದೆನೆಂದಿಂದು ಮೊದಲು ೨೧

---

೧ ಳ್ದ (ಹ)

ಇಲ್ಲಿ ಭಕ್ತರ ನಿಂದೆಯೆಲ್ಲ ಮಾಳ್ಪುದು ವೀರ
ಒಲ್ಲದೀ ಭಕ್ತರೊಳು ಮಾಳ್ಪುದೇ ವೀರತ್ವ
ವಲ್ಲಲ್ಲ ಸುಡುಸುಡಿನ್ನೇಕೆ ಜೀವನವೆಂದು ನುಡಿವುತಿರಿಭಕ್ತ್ತನಂದು
ಅಲ್ಲಿ ಕೈಯೆತ್ತಿ ತನ್ನಂ ಪೊಯ್ದುಕೊಳಲೆಂದು
ಸಲ್ಲಲಿತ ಕೊಡಲಿಯಂ ಪಿಡಿದೆತ್ತಲಾನು ಕರ
ಪಲ್ಲವದಿ ಕೊಡಲಿಯಂ ಗಗನದೊಳು ಪಿಡಿದಿರ್ದನಣುವನಿತ ಚಲಿಸದಂತೆ ೨೨

ಬಿಡುಬಿಡಾರೋ ಪಿಡಿದರೆಂದು ಮೇಲಂ ನೋಡೆ
ಒಡನೆ ಸಂತಸದಿಂದೆ ನಾನಲ್ಲಿ ತೋರಿದೆಂ
ಜಡೆಯಿಂದೆ ಜಡೆಯೊಳಿಹ ವನಿತೆಯಿಂದಲಾ ಜಡವನಿತೆಯಳ ನೆರೆಯೊಳು
ಬಿಡದೊಪ್ಪುತಿರ್ದ ಪೆರೆಯಿಂದಲಾ ಪೆರೆಗದಿರ
ಸಡಗರದಿ ಪಜ್ಜಳಿಸಿ ತೋರ್ಪೈಮೊಗಂಗಳಿಂ
ವಿಡಿದ ದಶಭುಜಗಳಿಂದೊಪ್ಪಿರ್ದ ನಿಜರೂಪಮಂದು ನಾಸಿರಿಭಕ್ತಗೆ ೨೩

ಸುರಿದುದಂಬರದಿಂದೆ ಪೂಮಳೆಯನಲ್ಲಿ ಪರಿ
ಪರಿಯ ಭೇರೀರವಂ ಪೊಣ್ಮಿತ್ತು ಮತ್ತೆ ಗಣ
ವರರ ಸಂದಣೆಯಿಂದೆ ನಂದೀಶ ದಿವ್ಯ ಪುಷ್ಪಕವೆರಸಿ ಬರಲಲ್ಲಿಗೆ
ಸರಸದಿಂದಿರಿಭಕ್ತನಂ ನಾನು ಕೊಂಡಾಡಿ
ಭರದಿಂದೆ ಬಿಗಿಯಪ್ಪಿ ಪೊಸವಿಮಾನದೊಳು ಕು
ಳ್ಳಿರಿಸಿ ಕೈಲಾಸಕ್ಕೆ ಕೊಂಡೊಯ್ದು ಗಣಪದವಿಯನ್ನಿತ್ತೆ ಸೌಂದರೇಂದ್ರ ೨೪

ಇದರಿಂದಲೆನ್ನಭಕ್ತರು ಮಹಾಧೀರರತಿ
ಚದುರರಗಣಿತ ಸುಗುಣ ಪುಂಜರರಿವಾದಿಕುಲ
ಮದಮರ್ದನರು ಮಹಾತೇಜೋನಿಧಿಗಳತುಲದಾತರಧಿಕ ಪುನೀತರು
ಸದಯರಾರಾಜಿತರು ಸತ್ಯಾನ್ವಿತರು ಶುಭಾ
ಸ್ಪದಚರಿತರೀ ಪುರಾತನರ ಪರುಷೋಪಮದ
ಪದಪದ್ಮಗಳನ್ನೆದೆ ನಂಬು ಮತ್ತಂ ನಂಬು ನಂಬು ನಂಬಯ್ಯ ನಂಬಿ ೨೫

ಒರೆವೆನಾಲಿಸು ನಂಬಿ ಚೋಳದೇಶದೊಳು ಮ
ತ್ತಿರುತಿರ್ದುದೊಂದು ರಾಜಾಧಿರಾಜಮೆನಿಪ್ಪ
ಪುರವದಕಧಿಪ ಚೋಳಭೂಪನಿರುತಿರ್ದನಾ ಪುರದೊಳಿಹನೊರ್ವಭಕ್ತಂ
ಸರಸದಿಂದೇಣಾದಿನಾಥನೆಂದೆಂಬುವ ಪೆ
ಸರಿನಿಂದೆ ಕರೆಸಿಕೊಳುತಿರ್ದು ಭಕ್ತರ್ಗೆ ತಾಂ
ಪರಿಪರಿಯೊಳಾರಾಧಿಸಲ್ವೇಳ್ಕುಮೆಂದು ಮನದೊಳು ತಾನು ನೆನೆದನಂದು ೨೬

ಎನ್ನೊಡೆಯರುಂಡೊಡೆನ್ನಾಳ್ದನೀಶಂ ತಣಿವ
ನೆನ್ನೊಡೆಯರುಂಡು ತಣಿಯಲ್ಕೀಶತಾಂ ಕುಣಿವ
ನಿನ್ನಿದಕೆ ಹೊನ್ನನಾರ್ಜಿಸುವ ತೆರನೇನೆಂದು ತನ್ನೊಳು ಹಲವು ನೆನೆನೆನೆವುತೆ
ಅನ್ಯರಾಶ್ರಯಬೇಡ ಕೃಷಿಕಕರ್ಮಂ ಬೇಡ
ಮನ್ನಣೆಯ ವಾಣಿಜ್ಯವದು ಬೇಡ ದಾನದಿಂ
ದಿನ್ನು ಸಂಪಾದಿಸುವದದುವೆ ಮುನ್ನಂ ಬೇಡವಿನ್ನಿದಕ್ಕಾವ ಪರಿಯಂ ೨೭

ಮಾಡಲಿನ್ನೇನು ಭಕ್ತರ ಮನಂ ದಣಿವೊಲುಣ
ನೀಡಲಿನ್ನೇನು ಎನಗೊಂದುವುಂ ಕಾಣದಿ
ನ್ನಾಡಿ ಫಲವೇನು ಶಿವನೆ ಬಲ್ಲನೆನುತೆ ಚಿಂತಿಸುತಾತ ಪಟ್ಟಿರ್ದನು
ಗಾಢದಿಂ ಸ್ವಪ್ನದೊಳು ವೀರೇಶ ಬಂದಂಜ
ಬೇಡವಲೆ ಮಗನೆ ಕೈಕೊಳ್ಳಸಿಫಳಕವಿದನು
ರೂಢಿಯೊಳು ವೀರರಾರಾದಡೇನವನೊಡನೆ ಕಾದು ಭಕ್ತರ್ಗೆ ನೀಡು ೨೮

ಎನುತಲ್ಲಿ ಕೊಟ್ಟು ಶ್ರೀವಿರಭದ್ರಂ ಪೋಗೆ
ಕನಸಿನೊಳು ಬಂದಾಯುಧ ತನಗೆ ದಿಟವಾಗೆ
ಘನಮಹಿಮನೇಣಾದಿನಾಥನೊಲವಿಂ ನುತಿಸುತಿರ್ದನಾ ವೀರೇಶನಂ
ಎನಗಿತ್ತ ಕಾಳಗದ ಸುಗ್ಗಿಯಂ ವೀರರೊಳು
ಮನವೊಲಿದು ಕಾದಿ ಪೊಂಗಳನೈದೆ ತಂದು ಎ
ನ್ನನು ಕಾಯ್ವ ಶರಣರ್ಗೆ ನೀಡುವೆನುಣಿಸುವೆನೆನುತ್ತ ಹರುಷಂದಳೆದನು ೨೯

ತಮ್ಮರಸಿಯರ್ಗಿದಂ ಪೇಳಲವರುಂ ಸಂತ
ಸಂ ಮಿಕ್ಕಿರಲ್ಕೀತನಾರಾಧನೋದ್ಯೋಗ
ವಂ ಮಾಡಲನುಗೈದನಂಗದೊಳು ಭಸಿತ ರುದ್ರಾಕ್ಷಿಗಳನುಂ ತಾಳುತೆ
ಗನ್ನವಹ ಸಿಡಿಲ ಚಕ್ಕಿಗಳೊಂದುಗೂಡಿದೊಲು
ಕಣ್ಣಡಲ್ಕೆವೆಗ್ಗಳುದುರುವವೆಂಬವೊಲವುಗ
ಳುನ್ನತದ ಶಬ್ದದಿಂ ಘುಡಿಘುಡಿಸಿ ಪಜ್ಜಳಿಸುವಸಿಫಳಕಮಂ ಕೊಳುತ್ತೆ ೩೦

ಷಡಗರದ ಮನವುಕ್ಕಿ ದೂಷಕರ ಗಂಡನೆಂ
ಬೆಡಗಾಲ ತೊಡಕಿಕ್ಕಿ ಶರಣರ ಚರಣಧೂಳಿ
ಯೊಡನೆ ತಿಲಕವನಿಕ್ಕಿ ತೋಳ್ಗೆ ವೀರಶ್ರೀಯ ಪಟ್ಟಮುಮನೊಲಿದು ಕಟ್ಟಿ
ಪಿಡಿದ ಫಳಕದ ಘಂಟೆ ಘಣಘಣಾಂ ಘಣಮೆನಲು
ತೊಡರ ಗೆಜ್ಜೆಗಳುಲಿವು ಘುಲುಘುಲು ಘುಲುಕ್ಕೆನಲು
ಒಡನೆ ಝಳಪಿಸುವಸಿಯ ಬೆಳಗು ಥಳಥಳಥಳತ್ಥಳಿಸಿತಿನ್ನೇವೇಳ್ವೆನು ೩೧

ವೀರಕಳೆ ನಳನಳಿಸಿ ಘುಳುಘುಳಿಸೆ ಸಾಸರನ
ವೀರರೊಡೆಯಂ ಬಂದನಮಮ ಶರಭನ ಮುದ್ದ
ವೀರನುರುವಣೆಯಿಂದೆ ಬಪ್ಪ ಬಿರಿಸಿನ ಗಾಳಿಗಿಕ್ಕೆಲದವರ್ಬೀಳಲು
ಸಾರತರ ಪಗಲುದೀವಿಗೆಗಳಿಂ ತರತರದ
ಭಾರಣೆಯ ಗುದ್ದಲಿಗಳಿಂದವ ಗದರಿಸುತಂ
ಕೇರಿಸುತೆ ಕೆದರಿಸುತೆ ವೀರರಂ ನೋಡುತಂ ಕಾಳೆಗಕೆ ಹಲುಮೊರೆವುತಂ ೩೨

ಫಳಕಾರ ಮತ್ತಗಜಸಿಂಹ ವಿಕ್ರಮನೆಂದು
ಫಳಕಾತ ಫಣಕವಂಬಕ ಗರುಡಬಳನೆಂದು
ಬಳಸಿನಿಂ ಕರೆವ ಕಹಳೆಗಳಖಿಳ ಸಂಭ್ರಮವೆಸೆಯೆ ವೀರನುಂ ನಗರಿಯೊಳ್
ಬಳವದ್ವಿಭವದಿಂದೆ ವೀರರಂ ಬಿಡದರಸಿ
ಕೊಳುತ ಬರಲಾರುಮಿಲ್ಲದಲಾಯ್ತು ಪಟ್ಟಣದಿ
ಬಳಿಕ ಕರಣಾದಿಗಳ ಸೋಂಕಿಲ್ಲದೆಡೆಯಾಡುತಿಪ್ಪ ಯೋಗಿಪನ ತೆರದಿ ೩೩

---

೧ ಯೊ (ಹ)

ಪರಿವೃತ್ತೈತಂದನೇಣಾದಿನಾಥಂ ಗೃಹಕೆ
ಕರಿಗೊರಳನಣುಗರ್ಗೆ ಮಾಡು ನೀನೆನಿತಕ್ಕೆ
ಮರಳಿನಾಂ ಪೋಗಿ ಕಾಪುತೆ ಭವಿಯು ಭವಗೆಡಿಸಿ ಬರ್ಪೆ ನಾನೆನುತೆ ತಮ್ಮ
ಅರಸಿಯುರ್ಗುಸಿರಿ ಚೋಳನ ಸಭಾಮಂದಿರವ
ಭರದಿಂದೆ ಪೊಕ್ಕುಂ ೧ಭುಜಾಸ್ಫಾಳನಂ೧ ಗೈದು
ವರವೀರಭದ್ರಂಗೆ ನಮಿಸಿ ಬಾಳುಗೆ ಭಕ್ತರೆನುತೀತನಿಂದಿರಲ್ಕೆ ೩೪

ಭೂಪಾಲನಹಚೋಳನೀ ಶರಣನಂ ಕಾಣು
ತಾ ಪರಮ ಸಂತೋಷದಿಂದೆ ತನ್ನಲ್ಲಿರ್ಪ
ಕೋಪಭರಭರಿತ ಮಾರಾಂಕದವನೊರ್ವನಿರಲವನನಾತಂ ಕರೆಸುತ
ಸೋಪಚಾರದೊಳವನ ಸಿಂಗರಿಸಿ ರೌದ್ರ
ಸ್ವರೂಪನಾದೀ ಶರಣನೊಳು ಕಾದೆನುತ್ತ ಬಿಡ
ಲಾ ಪುರುಷರೀರ್ವರ್ಗೆ ಕದನವಾದುದನದರ ಚದುರತ್ವ೨ವೇ೨ವೇಳ್ವೆನು ೩೫

ಏನೆಂಬೆನೇನೆಂಬೆನೇಣಾದಿನಾಥನಂ
ಆನರಿಯೆನಾನರಿಯೆನುರವಣೆಪಧೀರನಂ
ನೀನೀಕ್ಷಿಸೈಯೆಂಬ ಮಾತು ಮುಂಚಿತು ಮುಂಚಿತವನ ತಲೆಯುಂ ಕಳನೊಳು
ತಾನುರುಳಿ ಬಿದ್ದುದೊಂದೆಸೆಯಲ್ಲಿ ಮಸ್ತಕಂ
ಆ ನೆಲದೊಳೊರಗಿತೊಂದಸೆಯೊಳು ಕಬಂಧಮುಂ
ತಾನಿರದೆ ರಕ್ತ ಜುರಿಜುರಿಸುತ್ತಿಳಿವುತಿರ್ದುದಾ ರುಂಡಮುಂಡದಿಂದೆ ೩೬

ಹರಣವಾಕಾಶದ ವಿಮಾನದೊಳು ಸಲುತಲಿರೆ
ಭರದಿಂ೩ದಲವಕಿನಂ ರಜತಗಿರಿಗೆ ಕಳುಹುತಿರೆ
ವಿ೯ಚೋಳನೇಣಾದಿನಾಥಂಗೆ ಮಚ್ಚುತುಡುಗೊರೆಯೀಯಲೊಲ್ಲೆನಾನು
ಧರಣಿಪತಿ ಕೇಳಯ್ಯ ನಿನ್ನ ಮುಂದಣ ಸಮರ
ಭರವಲ್ಲ ಭಕ್ತರ್ಗೆ ನೀಡುವೀ ಕಾಯಕದ
ಧುರವಿದೆಂದರಿಯೆನಲ್ಕಾತನಾನೆಯನೀಯಲೀರುತ್ತೈತಂದನೊಲವಿಂ ೩೭

---

೧ ಭುಜಸ್ಫೋಟನಂ (ಹ) ೨ ನೇ (ಹ) ೩ ದಾಲಪ (ಹ)

ನಾನಾಶಿವಾರ್ಚನಂ ಮನೆಯೊಳಗೆ ಮಸಗುತ್ತಿರ
ಲಾನೆಯುನ್ನಿಳಿದು ಭಯಭಕ್ತಿಯಿಂ ಹರುಷದಿಂ
ತಾನಸಿಫಳಕಗಳನು ದೇವಾರ್ಚನೆಯ ಮನೆಯೊಳಿರಿಸಿ ನಡೆತಂದು ನಿಂದು
ಸಾನುರಾಗದಿ ದೇವಭಕ್ತರುಗಳಂ ಕಾಣು
ತಾನಂಪವಾಂತು ಎನ್ನೊಡೆಯರ್ಕೈತಂದರಿ
ನ್ನೇನೆಂಬೆನೆನ್ನ ಪುಣ್ಯದ ಬಾಳ್ಕೆಗೆನುತ ಕೊರ್ಬುತ ಪ್ರಬಳ ಪುಳಕಂಗಳಿಂ ೩೮

ಹೊರೆಯೇರುತಂ ಒಡೆಯರಂಘ್ರಿಗಳನುಂ ತನ್ನ
ಶಿರದೊಳಾಂತುಂ ಕಪೋಲದೊಳೊತ್ತುತಂ ಮತ್ತೆ
ಪರಿಪರಿಯೊಳುಂ ತೃಪ್ತಿಗೈಸುತ್ತೆ ವಿಜಯನಾಗೆಂಬ ಪರಕೆಯನು ಕೊಳುತೆ
ಸರಸದಿಂದಲ್ಲಿ ಪ್ರಸಾದಮುಂ ಕೊಂಡು ಸು
ಸ್ಥಿರಭಕ್ತಿ ಸುಜ್ಞಾನ ವಿರಿತಿಗಳನಲ್ಲಲ್ಲಿ
ಪರಿಶೋಭಿಪಂತಿಟ್ಟು ಭಕ್ತರ್ಗೆ ಪೊನ್ಗಳಂ ಕೊಟ್ಟರ್ತಿಯಿಂ ನೋಡುವಂ ೩೯

ಅಂಕವೆಂದಡೆ ಕಾದಿಕೊಂದು ಹೊನ್ನಂ ತಪ್ಪ
ಬಿಂಕದಿಂ ಭಕ್ತರ್ಗೆ ಮಾಡುತ್ತಲಿರುತಿರ್ಪ
ನುಂ ಕಾದಿದವರ ಸಂಸ್ಕೃತಿಯನಿಳುಹುತ್ತ ಮತ್ಪುರಕ್ಕೈದೆ ಕಳುಹಿಸುತ್ತ
ಶಂಕಿಸದೆ ನಾಲ್ವತ್ತು ವತ್ಸರಂ ಮಾಡುತಿರ
ಲುಂ ಕುವಲಯದೊಳಾರು ಗೆಲಲಾರದಿರುತಿರ
ಲ್ಕಂಕದೊಳು ಪ್ರಬಲನೊರ್ವಂ ಚೋಳನಿಗೆ ಶಸ್ತ್ರದಭ್ಯಾಸ ಗುರುವೈದಿದಂ ೪೦

ಬರಲವಂ ನೋಡುತೇಣಾದಿನಾಥನನಂದು
ವಿರಸದಿಂದೀತನೊಳು ಕಾಳಗಕೆ ಮಸಗಿ
ಸಿರ ಪೊಂಗಳಂಕಟ್ಟಿಊಳಿಗವನೈದಿಸುತಿರ್ದ ಬಿರುದಂ ಕಟ್ಟುತೆ
ಬರೆ ಕಾಣುತೇಣಾದಿನಾಥರಾತನನಲ್ಲಿ
ಅರಸ ಚೋಳನ ಮುಂದೆ ನೆಲಕಿಟ್ಟೊರಸುತವನ
ಬಿರಿದ ಕಟ್ಟಿರ್ದ ಪೊಂಗಳನೈದೆ ತಂದು ಭಕ್ತರ್ಗಿತ್ತರೇಣಾಧಿಪರ್ ೪೧

ಕಂಡು ಚೋಳಂ ಕೌತುಕಂಬಟ್ಟು ಮಿಗೆ ನೊಂದು
ಚಂಡಪ್ರತಾಪರೀ ಶರಣನಂ ಗೆಲಲು ಭೂ
ಮಂಡಲದೊಳಾರುಮಿಲ್ಲೆನುತಿರಲ್ಕಿತ್ತ ಸತ್ತಿರ್ದ ಗುರುವಿನ ಪುತ್ರನು
ದಿಂಡುರುಳುತಳಿದ ತಂದೆಯನೀಕ್ಷಿಸುತ್ತಲವ
ನಂಡಲೆವುತತಿ ದುಃಖದಿಂದೆ ಗೃಹಕೈತಂದು
ಚೆಂಡಾಗಿ ನಿಜಮಾತೆಗುಸುರಲೀರ್ವರು ನೊಂದು ಬೆಂದು ಸುಯ್ಯುತ್ತಿರ್ದರು ೪೨

ಬಲವಳಿದು ಚೇತನಂಗೆಟ್ಟು ಲಜ್ಜಾದಿಂದೆ
ಬಳಸಿ ಕರ ಕೊರಗುತ್ತೆ ಮರುಗುತ್ತೆ ಮುಳಿಸಿನಿಂ
ಲಲನೆ ಚಿಂತಿಸಿದಳೊಂದಂ ಮನದೊಳತಿಕುಟಿಲ ವಿದ್ಯವನದೇನೆಂಬೆನು
ಎಲೆ ಮಗನೆ ದೈವವಶದಿಂದೊಂದುಪಾಯುಮಂ
ಕಲಿಭಕ್ತನಂ ಗೆಲುವ ಪಾತಕ ಸಹಾಯುಮಂ
ಒಲವಿಂದೆ ಕಂಡೆನೆಲೆ ಕಂದಕೇಳೈಯೆನ್ನಯುಕ್ತಿಯಂ ಪೇಳ್ವೆ ನಿನಗೆ ೪೩

ಭಕ್ತನೆಂದಡೆ ತನ್ನ ಹರಣಮಂ ಸಲಿಸುವಂ
ಭಕ್ತವೇಷಂ ಕಂಡಪಲ್ಲಿ ಮನವನ್ನೀವ
ಭಕ್ತರಂ ಕಂಡಲ್ಲಿ ತರ್ಗುತ್ತ ಕುರ್ಗುತ್ತ ತನುವನೊಪ್ಪಿಸುವನದರಿಂ
ಯುಕ್ತಿಯಿಂ ಭಕ್ತನಾಗುತ್ತಾತನಂ ಕೊಲ್ಲು
ಶಕ್ತಿಯಿಂ ಗೆಲಲು ನಿನಗಳವಲ್ಲವೆನುತೀಂದು
ರುಕ್ತಿಯಂ ಪೇಳಿ ತನುಜನನೊಡಂಬಡಿಸಿದಳ್ ಮಾತೆಯುಹ ಪಾತಕಿಯುಳು ೪೪

ಇಂತಿದಂ ಕಂಡ ಬಳಿಕಭ್ಯಾಸವೇಕೆನುತೆ
[2]ಇಂತು ಬಟ್ಟೆಯು[1]ನರಿಯೆ ಕಲಿತನಂ ಬೇಡೆನುತೆ
ಪಂಥದಿಂದವನು ಸಾಸಿರ ಪೊಂಗಳೊ ಬಿರಿದ ಕಟ್ಟಿ ಹರಹಿಗರ ಕೂಡಿ
ಮುಂತೆ ಬೀದಿಗಳೊಳಗೆ ಬಿರಿದೆತ್ತಿ ಸಾರುತ್ತ
ಲಂತಲ್ಲದವನ ಬವರಂ ಹೊಗಳುತೈತರಲ್
ಸಂತಸದಲೇಕಾದಿನಾಥರಿದಕೇಳುತುಬ್ಬುತ್ತಾಗಳೈತಂದರು ೪೫

---

೧ ತ (ಹ)   ೨ ಯಿಂತುಬ್ಬಟೆಯು (ಹ)

ಬರೆಕಾಣುತಾ ಹೊನ್ನಪೊಟ್ಟಣಂ ಕೊಳುತಂದು
ಅರರೆಯೆನ್ನಾಳ್ವರ್ಗೆ ತೃಪ್ತಿಬಡಿಸುವೆನೆಂದು
ಭರದಿಂದಲರಸಿನರಮನೆಗೆ ನಡೆದೈತಂದು ಭಾ೦[ಷೆ]೧ಗಳನಿತ್ತರಿವರು
ಉರುಕಾಳೆಗಂ ನಾಳೆಗಿಂದು ಬೇಡೆಂದೆನಲು
ಮರಳಿ ಪೊರಮಟ್ಟೈದಿದಂ ಶರಣ ನಿಜಗೃಹಕೆ
ಪರಮ ಸಂತಸದಿಂದೆ ಭಕ್ತರುಗಳಂ ಕರೆಸಿ ಬಿನ್ನಪಂ ಗೈದನಂದು ೪೭

ಅವಧರಿಪುದೈ ದೇವ ಭಕ್ತರಿರ ನಾಳಿನಾ
ಹವವೆಂದಿನಂತಲ್ಲ ಸಮರವರಿ೨ದುರಿದೊಮ್ಮೆ
ಜವನಡ್ಡಬಂದಡಂ ಕಾದಿಗೆಲಿದಪೆ ನೋಡಿರೆನುತಂ ಗಣಾರಾಧನಂ
ತವೆಗೈದು ಮನವೊಲಿದು ತದ್ದಿನದೊಳುಂ ತಾನು
ಶಿವರಾತ್ರಿಯಂ ಮಾಡುತರುಣೋದಯದೊಳೇಳು
ತವಯುವದಿ ಭಸಿತ೩ಮುಃದ್ಧೂಳಿಸುತೆ ದಿವ್ಯರುದ್ರಾಕ್ಷಿಗಳನುಂ ತಳೆವುತೆ ೪೮

ಶರಣರಿಂಗೆರಗಿ ಬೀಳ್ಕೊಂಡು ನಡೆತಂದು ಭೂ
ವರನರಮನೆಯೊಳಿಪ್ಪ ಕಳನಂ ಪೊಗುತ್ತೆ ಹರ
ಹರಮಹಾದೇವ ಕರುಣಿಸು ಮಹಾದೇವಯೆನುತಂ ನುಡಿದು ನಿಂದಿರಲ್ಕೆ
ದುರುಳಮಾರಾಂಕನಿತ್ತಾಪಾದ ಮಸ್ತಕಂ
ವರಭಸಿತದಿಂ ಮುಳುಗಿದಂ ಮತ್ತೆ ಕಾಯದೊಳು
ತರತರದ ಸೋಪಾನವಿಟ್ಟಂತೆ ರುದ್ರಾಕ್ಷಿಗಳನಿಟ್ಟಲಂಕರಿಸಿದಂ ೪೯

ಕರುಣವಿಲ್ಲದ ಪಾಪಿ ವೇಷಮಂ ಕೈಕೊಂಡ
ದುರಿತಕಂಜದ ಖಳಂ ವೇಷಮಂ ಕೈಕೊಂಡ
ನೆರೆಕುಟಿಲಗುಣವನೊಳಗಿಟ್ಟು ಬರಿಯಂಗಕ್ಕೆ ಸದ್ವೇಷವಂ ತಳೆದನು
ಪರಮ ಸುಧೆಯಂ ತೋರಿ ವಿಷವನೀಡುವ ತೆರದಿ
ಸರಸ ಜಲವಂ ತೋರಿ ಉರಿಯನಪ್ಪಿಪ ತೆರದಿ
ಹೊರವೇಷಮಂ ತೋರಿ ಕೊಲುವೆನೆಂದೆಳಸುತವನಾಡಂಬರದೊಳೈದಿದಂ ೫೦

---

೧ ಷ (ಹ, ಜ) ೨ ವ (ಹ) ೩ ಮ (ಹ)

೧೦೫

ಅಲ್ಲಿ ಹರಿಗೆಗಳಿಂದೆ ಕಾಣಬಾರದ ತೆರದಿ
ಅಲ್ಲಿ ಬೆಳುಗೊಡೆಗಳಿಂ ಕಾಣಬಾರದ ತೆರದಿ
ಅಲ್ಲಲ್ಲಿ ಮುಚ್ಚಿಮುಸುಕಿಟ್ಟು ಬಂದಂ ಗೆಲ್ಲುವಾತುರದಿ ಮಚ್ಚರಿಸುತೆ
ಎಲ್ಲರುಂ ನೋಡುತಿರೆ ೧ಖಿಂಳನೊಳಗೆ ಬಂದು ನಿಂ
ದಲ್ಲಿ ಮುಸುಕಿರ್ದರಂ ತೆಗಿಸಿ ಪಿಡಿದಲಗಿನಿಂ
ದುಲ್ಲಾಸವೆನಿಪ ಸದ್ಭಕ್ತವೇಷದಲಿರಲು ಕಂಡರೇಕಾದಿನಾಥರ್ ೫೦

ಮತ್ತಸಿಫಳಕಮಲ್ಲಿ ಬಿಡಿಸುತೆ ಮನಂಗೊಂಡು
ಎತ್ತಣಿಂದೆತ್ತ ಬಿಜಯಂಗೈದಿರೆಲೆ ದೇವ
ಚಿತ್ತದೊಳಗಿರ್ದಂತೆ ಮಾಳ್ಪುದೆನ್ನಂ ದೇವ ಶೂಲದಿಂದೀ ತನುವನು
ಒತ್ತಿತಿವಿವುತ್ತ ಚುಚ್ಚುತ್ತ ಕೆಡಹೈ ದೇವ
ಅತ್ಯಧಿಕ ನೊಸಲ ಕಣ್ಣಿಂದೆ ಚುರ್ಚೈ ದೇವ
ಮತ್ತಗುಣದಿಂದಲೊತ್ತರಿಪ ಕಾಯವಿದೇಕೆ ಕಡಿದು ಕಡಿದಿಕ್ಕು ತಂದೆ ೫೧

ಎನುತೆ ಪುಳಕಿಸುತೆ ಒಪ್ಪಿಸಿಕೊಟ್ಟು ದೇಹಮಂ
ಮನವಾರೆ ಕೈಮುಗಿದು ನಿಂದಿರಲ್ಕಂಡವಂ
ಬಿನುಗು ಪಾತಕಿ ಬಂದು ಉರವನಿಮ್ಮೈಗಾಣಲಿರಿಪನಯ್ಯೋ ಭಕ್ತನಂ
ಮೊನೆಯಲಗು ಒಳಗಂ ಹೊರಗಂ ಪುಳಕವೀತಂಗೆ
ಘನಹರುಷವಾಗಿತ್ತದೇಕಾದಿನಾಥಂಗೆ
ಇನಿತಿರಿದು ಕೈಬಿಟ್ಟು ಪಾತಕಂ ಹಿಮ್ಮೆಟ್ಟಲಾಗಿ ಕುಸುಮದ ವೃಷ್ಟಿಯು ೫೨

ಕರೆದುದೀತನ ಮೇಲೆ ಶಿರದ ಶಶಿಯಿಂ ನೊಸಲೊ
ಳಿರುವಕ್ಷಿಯಿಂ ವ್ಯಾಳಕುಂಡಲಗಳಿಂ ಕೊರಳ
ಗರಳದಿಂ ದಶಭುಜಗಳಿಂ ಪಂಚಮುಖಗಳಿಂ ಪೊದೆದ ಪುಲಿದೊವಲಿನಿಂದ
ಖರಕರ ಸುಧಾಕರ ಸಹಸ್ರ ಕೋಟಿಪ್ರಭೆಗೆ
ಹಿರಿದೆನಿಪ ದಿವ್ಯದೀಧಿತಿಯಿಂದಲಾನಲ್ಲಿ
ಮೆರೆವುತ್ತ ಗಿರಿಜೆಯಂ ಕರೆವುತ್ತ ಸಂತಸಂ ಸುರಿವುತ್ತಲಿರುತಿರ್ದನು ೫೩

---

೧ ಕ (ಜ)

ನೊಂದೆಯ್ಯ ನೊಂದೆ ಮಗನೇ ಎನ್ನವೇಷದಿಂ
ನೊಂದೆಯ್ಯ ಎನ್ನವರವೇಷವಿಶ್ವಾಸದಿಂ
ಎಂದಾತನಂ ನಾನು ತೆಗೆದಪ್ಪುತಲಗನೆನ್ನಯ ಕರದಿ ಕಿತ್ತುಬಿಸುಟಿ
ಅಂದಗಜೆ ನೋಡಿ ಮೈದಡವಿ ಕೊಂಡಾಡುತ್ತೆ
ನಂದೀಶ ನೋಡೆನುತೆ ಗಿರಿಜೆ ಸೈರಿಸದಳಲಿ
ನಿಂದಲಾ ಮಗನ ತನುವಿನ ಘಾಯಮಂ ನೋಡಿ ನೋಡಿ ಸಂತೈಸುತಿರಲು ೫೪

ಕುಡು ಮಾರಾಂಕದವನಿಂತಪ್ಪ ಪಿರಿಯಕರಂ
ಕಂಡು ಮುನಿದಿರಿದೆನೆನಗೆಂತಪ್ಪುದೋ ಎನುತೆ
ಚಂಡ ವೈರವನವಂ ಮರೆದು ತಳೆದಿಪ ಭಕ್ತವೇಷವಿನ್ನೆಂತಾದಡಂ
ಕೊಂಡೆನಿದನಂ ಬಿಡೆನೆನುತೆ ವಿರಕ್ತಿಯನು ಕೈ
ಕೊಂಡನವನುಂ ಸಜ್ಜನರ ಹಗೆತನಂ ನಾಡೆ
ಮಂಡಿತವದೆನಿಸಿತ್ತೆಲೈ ಇತ್ತಲೇಣಾದಿನಾಥನಂ ಭವವೀತನಂ ೫೫

ಸುರುಚಿರವಿಮಾನದೊಳಗೊಪ್ಪಿನಿಂ ಕುಳ್ಳಿರಿಸಿ
ಹರುಷಂ ಮಿಗಲು ಎನ್ನ ನೋಟದೊಳಲಂಕರಿಸಿ
ಪರಚೋಳನತಿಕೌತುಕಂಬಟ್ಟು ಬೆರಗಾಗುತಿರೆ ದುಂದುಭಿಸ್ವನದೊಳು
ಪರಮಗಣವರರೊಡನೆ ಕೈಲಾಸಕೈತಂದು
ಸರಸದಿಂದೇಣಾದಿನಾಥಂಗೆ ಗಣಪದವ
ಭರದಿಂದಲಿತ್ತೆನದರಿಂದಲೀ ಭಕ್ತನಂ ಪೊಗಳುತ್ತಿರೈ ಸೌಂದರ ೫೬

ಅಂತು ಸಂಧಿ ೯ ಕ್ಕಂ ಪದಗಳು ೩೮೭ ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

# ಸಂಧಿ : ೧೦

**ಸೂಚನೆ :** *

ಜೀವಜಾಲಕ್ಕೆಲ್ಲ ಕಣ್ಣಿತ್ತ ಶಿವಮಹಾ
ದೇವಂಗೆ ತನ್ನ ಕಣ್ಗಳನಿತ್ತ ಕಣ್ಣಪ್ಪ
ದೇವನಿತಿಹಾಸಮಂ ಕೇಳುತ್ತ ಸಂತಸಂದಾಳ್ದನಾ ಸೌಂದರೇಂದ್ರ

ಉಲ್ಲಾಸದಿಂದಾಲಿಸೈ ನಂಬಿ ಭಕ್ತರೊಳು
ಬಲ್ಲಿದನ ಕಥೆಯು ನಾನೊರೆವೆ ಚೋಳಾವನಿಯೊ
ಳುಳ್ಳ ಪುರಗಳೊಳಧಿಕವೆನಿಸಿತ್ತು ತಿರುಕಾಳಹಸ್ತಿಯೆಂದೆಂಬ ಪುರವು
ಅಲ್ಲಿರ್ಪನೊರ್ವಂ ಶಬರವಂಶದೊಳು ಜನಿಸಿ
ಎಲ್ಲಾ ಪುಳಿಂದರ್ಗೆ ನಾಯಕಂ ತಾನೆನಿಸಿ
ಸಲ್ಲಲಿತ ಕಣ್ಣಪ್ಪನೆನಿಸಿ ಮೃಗಯಾತ್ರಾ ವಿನೋದದಿಂದಿರುತಿರ್ದನು ೧

---

* ಹ ಪ್ರತಿಯಲ್ಲಿ ಸೂಚನೆಯ ಪದ್ಯವಿಲ್ಲ

ಕಾರಣಿಕವೆಂದರಿಯಬಾರದಾತನ ವೇಷ
ವಾರಯ್ಯೆ ಕಾರ್ಮುಗಿಲ ಮರೆಯ ಸೂರ್ಯನ ವೇಷ
ವಾರಾಜಿಸುತ್ತಿರ್ಪವೊಂದೊಂದು ಮೃಗದ ಜನ್ಮಂ ಋಷಿಗಳೆಲ್ಲರರಿಯೆ
ಚಾರಣಂ ಗೈವುತಿರುತಿರ್ದರೀಮಹಿಮನಹ
ಕೈರಾತಪತಿ ಕಣ್ಣನಾಡುವ ಪೊಲಂಗಳೊಳ್
ರಾರಾಜಿಸುತ್ತೆ ಮೃಗಕುಲವಿರ್ಪುವಾತನ ಚರಿತ್ರವದನೇವೇಳ್ವೆನು ೨

ಹುಸಿಯನುಡಿಯೆಂಬುದಂ ಕನಸಿನೊಳು ಕಂಡರಿಯ
ಎಸೆವ ದಿಟವೆಂಬುದಂ ಮನಸಿನೊಳು ನೆನೆದರಿಯ
ವಸುಧೆಯೊಳು ಬೇರೀತ ದೇವರೆಂಬುದನರಿಯ ಹಿರಿಯರೆಂಬುದನರಿಯನು
ಹಸಿವಿಂಗೆ ತೆರಹಿಲ್ಲ ವಿಷಯಕ್ಕೆ ತೆರಹಿಲ್ಲ
ಬೆಸನಕ್ಕೆ ತೆರಹಿಲ್ಲ ಬೇಂಟೆಗೆಯು ತೆರಹಿಲ್ಲ
ಕುಶಲದಿಂ ತನ್ನತಾನರಿಯನಿದಿರುಂ ಪರಿಕಿಸಲ್ಕರಿಯನೇನೆಂಬೆನು ೩

ಇಂತಿರ್ದು ಬೇಂಟೆಗೆಂದನುವಾಗಿ ಪೊರಮಟ್ಟು
ಚಿಂತಿಸದೆ ಬಪ್ಪ ಬೇಡರ ಪಡೆಯೊಳಳವಟ್ಟು
ತಾಂ ತಳೆದ ವೇಷವದು ಜುಂಜುದಲೆ ಕೆಂಗಣ್ಣು ಗುಂಜಾಭರಣದಿಂದಲಿ
ಸಂತಸದಿ ತೊಟ್ಟ ಎರೆಗುಪ್ಪಸಂ ತಾಂ ಮೆರೆಯ
ಲಂತಲ್ಲದಂ ತಂಲೆಂ ಉರದ ಕರದ ಕವಡಿಕೆಗ
ಳಂ ತೊಟ್ಟು ನಲಿದು ಬಿಗಿದುಟ್ಟ ತೊಗಲುಡಿಗೆಯಲಗುಗಳೆಸೆಯಲಿಂತಲ್ಲದೆ ೪

ಮೊಗದೊಳೊಪ್ಪುವ ವಿಭೂತಿಯ ತುಂತುರುಗಳೆಸೆಯೆ
ನೆಗೆದು ಕಟ್ಟಿದ ನೆತ್ತಿಗನ್ನಡಿ ಕರಂ ಪೊಳೆಯೆ
ಸೊಗಸಿನಿಂ ಪಿಡಿದ ಬಿಲ್ಲೆಡಗೈಯೊಳೊಪ್ಪುತಿರೆ ಬೆನ್ನೊಳಿಳುಹಿದ ಚಮರಿಯಿಂ
ಝಗಝಗಿಸುವಂಬುಗಳ್ಪಂಚಾಕ್ಷರಿಯನುಗುಳೆ
ನಗುತಾರ್ದು ಪೊಡಮಡಲ್ಬಿಲ್ಲರೆಲ್ಲರ್ಪೊಗಳೆ
ಮಿಗೆತರುಗಿರಿಲತಾಳಿಯಿಂದಿಡಿದಡವಿಯಲ್ಲಿ ತೋಹುಸೋಹುಗಳಿಂದಲಿ ೫

---

೧ ಲೀ (ಹ)

ಪರಿಪರಿಯನೀಕ್ಷಿಸುತ್ತುರು ಬೊಬ್ಬೆಗಳನಿಕ್ಕಿ
ತಿರುಕಾಳಹಸ್ತಿಮಲೆಯಂ ನೋಡುತ್ತೈತರಲ್
ನೆರೆನೆರೆದು ನೋಳ್ಪ ಕಾರಣಿಕ ಮೃಗಗಳನೆಲ್ಲ ಕಂಡು ನೀಡಡಿಯನಿಟ್ಟು
ಶಿರಕುಗ್ಗಿ ತನುಬಾಗಿ ಪಂಡೆನೋಟಂಗಳಿಂ
ಭರದಿಂದೆ ಕಿವಿಗೆ ಬಲಗೈಕೇಳನಾರಿಯಂ
ತರುತಲಿರೆ ತವಕಿಸುವ ಕೂರಂಬುಗಳು ಬಿಡುಬಿಡೆಂಬಂತೆ ತೋರುತ್ತಿರೆ ೬

ಬಿಡುವುದೇ ತಾಗುವುದೊ ತಾಗುವುದು ನಡುವುದೋ
ನಡುವುದೇ ನೋಟವೋ ನೋಟವೇ ನಡುವುದೋ
ತೊಡಕರಿಯಬಾರದೆಂಬಂತಂಬುಗಳ ತೊಡುವಬಿಡುವ ಚಪಲತೆಯಿಂದಲಿ
ಒಡನೊಡನೆ ಮೃಗಕುಲವನೆಸುವ ಪರಿಪೊಸತಾಗೆ
ಪೊಡೆಯಲವು ಸ್ವರ್ಗಕ್ಕೆ ಹಾಱುತಿಪ್ಪವು ನಾಡೆ
ಕಡುಭಯದಿ ಮೃಗಕುಲಂ ಓಡಲೊಲ್ಲವು ಸಾವುದಕೆ ಸಂತಸಂ ಬಡುವವು ೭

ಕಂಡವಂ ಮರುಮೆಟ್ಟ ಮೆಟ್ಟಲೀಯದೊಲೆಸುವ
ಕಂಡವಂ ಹುಟ್ಟಿಹೊಂದಲ್ಕೀಯದಂತೆಸುವ
ಕಂಡ ಮೃಗಮಂ ತಪ್ಪದೆಸುವನವನಂ ತಪ್ಪಿಹೋಗಲಾಮೃಗವರಿಯವು
ಅಂಡಲೆವ ಕರ್ಮಮಂ ಕಳೆವವೀತನ ಮುಂದೆ
ದಿಂಡುರುಳುತಳಿದು ನಿಜಪದಸುಖವ ಕಾಂಬುದಕೆ
ಹಿಂಡಾಗಿ ಬಪ್ಪ ಮೃಗಕುಲದ ಬೇಂಟೆಯನಾಡುತಂ ಕಣ್ಣನೊಪ್ಪಿರ್ದನು ೮

ಇರುತಿರುತ್ತೊಂದು ದಿವಸಂ ಬೇಂಟೆಗೆಂದಲ್ಲಿ
ತ್ವರಿತದಿಂ ಕಣ್ಣಂಡನೊಲಿದು ಬರುತಿಪ್ಪಲ್ಲಿ
ನೆರೆಬಲದ ಕಣ್ಪುರ್ಬು ಮೈವೆಚ್ಚಿ ಕೆತ್ತುತ್ತಮಿಱಲಿದಂ ತಾನರಿವುತ
ಹರುಷದೀದಿನದಿನದಿ ಬೇಂಟೆ ಲೇಸಹುದೆನುತೆ
ಭರದಿಂ ಕಿರಾತಕುಲಮಂ ಕೂಡಿ ಕಣ್ಣಪ್ಪ
ಬವಲಿತ್ತು ತಿರುಕಾಳಹಸ್ತಿ ಮಲೆಯೊಳು ಪೂರ್ವದಿಂದೆ ನಾನಾ ಗುಡಿಯೊಳು ೯

ಪರಮ ಮುನಿಜನರಿಂದೆ ಸುರರಿಂದಸುರರಿಂದೆ
ನರರಿಂದೆ ನಾಗಕುಲಧವರಿಂದಲನುದಿನಂ
ಕೊರತೆಯೆನಿಸದೆ ಪೂಜೆಗೊಳುತಲವರವರ ಕಾಮ್ಯಾರ್ಥಂಗಳಂ ಸಲಿಸುತೆ
ವರಲಿಂಗರೂಪದಿಂದಿರುತಿರ್ದನಾದಿನಂ
ಸರಸದಿಂ ನೆನೆದು ಶಬರೇಂದ್ರನಹ ಕಣ್ಣನಂ
ಭರದಿಂದಲೆನ್ನತ್ತ ಕೊಂಡುಬಾ ಎಂದು ಮಾಯಾಮೃಗವ ಕಳುಹಿಸಿದೆನು ೧೦

ಆಗಲಾ ಮೃಗವು ಬೆಟ್ಟವನಿಳಿದು ಬಂದು ಎದು
ರಾಗಿ ಕಣ್ಣಂದ ಕಾಂಬಳತೆಯೊಳು ಸುಳಿಸುಳಿದು
ತೂಗಾಡುತ್ತೈದೆ ನಡೆನಡೆದು ನಲಿದಾಡುತ್ತಲಿರೆ ನೋಡಿದಂ ಕಣ್ಣಸು
ಬೇಗದಿಂ ಮೃಗದ ಬೆಂಬತ್ತಿದಂ ಅದರ್ದೇರು
ತಾಗಳಿಳಿವುತ್ತೆ ನಡೆನಡೆದು ಗಿಡುಂಗಳೊಳು ಮ
ತ್ತಾ ಗಿರಿಯ ಕೊಳ್ಳದೊಳು ಮಡುವಿನೊಳಗಿಡಿಂದಿರ್ದ ಹೊದರಿನೊಳು ಸರಗಳೊಳಗೆ

ಬೆಟ್ಟದೊಳು ಬೆಳಗಿನೊಳು ಕತ್ತಲಿಪ ಮೆಳೆಗಳೊಳು
ಘಟ್ಟದೊಳು ಗುಹೆಗಳೊಳು ಮರಗಳೊಳು ಪೇರರೆಗ
ಳೊಟ್ಟಿಲೊಳು ಬಿದಿರು ಹುಲ್ಲಂ ಕಲ್ಲು ಹಾವಸೆಗಳೊಳು ಕುಳಿ ತೆವರ್ಗಳೊಳಗೆ
ದಟ್ಟೈಪ ಮಲೆಗಳೊಳಗೆ ಪೊಕ್ಕಲ್ಲಿ ಪೊಕ್ಕು ತಾಂ
ನೆಟ್ಟನಾ ಮೃಗವಿಳಿಯಲಲ್ಲಿಳಿದು ನೆಗೆವಲ್ಲಿ
ಘಟ್ಟನೆ ನೆಗೆದು ಮನವನುಂ ಕಣ್ಗಳುಂ ಮೃಗದ ಬಳಿಗಿತ್ತು ಇನಿತಲ್ಲದೆ ೧೨

ತನುವನುಂ ತವಕಮುಂ ಹಿಡಿದೆಸುವ ಬಗೆಗಿತ್ತು
ಘನವೆನಿಪ ಕೈಲಾಸ ಶಿಖರವನಡರ್ವಂತೆ
ಅನುಪಮದ ಕಾಳತ್ತಿ ಮಲೆಯನಾ ಮೃಗದೊಡನೆಯಡರುತ್ತೆ ಬರು ಬರುತಿರೆ
ನೆನಹಿಂಗೆ ಮುಂಚುಶ್ವಾಸಿ ಮಾಯಾಮೃಗವು ಕಣ್ಣ
ನನುಕೊಂಡು ಬಂದು ದೇವಾಲಯದ ಮುಂಬಿನೊಳು
ಅನುವಿನಿಂ ಮಾಯವಾದುದು ಮೃಗಂ ನೋಡ ನೋಡಲು ಕಣ್ಣ ಬೆರಗಾದನು ೧೩

೧ ಡಿ (ಹ) ೨ ಳುಗಿಡ (ಹ) ೩ X (ಹ)

ಅತ್ತಿತ್ತಲರಸಿ ಕಾಣದೆ ಲಿಂಗವಿಹನಿಳಯ
ದತ್ತಲೈತಂದಗನಾ[೧] [೨]ಕಣ್ಣಿಂದ[೨] ಕನಲಿ ನಿಜ
ಚಿತ್ತದೊಳಗುರವಣಿಸುತ್ತೈದೆ ತೆರೆತೆರೆ ಕದವ ತೆರೆಯೆನುತೆ ನುಡಿವುತಿರ್ದು
ಮತ್ತೆ ಕೇಳೆನ್ನನವನೆ ತೆರೆ ಕದವನೆನ್ನವನೆ
ಇತ್ತ ಬಾಯೆನ್ನವನೆ ಕದವ ತೆಗೆಯೆನಲು ನಾ
ನಿತ್ತರದ ಕದವ ತೆರೆಯಲ್ ಭೋಂಕನೊಳಪೊಕ್ಕು ನೋಡಿ [೩]ಮಾ[೩]ದೇವನೆನುತೆ ೧೪

[೪]ಮಾ[೪]ದೇವ ಕೇಳು ನೀನೆನ್ನವನೆಯೆನ್ನವನೆ
ಆದಡಂ ನಿನ್ನನಾಂ ನೋಳ್ಪೆನೆಲೆಯೆನ್ನವನೆ
ಹೋದ ಮೃಗವಂ ಕಂಡಡೆನಗೆ ನೀನೊಳ್ಳಿದಂ ಅಲ್ಲಿ ಭಾಗವನೀವೆನು
ಇದೆ ಮಾರ್ಗವನರುಹೆನಲ್ಕವನ ನುಡಿಗಳತಿ
ಪೋದವೆನಿಸಿದುವೆನಗೆ ನೋಡುವೆನಿವಱನಱನೆನುತ
ಲಾ ದಿವ್ಯ ಮೃಗವ ತೋರಲ್ಕವಂ ಕಂಡು ಹಾಯೆನುತೆ ನಂಬುಗೆದಾಳ್ದನು ೧೫

ಎನಯ್ಯಯೆನ್ನಯ್ಯ ಇಂತಪ್ಪ ನನ್ನಿಯಂ
ನಾನೀಗ ಕಂಡರಿಯೆ ನಿನ್ನಂಥ ಹಿರಿಯನಂ
ಏನಾದಡಂ ನಿನ್ನ ನಾನಗಲಲರಿಯೆನಿನ್ನೆಂತಗಲ್ವೆನಯ್ಯ ನಾನು
ನಾನಿನಿತು ದಿಟವುಳ್ಳನಂ ಕಂಡು ಬಿಡಲರಿಯೆ
ಏನೆಂಬೆನಿನಿತು ದಿನ ನಿನ್ನನುಂ ಕಂಡರಿಯೆ
ನೀನು ಕೇಳೆಂತಪ್ಪ ಬಂಟನಂ ನಡಿಸಿಕೊಳ್ಳಲ್ಬಲ್ಲಿಯೆನ್ನವನೆ ನೀ ೧೬

ಇಂದು ಮೊದಲಾಗಿ [೬][ಅಗಲೆಂ][೬] ನಿನ್ನ ಭಾಗೆಯಂ
ತಂದಿಕ್ಕುವೆಂ ರಸಂ ಬಸಿವ ಹೊಸಮಜ್ಜಿಯಂ
ಎಂದೆಂದಿಗಂಜದಿರು ಬಡವಾಗದಿರು ಚಿಂತಿಸದಿರೆನ್ನವನೆ ನೀನೆಲೈ
ಬಂಧುರದ ಕತ್ತಲೆಯೊಳಾನು ನಿನ್ನಂ ಬಿಟ್ಟು
ಮುಂದಾದರುಂ ಪೋಪನಲ್ಲವೀ ನುಡಿ ದಿಟಂ
ಸಂದೆಗಂ ಗೊಳದಿರೈ ತಂದಡಗ ಸಹಿತವಿದೆ ದೇವ ಹುಸಿಯಲ್ಲ ನಂಬು ೧೭

---

೧ X (ಹ) ೨ ಕಣ್ಣದ (ಹ) ೩ ಮಹ (ಹ) ೪ ಮಹ (ಹ) ೫ X (ಹ)
೬ ಅಗಲೇಂ (ಹ, ಜ)

ನಿನ್ನ ಮುಂದಿಟ್ಟು ಸರಿಯಾಗಿ ೧ಹಸುಂವೆಂ ನೋಡು
ಎನ್ನವನೆಯೆನ್ನೊಳನ್ಯಾಯವಿಲ್ಲಂ ನೋಡು
ಎನ್ನುತ್ತಲಲ್ಲಿ ತಾಂ ತಂದಿರ್ದಡಗನ್ನೈದೆ ಬಿಚ್ಚಿ ಸರಿಮಾಡುತ್ತಲೀ
ನನ್ನಿಯಿಂ ನಿನ್ನ ಮನವೊಲಿದುದಂ ಕೊಳ್ಳಯ್ಯ
ಎನ್ನವನೆ ನಿನ್ನಾಣೆ ತಪ್ಪೆನಿದಕೆನುತಿತ್ತು
ನಿನ್ನ ಭಾಗವನಾರ ಕೈಯೊಳುಂ ಕೊಡೆ ನಾನೆ ಕಾಸಿ ಲೇಸಂ ಮಾಡುವೆಂ ೧೮

ಎಂದೊಂದು ಚೆನ್ನ ಸುಂಟಿಗೆಗೋಲನಳವಡಿಸಿ
ತಂದು ಹೊಸಕಿಚ್ಚಂ ಹೊಸೆದು ಖಂಡವಳವಡಿಸು
ತಂದು ಕೆಂಪುಳ್ಳ ನುಂಪುಳ್ಳ ಸೊಂಪುಳ್ಳ ಇಂಪುಳ್ಳ ತಂಪುಳ್ಳಡಗನು
ಒಂದೊಂದು ಕಾಸುತಂ ಪ್ರತಿಪಾಕಮಂ ಗೈವು
೨ತಿಂಥುನದಿ ತಿರುಹಿ ಲೇಸಪ್ಪ ಮೃದುವಪ್ಪ ತೆಳು
ವೆಂದೆನಿಸುತಿಪ್ಪ ಮಾಂಸಂ ನಾಲಗೆಯೊಳು ಸವಿಯರಿದವಂ ಬೇರಿರಿಸುತೆ ೧೯

ಮೇಲಪ್ಪ ಮುತ್ತುಗದ ಪತ್ತಳೆಯ ಬಾಸಣಿಸಿ
ಲೀಲೆಯಿಂ ಕೊಂಡು ಬಂದೆನ್ನವನೆ ಉಣ್ಣೆನುತೆ
ಸಾಲುಗೊಳಿಸುತ್ತಡಗ ಮುಂದಿರಿಸಿ ಎನ್ನವನೆ ಸವಿನೊಡೆಲ್ಲೈಯೆನುತ್ತೆ
ಮೇಲೆ ಕೇಳೆನ್ನಾಣೆ ಉಣ್ಣೆಲ್ಲೈಯೆನ್ನವನೆ
ಆಳೋಚನೆಯದೇಕ ನಿನ್ನಾಣೆ ಉಣ್ಣಯ್ಯ
ನಾಲಗೆಯೊಳಿಟ್ಟದಂ ಸವಿನೋಡುಯೆನ್ನವನೆಯೆನ್ನವನೆಯೆನಲು ನಾನು ೨೦

ಕೈಕೊಂಡ ಮಾಳ್ಕೆಯಿಂ ಮಾಂಸಮಂ ಭೂತಕ್ಕೆ
ಜೋಕೆಯಿಂದಿತ್ತವನ ಭಕ್ತಿ ಸಂಪ್ರೀತಿಯುನ
ನೇಕ ಪರಿಯಿಂ ನಾನು ನಲಿದುಂಡು ಭಕ್ತನ ಮನಕ್ಕೆ ನಾನುಂಡ ತೆರದಿ
ಸಾಕೆನುತ ತಣಿಮ ತೇಗುತ್ತೆ ತೂಗಾಡುತಿರ
ಲಾ ಕಣ್ಣ ಕಂಡು ಸಂತಸದಿ ಚಿಂತಿಸಿದ ಮ
ತ್ತೀಕಾನನದೊಳಿನಿತುದಿನವೊಬ್ಬನಿ೩ರ್ದೆಯ್ಯಾ ನಿನ್ನನೋಪುವರಿಲ್ಲವೆ ೨೧

---

೧ ಹಂಚು (ಜ) ೨ ತಿಂನ (ಹ) ೩ ರ್ದೈಯ್ಯ (ಹ)

ಕೆಲವು ಉಪವಾಸೂವಿರ್ದಿ¹ದುಂಡಿಂಯೆನ್ನವನೆ
ಪಲವು ಮಾತೇನು ಸಲಹುವೆನು ನಾ ನಿನ್ನವನೆ
ಒಲವಿನಿಂದಿರುಯೆನುತ್ತಿರಲಿರುಳು ಬಲಿಯೆ ಪುಳ್ಳಿಯ ಪೊರೆಯ ತಂದು ಮುಂದೆ
ಬಲುಗಿಚ್ಚನೆಗಳಿ ಬೆಳಗೆತ್ತುತಂ ನಿದ್ರೆಗೈ
ಯೆಲೆ ತಂದೆಯಿನ್ನಾವ ದುಗುಡಮಂ ಬೇಡ ನಾಂ
ಬಲವಾಗಿ ಕಾದುಕೊಂಡಿರ್ಪೆನಂಜದಿರೆನುತೆಯೆನ್ನನುಂ ಪಟ್ಟಿರಿಸುತೆ ೨೨

ಮೆಲ್ಲನೈತಂದುಲಿವ ಪಕ್ಷಿಗಳನೆಬ್ಬಿಸುತೆ
ಅಲ್ಲಿ ದನಿಗೈವ ಮೃಗಮಂ ಚೆಲ್ಲ ಬಡಿವುತ್ತ
ಲಲ್ಲಿಯೆನ್ನಯ್ಯಂಗೆ ನಿದ್ರೆಗೆಟ್ಟಡೆ ನಾಳೆ ಪಸಿವಿಲ್ಲದುಣ್ಣನೀತಂ
ಎಲ್ಲ ಉಂಡನ್ನವಿರ್ದಂತಿರ್ದುದೆನುತೆ ಎ
ನ್ನಲ್ಲಿ ಬಂದೊಳಪೊಕ್ಕು ನಿದ್ರೆಯುಮನಾಲಿಸುತ
ಲಲ್ಲಿ ಪೊರಗೈತಂದುಲುಹನಾಲಿಸುತ್ತೊಳಗೆ ಸುಯ್ಯೆಲರನಾಲಿಸುತ್ತೆ ೨೩

ಇಂತು ಬೆಳಗಪ್ಪನ್ನೆಗಂ ²ಜಾಗರಂ² ಮಾಡ
ಲಾಂ ತವಕದಿಂದುಪ್ಪವಡಿಸಲೆನ್ನಂ ನೋಡು
ತಂ ತವೆ ನಗುತ್ತ ಹಸಿದೆ³ದ್ದೆಯ್ಯ³ ನಿದ್ರೆ ತಿಳಿದೆ⁴ದ್ದೆಯ್ಯ⁴ಯೆನ್ನವನೆ ಕೇಳ್
ನಾಂ ತಳುಹದಂ ಪೋಗಿ ಮಾಂಸಮಂ ತರುವೆ ನೀಂ
ಚಿಂತಿಸದಿರಯ್ಯ ನಿನ್ನಾಣೆ ನಾನೊಂದೆಡೆಯೊ
ಳುಂ ತಡೆಯೆ ನಿನ್ನಾಣೆಯೆನುತೆನ್ನ ನಂಬಿಸುತೆ ನೇಹದಿಂ ಪೊರಮಡುತ್ತೆ ೨೪

ಬಗೆಬಗೆಯ ನೆನೆವುತ್ತೆರಡು ಮೂರಡಿಗಳಿಂ ತಿ
ರುಗಿ ಬಂದು ಎನ್ನವನೆಯೆನುತೊಳಗೆ ಮರುಗುತ್ತೆ
ಸೊಗಸಳಿದು ಪರಿತಾಪದಿಂದಳಲಿ ಬಿಡಲಾರದೈತಂದು ನಿಂದು ನೋಡಿ
ತೆಗೆದಪ್ಪಿ ಬಿಗಿದಪ್ಪಿ ಮುಂಡಾಡಿ ಕೊಂಡಾಡಿ
ಅಗಲಲಾರದೆ ಮತ್ತೆ ಹೋಗಿ ಮರಳಿಯೆ ನೋಡಿ
ಮಿಗೆ ಪೋಗಪೋಗದಿರ⁵ನಿಂ⁵ತಪ್ಪ ಕಣ್ಣನಂ ಪೊಗಳಲೆನ್ನಳವೆ ನಂಬಿ ೨೫

---

೧ ವಿರ್ದಿದುಂಡಿ (ಹ) ೨ ಗಾಜಿರಂ (ಹ) ೩ ದ್ದೈ (ಹ) ೪ ದ್ದೊಯ್ಯ (ಹ)
೫ ಯಿಂ (ಹ)

ನಡೆನಡೆದು ತಿರುತಿರುಗಿ ಹಿಂಬೆರಕಿನಿಂದಾತ
ನಡೆನಡೆದು ಹೆರೆಹಿಂಗಲಾರದಾತನ ಮನಂ
ಬಿಡಬಿಡದು ಎಂತಕ್ಕೆ ಬರಲು ಕಣ್ಮರೆಯಾಗೆ ೧ಕಣ್ಣಂದಂ ಕಂದಿ ಕುಂದಿ
ಹುಡುಕುತ್ತ ಹೋದನತ್ತಂ ಮೃಗಗಳಂ ಇತ್ತ
ತಡೆಯದೈತಂದನೊರ್ವ್ವಂ ಪಾರ್ವ್ವ ತನುವಿನೊಳ
ಗಿಡಿದಿರ್ದ ಭೂತಿ ರುದ್ರಾಕ್ಷಿಯಿಂ ಕೈಯ ಕರಡಿಗೆಯಗ್ಗವಣಿಯಿಂದಲೀ ೧

ಮೆಲ್ಲಮೆಲ್ಲನೆ ಬೆಟ್ಟವೇರುತಂ ನಡೆತಂದು
ಅಲ್ಲಿ ದೇವಾಲಯದ ಬಾಗಿಲಿಗೆ ಬರಲಂದು
ಸಲ್ಲದತಿ ದುರ್ಗಂಧಗವಲೆತ್ತಿ ಕವಿಯೆ ಕರಣಂಗಳೆಲ್ಲಂ ಕದಡಲು
ನಿಲ್ಲದಾ ಪಾರ್ವನೀಕ್ಷಿಸಿ ಶಿವಶಿವಯೆನುತ್ತ
ಲಲ್ಲಿಂ ತಿರುಗಿ ಬಂದು ಒಂದು ನಿರ್ಮಲ ತಾವಿ
ನಲ್ಲಿ ಕರಡಿಗೆಯಿಳುಹಿ ಏನಿದದ್ಭುತವೀ ದುರಾಚಾರವೀ ಜಿಗುಪ್ಸಂ ೨

ಏನೆಂಬೆಲೆಲ್ಲಿಂದಲಾದುದೀ ದುಷ್ಕಾರ್ಯ
ವೀ ನೀಲಕಂಠನಾಲಯದೊಳಿಂತಾದುದೇ
ಬಾಲೇಂದುಧರಗೆ ಸೊಗಸಿರ್ದುದೇನೆನುತ ಮೂಗಂ ಮುಚ್ಚುತೊಳಪೊಗುತ್ತೆ
ಸೂನೆಗಾರನನಿಂತು ಪೊಗಿಸುವರೆ ಎಲೆ ದೇವ
ಏನಯ್ಯ್ಯಯೇನಾದೆಯೆಲ್ಲಿರ್ದೆಯೆಲೆ ದೇವ
ನೀನರಿಯದಿಂತಾದುದೇ ಎನುತದಂ ತೆಗೆದು ಗೋಮಯದಿ ಶುದ್ಧಿಯೆನಿಸಿ ೩

ಕೊಳ್ಳದೊಳು ಪೊಕ್ಕು ಮತ್ತೊಮ್ಮೆ ಪಾರ್ವಂ ಮಿಂದು
ಮೆಲ್ಲನಾ ಕರಡಿಗೆಯನಗ್ಗವಣಿಯಂ ತಂದು
ನಿಲ್ಲದೊಳಪೊಕ್ಕು ನೀನಿಂತು ಮಾಡಿಸುವರೇ ಶುದ್ಧಾತ್ಮ ಶಿವಶಂಕರ
ಸಲ್ಲಲಿತ ಸಜ್ಜನ ಸ್ನೇಹರಸಭರಿತ ಮಹಿ
ಮೋಲ್ಲಾಸ ಕಾಳಹಸ್ತೀಶಯೆನುತಂ ನುತಿಸು
ತಲ್ಲಿ ಲಿಂಗಕ್ಕೆ ಮಜ್ಜನವೆರೆದು ಬಿಲ್ವೋತ್ತರಣಿ ಪತ್ರಿ ಬೆಳುಗರುಕೆಯಂ ೪

---

೧ X (ಹ) ೨ X (ಹ)

ತಂದೊಟ್ಟಿದಂ ರುದ್ರ ಸೂಕ್ತಮಂ ಪೇಳುತ್ತಂ
ನಿಂದಲ್ಲಿ ಪಲವುಂ ಜಪಂಗಳಂ ಮಾಡುತ್ತ
ಲಂದು ಧೂಪಾರತಿಯನೆತ್ತಿ ನೈವೇದ್ಯಮಂ ಕೊಟ್ಟು ತಾಂ ಶರಣೆನುತ್ತೆ
ಬಂದು ನಮಿಸುತ್ತೆ ಪೊಗಿ[1]ಸಂದಿದು ಕಂಡ್ಯಾ ದುರ್ಮ
ಧಾಂದನಂ ಪೊಗಿಸದಿರು ಹೇಸಿಕೆಯು ಮಾಳ್ಪನಂ
ಎಂದು ಪೊಡಮಟ್ಟು ಬಲವಂದಿಂದುಧರ ದಯಾಸಿಂಧುವೇ ಕರುಣಿ[2]ಸೆ[2]ಸುತೆ ೩೦

ಸುಖನಾಸಿ ಗರ್ಭಗೃಹ ರಂಗಮಂಟಪಂ
ಮುಖವೆನಿಪ ಮೂರು ಕದಗಳನಿಕ್ಕುತಂ ಮತ್ತ
ದಕೆ ದಿವ್ಯ ಸಂಕಲೆಗಳಂ ಹೂಡಿ [3]ಬಿಯ್ಯ[3]ಗಂಗಳನಿಕ್ಕುತಾ ಪಾರ್ವನು
ಮುಖವಾಗಿ ನಡೆದ ಪುರದತ್ತಣಿತ್ತಂ ಕಣ್ಣ
ಸುಖವೆನಿಪ ವಿಂಧ್ಯಾವನವನೈದೆ ಪೊಕ್ಕು ಮೃಗ
ನಿಕರವನರಸಿಕೊಳುತೆ ಹಸಿದನೆನ್ನವನೆನುತೆ ನೆನೆನೆನೆದು ಸಂಚರಿಸುತೆ ೩೧

ಪಾಡಳಿವ ಮೃಗಗಳಂ ಕೋಡಂಗಳುಳ್ಳವಂ
ಬೇಡೆನ್ನವನ ಹೊಟ್ಟೆಗಾಗದೆನುತವುಗಳಂ
ನೋಡದೆಸೆಯುದೆ ಬರು[4]ತ್ತು[4]ಪ್ಪಾಂಗ ಪುಷ್ಟವಾಗಿರ್ದ ಮೃಗಮಂ ಕೆಡುವುತೆ
ರೂಢಿಗೊರಗದ ಮುನ್ನ ಹೋಗಿ ಪಿಡಿದೆತ್ತುವಂ
ನಾಡೆನೆಲನಂ ಸೋಂಕಲೆನ್ನವಂ ಹೇಸುವಂ
ಪಾಡಳಿಯುದಂತೊಯ್ವೆನೆಂದೊಂದರೆಯ ಮೇಲೆ ಕಡಿಖಂಡಮಂ ಮಾಡುತೆ ೩೨

ಮತ್ತಮಾ ಮಾಂಸಮಂ ಕಲುವಾಳಿಯೆಲೆಯೊಳಿ
ಕ್ಕುತ್ತದಂ ಕೊಂಡು ಬಂದೊಂದು ಮಾಮರದಡಿಯೊ
[5]ಚಿತ್ಯಂ[5]ತ ಹರುಷದಿಂದಿಲ್ಲಿ ಪಾಕಂಗೈವೆನೆಂದಲ್ಲಿ ಹಸರಿಸುತ್ತೆ
ಮುತ್ತುಗದ ತಳ್ತೆಲೆಗಳಂ ಛಂದದಿಂ ಹಾಸಿ
ಚಿತ್ತರಿಸಿ ನವಖಂಡಮಂ ಮಾಡುತಂ ಕಾಸಿ
ಒತ್ತಿ ಬೀಸುವಗಾಳಿ ತಾಗ[6]ಲಿ[6]ದನುಣಲೊಲ್ಲ ಮತ್ತೆನ್ನವಂ ಬಹುಸುಖೀ ೩೩

---

೧ ಪ (ಹ) ೨ ಪೆ (ಹ) ೩ ಬೀಯ (ಹ) ೪ ತ (ಹ)
೫ ತ್ಯಾಂ (ಹ) ೬ ನಿ (ಹ)

ಎನುತ ಮುಚ್ಚುತ್ತಲುಲುಹಾಗೆ ಮರೆಮಾಡುತ್ತ
ಲನುವಿನಿಂ ಕಾಸುವ ಕುದಿವ ಪಾಕಮಂ ನೋಡು
ತಿನಿತಿದಂ ಕಾಹೇರಿತಿದು ಸೀಪುದೆಂದವದಂ ಬೇರಿರಿಸುತಾ೧ಹಾ ಇದಂ
ಎನಗೊಡೆಯನಾದವಂಗೆನುತೆ ಬೇರಿರಿಸುತಂ೧
ಘನಮೃ೨ದು೨ವೆನಿಪ್ಪ೩ವಂ೩ ಕರಗಳಿಂ ಶೋಧಿಸುತೆ
ಮಿನುಗುತಿರುತಿರ್ದವಂ ಕಣ್ಗಳಿಂ ಶೋಧಿಸುತೆ ಕಂಪುಳ್ಳವಂ ಘ್ರಾಣದಿಂ ೩೪

ನೆರೆ ಶೋಧಿಸುತ್ತಲಿನಿದುಳ್ಳವಂ ಜಿಂಹ್ವೆಯಿಂ
ದರಿದರಿದು ಶೋಧಿಸುತ್ತೆಂಜಲೆಂಬವರ ನುಡಿ
ಕುರುಹಿಲ್ಲದಂತುಳಿದು ಪುಸಿಗೈದು ಸಂಜನಿತ ಕರಣಂಗಳಂ ಶೋಧಿಸಿ
ಪರಮ ೪ಸುಖ೪ಮುಖದ ಕಳಶದೊಳಗ್ಘವಣೆಯು ತಾ
ನಿರಿಸಿ ತಜ್ಜಲಕೆ ಮೌನಂ ಪೊದಿಸಿ ಬರುತಲ್ಲಿ
ಸರಸದಿಂ ಕಾಡವೊಲ್ಲೆ೫ಯ೫ ಪೂಗಳಂ ಶಿರದ ಕರಡಿ೬ಗೆ೬ಯೊಳೊಲಿದಿರಿಸುತೆ ೩೫

ಒಂದು ಕೈಯೊಳು ಮೀಸಲೋಗರಮುಮಂ ಪಿಡಿವು
ತೊಂದು ಕೈಯೊಳು ಬಿಲ್ಲು ಬಾಣಂಗಳಂ ಪಿಡಿವು
ತಂದು ಮಾಂಸದ ನೆವದಿ ನೇಹದೋಗರವೊಪ್ಪೆ ಬರುತೆನ್ನವಂ ಪಸಿದನು
ಎಂದೆ೭ನುತೆ೭ ಪಿರಿದು ತಳುವಿದನೆಂದು ಕೋಪಿಪನೊ
ಇಂದುಣುವುದಕ್ಕೆ ಹೊತ್ತಾಯಿತೆಂದೆನುವನೋ
ಚಂದದಿಂ ಪಸಿದು ನಿಲದೆನಗೆದುರುಬಪ್ಪನೋ ಬರಲಾರದಲ್ಲಿಪ್ಪನೋ ೩೬

ಮಗನ ಬರವಂ ಕಾಣದೊಬ್ಬನೈತಪ್ಪನೋ
ನೆಗೆದು ಪುಲಿ ಬರಲಂಜಿ ಪೊರಮಡದಲಿಪ್ಪನೋ
ಬಗೆಬಗೆಯ ದನಿಗೇಳ್ದು ಸುರಲೊಲ್ಲೆನೆಂದಾತ ಕದವಿಕ್ಕಿ ಕೊಂಡಿರ್ಪನೋ
ಮಿಗೆ ಕರಡಿ ಗರ್ಜಿಸಲ್ಕಂಜುತುಸುರಿಕ್ಕನೋ ಉ
ರಗ ಸಾರಲತಿ ಹೆದರಿ ಮುದವಳಿಲವುಲತಿಪ್ಪನೋ
ಸೊಗಸಿನಿಂ ತಮ್ಮವರನಂ ನೆನೆವುತೆನ್ನನುಂ ಬಿಟ್ಟನೆಂದಳುತಿರ್ಪನೋ ೩೭

---

೧ X (ಹ) ೨ ಡ (ಹ) ೩ ದಂ (ಹ) ೪ ಸುಖಿ (ಹ) ೫ X (ಹ)
೬ X (ಹ) ೭ ನಿತು (ಹ) ೮ X (ಹ)

ಎನ್ನುತ್ತ ನೇಹದಿ ನೆನೆವ ಪಲವು ಚಿಂತೆಯಿಂ
ಕಣ್ಣಪ್ಪನೈತಂದು ದೇವಾಲಯದಿ ನಿಂದು
ಎನ್ನವನೆ ತೆರಿ ಕದವನೆಂದು ನುಡಿವಲ್ಲಿಂದ ಮುನ್ನವೆ ಢಣತ್ಕಾರದಿಂ
ಉನ್ನತದ ಬಿಯ್ಯಗಂಗಳ್ಕಳಚಿ ತೆರೆಯಲ್ಕೆ
ನನ್ನಿಯಿಂದೊಳಪೊಕ್ಕು ಒಬ್ಬನಿದ್ದೈತಂದೆ
ಎನ್ನ ನೆನಿಸುತ್ತಲಿದ್ದ್ಯಾ ತಂದೆಯಿಂದು ಪೊತ್ತಾದುದಯ್ಯಾ ಈಕ್ಷಿಸೆ ೩೮

ಎನುತ ಪಾದುಕ ಪದದಿ ಪೂಜೆಯಂ ಪರಿಹರಿಸಿ
ಅನುನಯದಿ ಮೊಗದಗ್ಗವಣೆಯೆರೆದು ಸಿಂಗರಿಸಿ
ಘನವಾದ ಮುಡಿಯೊಳಿರ್ದಲರ್ಗಳಿಂ ಪೂಜಿಸಿ ಮಹಾದೇವ ಹಸಿದೆಯಯ್ಯಾ
ಇನಿದೋಗರವನಿದೇ ಕೋಯೆನುತೆ ಮುಂದಿರಿಸಿ
ಉಣುವುಣ್ಣೈಯೆನ್ನವನೆಯೆನ್ನವನೆ ಹಸಿದೆಯ್ಯ
ಎನಗಾಗಿ ನಾಚಿದೇನೈಯೆಂದು ಹಿಂದು ಮುಂದಾಗಿ ನೋಡುತ್ತಿರಲ್ಕೆ ೩೯

ಸರಸದಿಂದೆಂದಿಸಂದದೊಳುಂಡ ಮಾಳ್ಕೆಯಿಂ
ಪರಿಹರಿಸಿ ಭೂತಕ್ಕೆ ಕೊಟ್ಟವನ ಭಕ್ತಿಯುಂ
ಹರುಷದಿಂದಾರೋಗಿಸಲ್ಕೆ೧ನ್ನಿಸುಂ ಕಂಡು ಕಣ್ಣಸಕ್ಕರದಿಂವಲಿ
ತೆರೆಯಿಕ್ಕಿ ದಿಟ್ಟಿಯಾದಪುದೆಂದು ನೋಡಿ ತಾ
ನಿರದೆ ದೂದೂಯೆಂದು ನೇಹದುರು ಕಾಪಮುಂ
ಭರದಿಂದಿಡುತ್ತಲಾ ಲಿಂಗಪ್ರಸಾದಮಂ ಕೈಕೊಂಡು ಸವಿದು ಸವಿದು ೪೦

ಬಿಡದೆ ಹಾರೈಸುತಂ ಉಂಡನೆನ್ನವನೆನುತೆ
ಅಡಿಯಿಡುತೆ ಬದುಕಿದೆಂ ಬುದುಕಿದೆಂ ತಾನೆನುತೆ
ಪೊಡವಿಯೊಳಗಿನ್ನಾವುದೆನಗರಿದೆನುತ್ತೆ ನಿಚ್ಚಂ ಬೇಂಟೆಯಾಡಿ ತಪ್ಪೆಂ
ಒಡೆಯನೇ ಕೇಳೆನುತೆ ಬಾಹನಪ್ಪಳಿಗೊಂಡು
ಒಡನೊಡನೆ ಬಾಗುತಂ ಕೈಚಪ್ಪಳಿಕ್ಕುತಂ
ಕಡುಮೋಹದಿಂ ಬೀಗುತಂ ತೂಗುತಂ ತೊನೆವುತ್ತೊಂದು ಕಾಲಿಂದಾಡುತಂ ೪೧

---

೧ ಲ್ಲ (ಹ)

ಉಬುಬೆಂದು ಬೊಬ್ಬಿಟ್ಟು ಕೂಯೆಂದು ಕೂಗಿಟ್ಟು
ಅಬಬೆಂದು ನಿಂದಾರ್ದು ನಾಲ್ದೆಸೆಗೆ ಕೋಣಕಿಟ್ಟು
ರಭಸದಿಂದುರವಣಿಗಳಲ್ಲಾಡೆ ಮುಡುಹು ಮುಚ್ಚಿದ ಚಮರಿ ಕೆಲದಾಡಲು.
ನಭಕೆ ಪಿಡಿದಲಗನೆತ್ತುತ್ತೆ ಕುಣಿಕುಣಿವುತ್ತೆ
ಅಭವನೇ ಎಂದು ಪರಿತಂದು ಬಿಗಿದಪ್ಪುತ್ತೆ
ಶುಭಕರ ಕರಂಗಳಿಂ ಮುದ್ದಿಸುತ್ತಿರಲ್ಕೆನ್ನ ವಿಭವವೆಂತೇಳ್ವೆ ನಂಬಿ ೪೨

ಇರದೆಸ್ದು ಮತ್ತಾಡಿ ಒಲೆದಾಡಿ ಮಲೆದಾಡಿ
ಹರುಷವಿದ್ದಂತೆನ್ನನಪ್ಪುತ್ತಲೋಲಾಡಿ
ಕರಡಿಯಂತಿರೆ ಕುಪ್ಪಿ ಕುಪ್ಪಿ ಕೆಲಕೆಲೆದಾಡಿ ಹುಲ್ಲೆಯೊಲು ನೆಗೆದಾಡುತೆ
ಸರಸದಿಂ ಕೊಂಬು ಕಪಳೆಗಳ ಬಾಯಿಂದೂದು
ತುರು ಕೊಳಲು ಕರಡೆಯಂ ಬಾಯಿಂದಲೂದುತೆ
ನ್ನೆರೆಯನೇ ನೋಡೆನುತೆ ಎನ್ನವನೆ ನೋಡೆನುತೆ ೨ಸೀಳಿ೨ಕ್ಕಿಯಾಡುತಿಂತು ೪೩

ಜೇಡರಾಡುವ ಜಂಪದಾಟಮಂ ತೋರುತಂ
ಪಾಡಲರಿಯದೆ ಎನ್ನವನೆಯೆಂದು ಪಾಡುತಂ
ಆಡಲರಿಯದೆ ಕಾಲ್ಗೆ ಬಂದಂತೆಯಾಡುತಂ ಇಂತು ಬೆಳಗಪ್ಪನ್ನೆಗಂ
ಮಾಡಿದಂ ಜಾಗರಂ ಎನ್ನ ಮೋಹದೊಳಗೋ
ಲಾಡಿದಂ ನೆ೩ರಶವಿಲ್ಲದೇಕಾಂತ ಮಾನಸದಿ
ಕೂಡುತ್ತ ಬೆರಿಕೆಯಿಲ್ಲದ ಬಚ್ಚಬರಿಯ ಭಕ್ತಿಯೊಳಿರ್ದನೇವೇಳ್ವೆನು ೪೪

ಎನ್ನಯ್ಯ ಬೇಂಟೆಯಾಡಲು ಪೋಪೆನೈ ಎಂದು
ನಿನ್ನಿನಂತಲ್ಲ ತಳುವದೆ ಬರ್ಪೆ ನಿನ್ನಾಣೆ
ಎನ್ನವನೆ ಬೇಗದಲಿ ಬರ್ಪೆನೈಯೆನ್ನಾಣೆ ಹಸಿಯಲ್ಲ ಬರ್ಪೆನಯ್ಯಾ
ಎನ್ನುತಳಲಳಗಲಲಾರಂ ನಿಲ್ಲಲಾರ ಮ
ತ್ತೆನ್ನವಂ ಪಸಿವನೆಂದುಂ ಮುಂದುಗೆಟ್ಟೊಂದು
ವನ್ನುಡಿಯಲೀಜುವಂ ನೋಡಲಮ್ಮಂ ದಿಟ್ಟಿಯಕ್ಕೆಂದು ನೆನೆದು ಕಣ್ಣಂ ೪೫

೧ X (ಜ) ೨ ಸಿಳ್ಳಿ (ಹ) ೩ ರೆ (ಹ) ೪ X (ಹ)

ನಡೆವನೊಂದಡಿಯಿಡುವನಗಲಲಾರದೆ ನಿಲ್ವ
ನೊಡನೆನ್ನ ನೋಡಿ ಕಂಣ್ಗ್ ೧ಳಲಾರದೆ ಬಳಲ್ವ
ಒಡಲು ಝುಮ್ಮೆನೆ ಬೆಮರ್ತು ಗದ್ಗದಿಸಿ ಮೈವೆರ್ಚಿ ತಿರುತಿರುಗಿ ನೋಡುತ್ತಲೀ
ನಡೆಯತ್ತ ಕಾಲಿತ್ತಲೇನೆಂಬೆನಾತನಂ
ಒಡಲತ್ತ ಮನವಿತ್ತಲೇನೆಂಬೆ ನೂತನಂ
ಕುಡಿನೋಟವತ್ತ ಕಣ್ಣುಗಳಿತ್ತ ಮಾಟವತ್ತಂ ಕೂಟವಿತ್ತಲಿಂತು ೪೬

ದಿನದಿನಕೆ ಕಣ್ಣಂಗೆ ನೇಹವದು ಪೆರ್ಚುತಿರೆ
ತನುಮನಕೆ ೨[ಕಣ್ಣುಗಳು]೨ ಹೊಸತು ಪಲ್ಲವಿಸುತಿರೆ
ನೆನಹಿಂಗೆ ನಿಲುಕದಿಹ ಭಕ್ತಿಯಿಂ ಬೇಂಟೆಗೆಂದತ್ತ ಪೋದಂ ಕಣ್ಣನು
ಅನಿತರೊಳಗಾ ಶಿವಬ್ರಾಹ್ಮಣಂ ಭರದಿ ಮು
ನ್ನಿನ ತೆರದಿ ಹೊತ್ತುಕೊಡನಗ್ಗವಣಿ ಪೂಪತ್ರಿ
ಯನು ಕೊಂಡು ಮೆರೆವ ದೇವಾಲಯದ್ವಾರದೊಳ್ಬಂದು ತಾಂ ನಿಂದು ನೋಡಲ್ ೪೭

ಮುನ್ನಿಂದ ಸಾಲ್ವಡಿಯು ಹೊಲಸಿರ್ದುದಂ ಕಂಡು
ಇನ್ನೇನು ಗತಿಯೆನುತೆ ಒಳಪೊಗದೆ ಹೇಸುತ್ತೆ
ಗನ್ನವಹ ಕೋಪದಿಂ ಸಿಡಿಮಿಡಿಗೊಳುತ್ತ ಬೆಂಡಾಗಿ ಬೆರಗಾಗಿ ನೋಡಿ
ಎನ್ನಯ್ಯ ಎತ್ತಹೋದೈ ಎತ್ತಲಿಲ್ಲಯ್ಯ
ಮನ್ನಣೆಯನುಳ್ಳಂತ ಕಾಳತ್ತಿಯರಸಯ್ಯ
ಉನ್ನತ ಪ್ರಭುವೆ ನೀನಿಂತನಾಚಾರವರ್ತಿಯೇ ಲೋಕಚಕ್ರವರ್ತಿ ೪೮

ಪ್ರಾಣಿಯಂ ಕೊಲಲೀವುದಿದು ಧರ್ಮವೇ ದೇವ
ತಾಣವಿಲ್ಲ೩[ವೆ]೩ ಮತ್ತವಂಗೆ ಕೇಳೆಲೆ ದೇವ
ಕಾಣಲರಿಯದೆ ಮರುಳ್ತನದಿಂದೆ ಬಂದೆ ಬಂದದಕಿಂದು ಪೂಜಿಸುವೆನು
ಪ್ರಾಣೇಶ ಕೇಳಿಂದು ಮೊದಲಿಲ್ಲಿ ನಾಂ ಸುಳಿಯೆ
ಊಣೆಯಿದು ಮಾನ್ಯರಿಂಗೆಂಬುದಂ ನೀನರಿಯೆ
ಜಾಣತನದಿಂದವನ ನಾಂ ಕೊಲ್ವೆನಾಗದಿರಲವಗೆನ್ನ ಪ್ರಾಣವೀವೆ ೪೯

---

೧ ಣ್ಗ (ಹ) ೨ ಕಣ್ಗಳೆ (ಜ), ಕಣ್ಣಳೆ (ಹ) ೩ ದೆ (ಜ, ಹ)

ಎಂದಿತ್ತ ಬಾರಿಳುಹಿ ಅಗ್ಗವಣಿ ಪತ್ರೆಯಂ
ತಂದೊಂದಗರಿಂದುಂಡುಗಿ ದುರ್ಗಂಧದಿಕ್ಕೆಯಂ
ಚಂದದಿಂ ಸಾರ್ರೈಸಿ ಮಿಂದು ಮತ್ತುಗ್ಗವಣಿಯಂ ತಾನು ಕೊಂಡು ಬಂದು
ಅಂದು ಮಜ್ಜನವೆರೆದು ಲಿಂಗಕ್ಕೆ ಕೋಪಿಸುತೆ
ಎಂದುವಿಂತೀ ದುರಾಚಾರವಿಲ್ಲೆಂದೆನುತೆ
ಗಂಧ ಪುಷ್ಪಂಗಳಿಂ ಪೂಜೆಯಂ ಮಾಡುತಂ ಧೂಪಾರತಿಯನೆತ್ತುತೆ ೫೦

ಆರೋಗಿಸಲು ಕೊಟ್ಟು ಕದವ ಹೊಂದಿಸುತಿಕ್ಕಿ
ಮಾರಾರಿ ಮೆಚ್ಚಲವನಂ ಕೊಲುವೆನೆಂದುಕ್ಕಿ
ವೀರರಸವತ್ತರಿಸುತತ್ತ ಪೊರಮಟ್ಟು ಪೋದಂ ನಗರಕಾ ಪಾರ್ವನು
ವೀರ ಸೌಂದರ ಕೇಳಿದ್ಯಾಯಿತ್ತಲೆನ್ನರಸಿ
ಕ್ರೂರ ಮುಖದಿಂದಲಾ ಪಾರ್ವತಿ ನಮಿಸುತೆನಗೆ
ದೂರುತ್ತ ನುಡಿದಳೆಲೆದೇವ ತಿಳಿಯದು ನಿಮ್ಮ ಮಹಿಮೆ ಬೇರೊಂದು ಪರಿ[1]ಯು[1] ೫೧

ಬೇಡನ ಚರಿತ್ರಮುಂ ಧರಣಿ[3]ಗೆ[3] ವಿ[4]ರುದ್ಧ[4]ಮಿದು
ನೋಡಿ ನಿಮ್ಮಡಿಗಳ್ಗೆ ಮಿಗೆ ಸೈರಿಸಿರ್ದಪುದು
ನೋಡನೋಡಲು ಮುಕ್ಕುಳಿಸಿದುದಕದಿಂ ಮಜ್ಜನಕ್ಕೆರೆದರುಂಟೆ ನೆಲದೊ[5]ಳ್[5]
ಮೂಢತನಕೇನೆಂಬೆ ಮುಡಿದ ಪುವ್ವಗಳಿಂದೆ
ನಾಡೆ ಪೂಜಿಸಿದರುಂಟೆ ಮಾಂಸವರ್ಜಿತವೆ
ಆಡಲೇನದು ಬರಿಯ ಮಾಂಸವಲ್ಲಂ ಪರೀಕ್ಷಿಸೆ ಪುಳಿಂದ[6]ನ[6] ಎಂಜಲಂ ೫೨

ಕರಿಗೊರಳ ನೀನೊಲಿಯಲೇನೆಂಬೆನೊ[7]ತಿ[7]ದಂ
ಚರಣದಿಂ ಪೂಜೆಯಂ ಶಿವ ಶಿವಾ ಎನಲ[8]ಮ್ಮ[8]
ಧರೆಯೊಳಿಂತೆಲ್ಲಿಲ್ಲ ನೀನೊಲಿದೊಡೆನ್ನ[9]ಲ[9]ಮ್ಮ ಇಂತಪ್ಪ ಕಿರುಬೇಡಗೆ
ಸರಸದಿಂ ಸಂತಸಂ ಸುರಿವರೇನೈ ಶಿವಾ
ಭರದಿ ಬರಲವಗೆ ಕದವಂ ತೆರೆವರೇ ಭವಾ
ನೆರೆ ಹುಟ್ಟಿದಂದಿಂ ವಿಭೂತಿಯನಿಡಲ್ಬಲ್ಲನೇ ಶಿವಯೆನಲ್ಬಲ್ಲನೇ ೫೩

೧ ರು (ಹ) ೨ ಯಾ (ಹ) ೩ ಯ (ಹ) ೪ ರೋಧ (ಹ)
೫ ಳು (ಹ) ೬ ನೀ (ಹ) ೭ ತ (ಹ) ೮ ಮ್ಮಾ (ಹ) ೯ ಲೊ (ಹ)

ಎನ್ನವನೆಯೆನ್ನವನೆಯೆಂಬುದಿದು ಮಂತ್ರವೇ
ತನ್ನಯ ವಿನೋದಂ ಶಿವಾರ್ಚನಾ ತಂತ್ರವೇ
ಚೆನ್ನಾಗಿ ಮಿಂದು ಭಸಿತವನಿಟ್ಟು ರುದ್ರಾಕ್ಷಿಯಂ ಧರಿಸಿ ಬಂದು ಪುಷ್ಪಂ
ನನ್ನಿಯಿಂ ಕೊಯ್ದುತ್ತಲಗ್ಗವಣೆಯಂ ತಂದು
ಮುನ್ನ ಮಜ್ಜನಕೆರೆದು ತವಪೂಜೆಯಂ ಮಾಡಿ
ಸನ್ನುತದ ಧೂಪಾರತಿಯನೆತ್ತುತುಪಪಾರವೀವುತ ನಮಸ್ಕರಿಸುತ ೫೪

ಜಪತಪ ಸಮಾಧಿ ಪ್ರದಕ್ಷಣೆಗಳಂ ಮಾಳ್ಪ
ಸುಪಥನಹ ಪಾರ್ವಂಗೆ ಬಾಯಿಮಿಡುಕದಿರ್ದಂ೧ಪಿರಿ
ಅಪಹಾಸಲುಬ್ಧಕಂಗತಿದಯುಂಗೈದಪಿರಿ ಅವನೇನು ನೋಡಿಬಲ್ಲಂ
ಅಪರಿಮಿತ ನಿಮ್ಮನೆಂದುಂ ನುತಿಸಬಲ್ಲನೇ
ಜಪಲ ನಡೆ೨ಯಿಂ ಪ್ರದಕ್ಷಿಣಮೈದೆ ಬಲ್ಲನೇ
ಕುಪಿತಮುಖನಹ ಕಿರಾತಂಗೆ ಮುಚ್ಚಿದ ಭಾವವೇನೆನೆ ನಗುತ್ತಲಾನು ೫೫

ನಿನಗಿದರ ಪರಿಯನೊರೆವೆನು ಗಿರಿಜೆ ಕೇಳಿದಾ
ಘನಪಾರ್ವನಗ್ಗವಣೆ ತಿಳಿ ಮನಂ ಕದಡು ಪಾ
ರ್ವನ ಪೂಜೆಯಿನಿದು ಮನವತಿ ವಿಷಂ ಅವನಿಟ್ಟ ಭಸಿತವವನಂ ಮುಟ್ಟದು
ತನುವಿನೊಳು ತೊಟ್ಟ ರುದ್ರಾಕ್ಷವವನಂ ಸೋಂಕ
ವೆನಿತೇಳ್ವ ಬಾಯ ಮಂತ್ರಂ ಉರದಿ ದುಸ್ತಂತ್ರ
ವಿನಿತಿರ್ದು ಕಾಯವೇಷಂ ಮನದ ಭವಿತನಂ ಎನಗೆ ಸೊಗಸಹುದೆ ಗೌರೀ ೫೬

ಎನ್ನನರ್ಚಿಸುತಿತರರಿಂಗೆ ಕೈಯಾನುವರೆ
ಎನ್ನಂಹೊಗಳಿ ಮತ್ತೆ ಭವಿಗಳಂ ಹೊಗಳ್ವರೆ
ನನ್ನಿಯಿಂ ಸತ್ಯವಿಲ್ಲದ ಪೂಜೆ ಸಸಿನೆಯುಪ್ಪುದೆ ಹಾಡು ಸೊಗಸಪ್ಪುದೆ
ಎನ್ನೊಳುಂ ಮನವಿಲ್ಲದವ ಮುಟ್ಟೆ ಬಡಿದಂತೆ
ಎನ್ನೊಳುಂ ಮನವಿಹಂ ಬಡಿಯೆ ಪೂಜಿಸಿದಂತೆ
ಮುನ್ನರಿಯೆ ಬಾಗಿಲಂ ಕಾಯ್ದಂಬಲಿಯನುಂಡು ಕಲ್ಲಿಲಿಕ್ಕಿಸಿಕೊಂಡುದಂ ೫೭

---

೧ ಪ (ಹ) ೨ ಯಂ (ಹ)

ಗಿರಿಜೆ ಕೇಳೆನ್ನ ಭಕ್ತರೊಳು ಬಹುಮುಖಮುಂಟು
ಬರಿಯ ಪೂಜಕರುಂಟು ನಿಷ್ಠಾಭರಿತರುಂಟು
ಅರಿಯಲ್ಕೆ ಓಜಕರುವೊಲುಮೆಯವರೆಂದುಂಟು ಪಾದಿ ಸಾಧುಗಳುಮುಂಟು
ನೆರೆ ಭಕ್ತಿಯವರುಂಟು ಯುಕ್ತಿಯವರೆಂದುಂಟು
ವರ ಶಕ್ತಿಯವರುಂಟು ಮುಕ್ತ್ಯರ್ಥಿಗಳುಮುಂಟು
ಸರಸದಿಂದವರವರ ಮನವೆಂತು ನಾನೆಂತು ಮೆರೆವೆ ಕೇಳೆಲೆ ಶಾಂಕರೀ ೩೮

ಬೇಡನೆಂದೆನ್ನಪ್ಪ ಕಣ್ಣಪ್ಪನಂ ಜರಿದಿ
ಬೇಡನವನಿಂದ್ರರವಿಚಂದ್ರಾದಿ ಪದವಿಯಂ
ಬೇಡನವನಜಹರಿಗಳಿಪ್ಪ ಸತ್ಪದವಿಯಂ ಎನ್ನನಲ್ಲದೆ ಬೇಡನು
ನೋಡನವನೆನ್ನನಲ್ಲದಲಿತರ ದೇವರಂ
ಹಾಡನವನೆನ್ನನಲ್ಲದಲಿತರ ಹಿರಿಯರಂ
ಕೂಡನವನೆನ್ನನಲ್ಲದಲಿತರ ವಸ್ತುವಿನೊಳವನ ಪರಿಯೆಂತೇಳ್ವೆನು ೩೯

ಅವನಿಗಾವೆಮಗವಂ ಅವನೆಯೆನ್ನಯ ಬಂಧು
ಅವನೆ ಕೇಳ್ಮೃತ್ತೆನಗೆ ನೂತನ [1]ಸುಧಾ[1]ಸಿಂಧು
ಅವನ ಕೈಯೊಳು ಹೊಲಸು ಮನದೊಳಮೃತಂ ಗೌರಿ ಏನೆಂಬೆ ಕಣ್ಣಪ್ಪನಂ
ಅವನ ಮೊಗದೊಳು ಜಲಂ ಮನದಗ್ಗವಣೆ ದೇವಿ
ಅವನ ಮಂಡೆಯ ಪುವ್ವು ಮನದ ಪರಿಮಳವೆನಗೆ
ಅವನ ಕಾಲಾಟವತಿನೇಹ[2]ದರ್ಚನೆಯೆನಗೆ ಅವನೆನ್ನ ತಂದೆ ತಿಳಿಯೇ ೪೦

ಎನ್ನವನೆ ಎಂಬ ಸಲುಗೆಯ ನುಡಿಯೆ ಮಂತ್ರವದು
ಎನ್ನವನೆ ಕೂರ್ತು ಮಾಡುವದು ಶಿವತಂತ್ರವದು
ಎನ್ನಣ್ಣನಾದ ಕನ್ನಣ್ಣನ ಮಹಾಭಕ್ತಿಯಂ ನಿನಗೆ ತೋರ್ಪೆನಗಜೆ
ಸನ್ನಿಯಿಂ ನೀಪೊಗಳ್ದ ಭೂಸುರನ ಭಕ್ತಿಯಂ
ಚೆನ್ನಾಗಿ ನಿನಗದಂ ತೋರ್ಪೆ ಸೈರಿಸು ಶಿವೆಯೆ
ಎನುತ್ತಲಿರಲಿತ್ತಲೇಳನೆಯ ದಿವಸದೊಳಗಾ ಪಾರ್ವಕೋಪದಿಂದೆ ೪೧

೧ ಸದಾ (ಹ)   ೨ ದಾ (ಹ)

ಹರನಿಳಯದೊಳು ಹೊಲಸುಮಾಡುವ ಕಿರಾತನಂ
ಅರವರಿಸದಿಂದು ಕೊಲುವೆನೆನುತ್ತ ಪಾರ್ವನತಿ
ಭರದಿಂದಲೋಡು ಮಸೆವೆತ್ತಲಗನಂ ಕೊಂಡು ಕಾಳತ್ತಿ ಮಲೆಯ ಗಿರಿಯಂ
ತ್ವರಿತದಿಂದೇರುತ್ತಲೈತರಲ್ಕಾನೊಂದು
ಪರಮಾದ್ಭುತದ ಕಾರ್ಯಮಂಗೈದೆ ಲಿಂಗದೊಳ
ಗೆರಡು ನಿರ್ಮಲವಾದ ಕಂಗಳಂ ತೋರುತ್ತಲವರೊಳೊಂದೊಡೆದಂತಿರೆ ೬೨

ನೆತ್ತರೊಸರುತ್ತಿರಲ್ಕಿತ್ತಲಾ ಪಾರ್ವನೋ
ಡುತ್ತ ಬಾಡುತ್ತಲಚ್ಚರಿಯುತಾಳುತ್ತಿದೇ
ನತ್ಯಧಿಕದದ್ಭುತವೆನುತ್ತಂಗಲೀ ದುಸ್ಸೂಚನೆಯು ಭಯಂ ಪೃಥ್ವೀಪತಿಗೋತಿ
ಮತ್ತೆ ಸುತ್ತತ್ತಿತ್ತ ದೇಶಕಳಿವಪ್ಪುದೋ
ಚಿತ್ತಜಾಂತಕನೆ ಬಲ್ಲಂ ಮಹೋತ್ಪಾತವೆನು
ತಿತ್ತಾತನೀಕ್ಷಿಸಲ್ಕಮ್ಮದೆ ಮನಂಗುಂದಿ ಬಂದು ಪೇಳ್ದಂ ಪುರದೊಳು ೬೩

ಪುರಜನಂ ಕೇಳ್ದಿದೇನಚ್ಚರಿಯೆನುತೆ ಬಂದು
ನೆರೆ ಕಂಡು ಕಡುಭಯಂ ತಾಳ್ದು ಪುರಮಂ ಪೊಗು
ತ್ತಿರುತಿರಲ್ಕಿತ್ತ ಕಣ್ಣಂದ ಬೇಂಟೆಯನಾಡುತೆಂದಿನಂದದಲಿ ತಾನು
ಶಿರದ ಕುಸುಮಗಳಿಂದೆ ಮೊಗದಗ್ಗವಣೆಯಿಂದೆ
ಕರದೊಳಿಪ ಮಾಂಸದಿಂ ಪಿಡಿದ ಧನುಶ್ಶರಗಳಿಂ
ಸರಸರನೆ ಬರುತಿಂದು ಪೊತ್ತಾದುದೆನ್ನವಂಗೆನುತೆ ಮನದೊಳ್ಮರುಗುತೆ ೬೪

ಎಂದಿನಂತಲ್ಲಿಂದು ಎನ್ನ ಮನ ಮರುಗುವುದು
ಇಂದೆನ್ನವಂಗಲ್ಲಿ ನೋವುಗಾಣದಲಿರದು
ಮುಂದರಿಯದೆನ್ನವನ ಬಿಟ್ಟೇಕೆ ಬಂದೆನೋ ಏನಾದುದೆಂದರಿಯೆನು
ಬಂಧುರದ ಮೃಗಕುಲಂ ಹೂಂಕರಿಸಿ ಕಾಡುವುವು
ಚಂದದಿಂ ಖಗತತಿಗಳಂಜಿಸುತ್ತಿಹವಿದೇ
ನೆಂದು ಬರುತಿರಲೆಡಭುಜಂ ಕಣ್ಣು ಪುರ್ಬು ಕೆತ್ತಲ್ಮಹಾದುಗುಡದಿಂದೆ ೬೫

೧ ಳಿದು ಸೂ (ಹ) ೨ ಗೆ (ಹ) ೩ ದ (ಹ) ೪ ಶ (ಹ)

ಬರೆ ಮುಂದೆ ಶಿವಲಿಂಗದೊಂದು ಕಣ್ಣೊಡೆದಿರಲು
ಪರಿದಿಳಿವ ನೆತ್ತರೋರಂತೆ ಒಸರುತ್ತಿರಲು
ನೆರೆಕಂಡು ಕಂಗೆಟ್ಟು ಬಾಯ್ಬಿಟ್ಟಳಲಿ ಕಲ್ಲುಮರನಾಗಿ ಬೆರಗುವಟ್ಟು
ಭರದಿಂದೆ ಮತಿಗೆಟ್ಟು ದೆಸೆಗೆಟ್ಟು ಓಡಿದಿರ್ದ
ಶರಧನುಗಳಂ ಬಿಸುಡಿ ಮಾಂಸಂಗಳಂ ಚೆಲ್ಲಿ
ಸರಸದಿಂ ತಾಳ್ದ ಮೊಗದಗ್ಗವಣೆಯುಸ್ಸುಗುಳಿ ತಲೆಯ ಕುಸುಮಗಳನೊಗೆದು ೬

ತಲೆಯುಮುಂ ಕಣ್ಣುಮುಂ ಹೊಯ್ದು ಕೊಳುತ್ತೈತಂದು
ಎಲೆ ತಂದೆ ಎನ್ನವನೆಯೇನಾದುದೆನುತೆಂದು
ಬಲು ಹತ್ತೆ ಸಾರ್ದೈದು ಕಣ್ಣೊಡೆದುದಂ ಕಂಡು ನೆತ್ತರೊಸರುವುದ ಕಂಡು
ನೆಲಕುರುಳಿ ಕೆಟ್ಟೆನಾಂ ಕೆಟ್ಟೆನಾಂ ಬೆಂದೆ ನಾಂ
ಚಲುವ ನಯನಂ ಇದಿಂತೇಕಾಯಿತೆನುತೆ ಎ
ನ್ನೊಲುಮೆಯರಸನೆ ನಿನ್ನ ಕಣ್ಣೊಡೆಯೆ ನೋಡಲಾರ್ಪೆನೆ ನಿನ್ನನಗಲಿ ಕೆಟ್ಟೆಂ ೭

ಪರಮಾಣುವೇಕೆ ಮೇರುವಿನ ಸಖಿತನವೇಕೆ
ಸರಸಿಯೇತಕೆ ಮಹಾರ್ಣವದ ಸಖಿತನವೇಕೆ
ಸರಸದಿಂದೆನಗೇಕೆ ಸಾರ್ದಿ ಸಾಗಿಸುವಡೆನ್ನಳವೆ ನಾನಿರಲಪ್ಪುದೆ
ಎರೆಯನೇ ಎನುತಲ್ಲಿ ರಂಗಮಂಟಪದೊಳಗೆ
ಪೊರಳುತಂ ಮುಂದುಗೆಟ್ಟರಿವುಗೆಟ್ಟುರುಳುತಂ
ನರಳುತಂ ಸಂತೈಸಿಕೊಂಡು ಮೆಲ್ಲನೆ ಬಂದು ಮುಂತೆ ಕಳ್ಳಿರ್ದು ಮರುಗಿ ೮

ಎನ್ನಯ್ಯಯೇನಾದುದೆನಗುಸುರುಯೆಲೆ ತಂದೆ
ಎನ್ನೆವನೆ ಕಣ್ಣನೋವಧಿಕವಾದುದೆ ತಂದೆ
ಚೆನ್ನಾಗಿಯೆನ್ನೊಳೊರೆಯೈ ಮೃಗವರಸಿಕೊಳಲು ಕೋಡು ಮೊನೆಯೇಂ ನಟ್ಟುದೇ
ಎನ್ನುತ್ತ ತಾನುಟ್ಟ ವಸನದಿಂದೊರಸುತ್ತೆ
ನನ್ನಿಯಿಂದೂದುತ್ತೆ ತಳಿರ್ಗಳಿಂದೊತ್ತುತ್ತ
ಲಿನ್ನಿದಕೆ ಹಾ ಕಂಡೆನೊಂದುಪಾಯವನೆನ್ನುತಂ ಸಂತಸಂ ತಾಳ್ದಸು ೯

೧ ತೆ (ಹ)

ಈಗಳೀ ಕಣ್ಗೆನ್ನ ಕಣ್ಣಿತ್ತು ನೋಡುವೆಂ
ಆಗದೊಡೆ ಮೇಲೆನ್ನ ತಲೆಯನೀ ಕಣ್ಗೀವೆ
ಬೇಗದಿಂದಸುವನೊಪ್ಪಿಸುವೆನಾಗದುದಾವುದೆಂದೊಂದು ಶರವನುಗಿದು
ರಾಗದಿಂ ಮೀಂಟುತೊಂಡೆದಿರ್ದ ಕಣ್ಗೊತ್ತೆ ಸೊಗ
ಸಾಗಿ ಥಳಥಳಿಸೆ ಕಣ್ಣಿಂಪನಾನಂದಮಯ
ನಾಗುತಿರೆ ಮತ್ತೊಂದು ಬಲಗಣ್ಣೊಸರೆ ಕಣ್ಣನೋಡಿ ಕಲಿಯಾಗುತೇನಂ ೭೦

ಇನ್ನಂಜೆನಿನ್ನಂಜೆನಿನ್ನೊಂದು ಕಣ್ಣುಂಟು
ಎನ್ನವನೆಯೆನ್ನವನೆ ಬಳಿಕೆನಗೆ ನೀನುಂಟು
ಎನ್ನುತ್ತೆ ಸದ್ಭಕ್ತಿಕುಶಲನಾನಂದದಿಂದೊಡೆದುವೊಸರುವ ಕಣ್ಣಿಗೆ
ತನ್ನುಂಗುಟುವನೊತ್ತಿ ಕಣ್ಣುಗುರುಪಮಾಡುತ್ತ
ಭಿನ್ನಿಸದ ಧೈರ್ಯದಿಂ ತನ್ನ ಕಣ್ದೆಗೆವಲ್ಲಿ
ಸನ್ನುತದ ಗಣಪದವಿಗೆಳಸಿ ಕಣ್ಣಿಡುವಂತೆ ಕಣ್ಣಿಟ್ಟನೆನ್ನ ಕಣ್ಗೆ ೭೧

ಆ ಕ್ಷಣದಿ ಲಿಂಗದೊಳು ಕೈಯೆತ್ತಿ ಪಿಡಿವವನಿ
ಗಕ್ಷಿಗಳನಿತ್ತು ದಶಭುಜ ಪಂಚಮುಖಿಗಳ ಸು
ಲಕ್ಷಣದ ರೂಪಮಂ ತೋರಿ ಕಣ್ಣಪ್ಪನಂ ತೆಗೆದಪ್ಪಿ ಬಿಗಿಯಪ್ಪಲು
ದಕ್ಷಾರಿ ಬಾಹುಲೇಯ ಭೃಂಗಿ ಹೇರಂಬ
ಉಕ್ಷ ಮೊದಲಾದ ನಾನಾ ಪ್ರಮಥ ಗಣನಿಕರ
ದಾಕ್ಷಾಯಣಿಯ ಸಹಿತಲೈತಂದರಲ್ಲಿಗೆ ಕುಸುಮವೃಷ್ಟಿಯಂ ಕರೆಯುತ ೭೨

ಕಂಡಿರಾ ಗಣನಿಕರವಣ್ಣ ಕನ್ನಣ್ಣನಂ
ಕಂಡಿರಾ ಸುರವಿತತಿ ಅಪ್ಪ ಕನ್ನಪ್ಪನಂ
ಕಂಡಿರಾ ಶರಭಾದಿ ನಂದೀಶರೇ ಈತನೆನ್ನಾರ್ಯ ಕನ್ನಾರ್ಯನಂ
ಕಂಡಿರಾ ಗಿರಜೆಯೆನ್ನಯ್ಯ ಕನ್ನಯ್ಯನಂ
ಕಂಡೆಯಾ ಶಿವೆಯೆ ಮನ್ಮಾನಸ ಸುಶಯ್ಯನಂ
ಕಂಡಿರೇನೈಯೆಂದು ಸಂತಸಂಮಿಕ್ಕು ನಾಂ ಕಣ್ಣಂದನಂ ಪೊಗಳ್ದನು ೭೩

---

೧ ಡಗಿ (ಹ)  ೨ ನ್ನ (ಹ)  ೩ ಯ (ಹ)

ಭಾಪುರೇ ಕಣ್ಣಂದ ಪೂತುರೇ ಕಣ್ಣಂದ
ಭಾಪು ಮಝುಭಾಪು ಮಝುಪೂತುರೇ ಕಣ್ಣಂದ
ರೂಪಿಗಳಿಗೆಲ್ಲ ನಾಂ ಕಣ್ಣೀವನೆನಗೆ ನೀಂ ಕಣ್ಣಿತ್ತೆಯಾ ಕಣ್ಣಪ
ಈ ಪರಮ ಪುಷ್ಪಕದಿ ಕುಳ್ಳಿರೆನೆ ದೇವ ಈ
ರೂಪಿನಿಂ ಬರಲೊಲ್ಲೆಯೆನಲೊಂದು ನಿರ್ಮಲಂ
ವ್ಯಾಪಿಸಿಹ ಕಾಯಮಂ ತಂದದರೊಳಾತನಂ ಪೊಗಿಸಿ ಪುಷ್ಪಕದೊಳಿರಿಸಿ ೭೪

ದುಂದುಭಿಗಳಂಬರದಿ ಧಾಂ ಧಣಧಣಾಂ ಧಣೆತ
ವೆಂದೆಂಬ ರವದೊಡನೆ ಪೊಗಳುವಾರ್ಭಟದೊಡನೆ
ಮುಂದುಲಿವ ಕಹಳಾವಿತತಿಯೊಡನೆ ಸುರಗಣಗಣೇಶ್ವರರ ನಿಕರದೊಡನೆ
ಬಂದು ಕೈಲಾಸಮಂ ಪೊಕ್ಕು ಸಂತಸದಿ ನಾ
ನಂದು ಭದ್ರಾಸನದೊಳೊಪ್ಪಿರುತ್ತಾಗ ಕ
ಣ್ಣಂದನಂ ಕರೆದು ಗಣಪದವಿಯಂ ಕೊಟ್ಟೆನ್ನ ಬೀಳುಡಿಗೆಯಂ ಕೊಟ್ಟನೈ ೭೫

ಅಲ್ಲಿಪ್ಪ ಸತ್ಕಮಥರೀತನ ಚರಿತ್ರಮಂ
ನಿಲ್ಲದಾಲಿಸಿ ನಿರೀಕ್ಷಿಸುತಿರ್ದರಿವ ಮುಗ್ಧ
ನುಲ್ಲಾಸ ಭಕ್ತನೆನುತಂ ಮುದಂಬೆತ್ತವನನಿತ್ತಬಾಯೆಂದವರಿಂ
ಸಲ್ಲಲಿತ ಭಕ್ತನಹ ಕಣ್ಣಪ್ಪನಮಲ ಪದ
ಪಲ್ಲವಂಗಳನೈದೆ ನಿನ್ನಯ ಸುಹೃತ್ಕಮಲ
ದಲ್ಲಿ ಜಾನಿಸು ಎನೆನಿಸುತ ಮತ್ತವನ ಪೆಸರನುಂ ವಾಚಿಸೈ ನಂಬಿ ನಂಬಿ ೭೬

ಅಂತು ಸಂಧಿ ೧೦ ಕ್ಕಂ ಪದಗಳು ೯೬೩ ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

---

೧ X (ಹ) ೨ X (ಹ)

## ಸಂಧಿ : ೧೧

**ಸೂಚನೆ :**

ಲಿಂಗವಮು ಕೊಂಕಿರಲ್ಸಸಿನೆಯಪ್ಪೊಲು ನೆಗಂಳ್ದ೧
ಅಂಗಜಾರಿಗೆ ನಿಜಾತ್ಮಜೆಯು ಮುಡಿಯುನ್ನಿತ್ತ
ಕೊಂಗುಲಿಯುರಾ ಮಾನಕಂಜರರ ಕಥೆಯುನಾಕರ್ಣಿಸಿದನಾ ಸೌಂದರಂ

ಇನ್ನೊರ್ವ ಶರಣನಿತಿಹಾಸಮಂ ಪೇಳ್ವೆಂ ನಾಂ
ನನ್ನಿಯಿಂದಾಲಿಸೈ ನಂಬಿ ಚೋಳಾವನಿಯೊ
ಳುನ್ನತವೆನಿಸಿ ಮೆರೆದುದೊಂದು ಕಡವೂರೆನಿಪ್ಪತುಲ ಪುರವಾ ಪುರದೊಳು
ಮನ್ನಣೆಯೊಳಿರ್ದ೨ ಕೊಂಗುಲಿ[ಯು]ನೆಂದುಂ ಭಕ್ತಿ
ಸನ್ನುತಂ ಬಹು ಶುಚಿ ಶಿವಬ್ರಾಹ್ಮಣಂ ಗುಗ್ಗು
ಳನ್ನಿಕ್ಕುತಂ ಲಿಂಗಮಂ ಪೂಜಿಸುವ ನೇಮವೆನ್ನವರ್ಗೀವ ನೇಮಂ ೧

---

೧ ಳ್ವ (ಜ) ೨ ರ್ಪ (ಹ)

ಇಂತು ನೇಮಂಗಳಂ ತಾಳ್ದು ಕೊಂಗುಲಿಯುರ
ತ್ಯಂತ ಸುಖದಿಂದಿರಲ್ ಭಕ್ತರೆನಿತ್ಯೈತರಲ್
ಸಂತಸದೊಳವರ್ಗಳಂ ನಾನೆಂದರಿದು ನೆನೆದುಮಂ ಬೇಡಿದುದನೀವುತಂ
ಕಂತುಹರ ಶರಣರೆನ್ನಯಹರಣರೂಪರೆನು
ತಂತವರೆಯೆನ್ನ ಸಂಪದವೆನುತೆ ಭಕ್ತಿಯಿಂ
ತಾಂ ತವಕದಿಂದೆ ಲಿಂಗಾಲಯಕ್ಕೈಶಂದು ನವ್ಯಧೂಪವನಿಕ್ಕುತ ೨

ಎಲೆದೇವ ಕಂಪುಳ್ಳ ಕಂಪನಾಘ್ರಾಣಿಸೈ
ಎಲೆದೇವ ಸೊಂಪುಳ್ಳ ಸೊಂಪನೀಂ ಕೈಕೊಳ್ಳೈ
ಎಲೆದೇವ ಸಕಲಪರಿಮಳ ಸುಖಾವರಣನೆ ಗಂಧವೃಂದಘ್ರಾಣನೇ
ಎಲಲೆ ಅವಧಾರೆಂಬ ಸರವಂಬರಂ ಮುಟ್ಟೆ
ನಲಿದು ಬೀಸುವ ಧೂಪವೆಣ್ದೆಸೆಗಳಂ ಮುಟ್ಟೆ
ಸಲೆಯಿಂತು ಧೂಪದುರು ನೇಮದಿಂ ಪಲಕೆಲವು ವತ್ಸರಂ ನಡೆವುತ್ತಿರೆ ೩

ಶರಣರುಂ ಬೇಡಿದುದನೀವುತ್ತಲಾತನಿರ
ಲರಿದಾನು ವಿತ್ತಮಂ ವೃತ್ತಿಯಂ ಕಳೆವುತಿರೆ
ಸರಸದಿಂದೆನ್ನುತ್ತಲಾತನಂ ಮಾಡಿಕೊಂಬರ್ಥಿಯಿಂ ನಾನಿರುತಿರೇ
ನೆರೆಧನಂ ತೀರುತಿರೆ ಮನವಲ್ಲಿ ಪೆರ್ಚುತಿರೆ
ಭರದಿ ದಿನದಿನಕೆ ಗುಗ್ಗುಳ ನೇಮವಸೆವುತಿರೆ
೧ನಿಂರುತಮುಪವಾಸಮಿರ್ದಾದಡೆಯುಂ ನಡೆಸುವಂ ಕೊರತೆಯೆನಿಸದೆ ವ್ರತಕ್ಕೆ ೪

ಅಂಜೆನಂಜೆಂ ದೇವ ನೇಮಮಂ ತಪ್ಪುವೆನೆ
ಅಂಜಿ ನೇಮಂ ತಪ್ಪೆ ನಿಮ್ಮೊಳಾನೊಪ್ಪುವೆನೆ
ಕಂಜಶರಹರ ನಿಮ್ಮ ಧೂಪ೩ದರ್ಶನೆಗೀಗೆ ಪೊನ್ನನಾರ್ಜಿಸುವೆನೆನುತೆ
ತಾಂ ಜರೆದು ಪೊರಮಟ್ಟನಾವೂರನತ್ತಿತ್ತ
ರಂಜಿಸುವ ಪುರಗಳಂ ನೋಡುತ್ತ ಬರೆಮುಂದೆ
ಮಂಜುಲವದೆನಿಸಿತ್ತು ತಿರುಪನಂದಾಳೆಂಬ ಪುರವಲ್ಲಿಗೈತಂದನು ೫

೧ ಮಿ (ಹ) ೨ X (ಹ) ೩ ದಾ (ಹ)

ನರಪಕುಲಸಿಂಹನೆನಿಸುವ ಚೋಳನಾಪುರ
ಕ್ಕರಸಾಗಿರಲ್ಕೆ ಮತ್ತಾಪೊಳಲೊಳಿಹ ಲಿಂಗ
ಮುರುವಾಮಭಾಗವದು ಓರೆಯಾಗಿರೆ ಕಂಡು ಭೂಪಕುಲತಿಲಕನಂದು
ಪರಮಾತ್ಮನೋರೆಯುಂ ತಿದ್ದಿಸುವೆನೆಂದಾತ
ಭರದಿಂದೆ ಕೆಲಬಲಗಾಸಂನಗಿಸುತ್ತ ಬಡಿಸಿ
ಭರವಶದ ಹಾರೆಗಳನಿಟ್ಟೊತ್ತಿ ಮೀಂಟಲದನೆಳ್ಳನಿತು ಚಲಿಸದಿರಲು ೭

ಕಲಿಮನದ ಚೋಳನಿದು ಪೊಸತೆನುತ್ತಂ ತಿಳಿದು
ಬಲವಾದ ಕುಂಜರಂಗಳನೈದೆ ತರಿಸಿದಂ
ಚೆಲುವಾದ ರಜ್ಜುಗಳ್ಬಂಧಿಸುತ್ತೆಳಿಸಿದನದೇನೆಂಬೆನದ್ಭುತವನು
ಇಳೆಯನುಂ ನೂಲಿನೆಳೆಯಿಂ ಕಟ್ಟಿ ತೆಗೆವಂತೆ
ಸಲೆ ನಭವನಬ್ಜಸೂತ್ರದಿ ಕಟ್ಟಿ ತೆಗೆವಂತೆ
ಬಲುಹಿನಿಂದಾನೆಗಳೆಳೆವುತಿಳೆಗೆಪೊರಳಿರ್ದುವು ಚಲಿಸದದುವಣುಮಾತ್ರವು ೭

ಅವನಿಪತಿ ಕಂಡಿದಂ ಚೋದ್ಯಮಂ ಬಡುತಿರಲ್
ಸುವಿವೇಕ ಮಂತ್ರಿಗಳ್ಪೇಳ್ದರೆಲೆ ಜೀಯ ಈ
ಶಿವಲಿಂಗದಿರವರಿಯೆ ಹರಿವಿರಂಚಿಗಳಿಂಗಗೋಚರಂ ನರರಿಗಳವೇ
ಶಿವನ ಭಕ್ತರ ವಶದೊಳಿರುತಿರ್ಪುದೀಲಿಂಗ
ವವರೆಂತು ಮಾಡೆ ಮಾಡಿಸಿಕೊಂಬುದೀ ಲಿಂಗ
ವವರೆತ್ತ ಕರೆಯಲತ್ತಂ ಬರ್ಪುದೀಲಿಂಗವವರಿಂದಲಪ್ಪುದೆನಲು ೮

ಇದನರಿವುತರಸೈದು ಸಾವಿರ ಸುಪೊಂಗಳಂ
ಮುದದಿಂದೆ ತರಿಸಿ ಕಟ್ಟಿಸಿ ಬೀದಿ ಬೀದಿಯೊಳ್
ಒದರುತ್ತೆ ತಿರುಗುತಿಹುದೆಂದು ಚರರಂ ಕಳುಹೆ ಬಂದವರು ಬೀದಿಯಲ್ಲಿ
ಸದಮಳವೆನಿಪ್ಪ ಲಿಂಗದ ಡೊಂಕ ತಿದ್ದಲವ
ಗಧಿಕವಹವೀ ಪೊಂಗಳಂ ಕೊಡುವೆವೆನುತೆ ಬಹು
ಚದುರತ್ವದಿಂದೆ ಚರರುಲಿವುತ್ತೆ ಕೂಗುತ್ತೆ ಚರಿಸುತ್ತಲಿರುತಿರ್ದರು ೯

---

೧ ವ (ಹ) ೨ ೪ (ಹ)

ಕೊಂಗುಲಿಯ ಕಲಿಯರಿದನಂ ಕೇಳುತಂ ಸಂತ
ಸಂ ಗೊಳುತ್ತಂ ಘೂಪಾಡಂರ್ಜನಂ ಚೆಲುವಾಯ್ತು
ಮಂಗಳಾತ್ಮಕ ಭಕ್ತರಿಷ್ಟಾರ್ಥವೀವುದಕೆ ಭಕ್ತಿಹಸನಾದುದೆನ್ನ
ಇಂಗಿತಕಿದೇನರಿದು ಇದುದಾವದೊಡ್ಡಿತಂ
ಲಿಂಗಮಂ ನೆಟ್ಟನೆನೆ ಮಾಳ್ಪುವಾಡಿಸಾಧ್ಯಮೇ
ಪೊಂಗಳುಂ ಸಿಕ್ಕವಿನ್ನೇನೆಂದು ಮುದವಲರಿವಿತ್ತಮಂ ಕೈಕೊಂಡನು ೧೧

ಭರದೀದಲಾ ಧನಂ ತಂದು ಲಿಂಗದ ಮುಂದೆ
ಸುರಿದು ನೇಹಂಗೊಂಡುಂ ಏನಯ್ಯ ಶಿವನೆ ನೀ
ನಿರದೆ ಗಿರಿಜಾದೇವಿಯುತ್ತಲೊಲಿದ್ಯಾಮತ್ತೆ ನರಪನೊಳು ಮುನಿವುತ್ತಲೀ
ಏರಸದಿಂ ಬಾಗಿದ್ಯಾ ಬಾಗಿ೪ರ್ದ೪ ಭಾಗಮುಂ
ನೆರೆ ನೋಯದೇ ದೇವ ಸಸಿನೆಯಿರಲಾಗನೇಂ
ಕರುಣಾಶರಧಿಯೆನುತೆ ಮಜ್ಜನಕ್ಕೆರೆದು ಗಂಧಾಕ್ಷತಿ ೪ಸು೪ಪುಷ್ಪಂಗಳಿಂ ೧೧

ಒಲವಿನಿಂ ಪೂಜಿಸುತ್ತಂ ಮನಕೆ ಬಂದನಿತು
ಚೆಲುವ ಗುಗ್ಗುಳವನಿಕ್ಕುತಾರತಿಯನೆತ್ತುತಂ
ಸಲೆ ಸುಧಾನ್ನವನಿತ್ತು ಆರೋಗಿಸಯ್ಯ ಕಣ್ಣಪ್ಪನ ಸುಭಕ್ತಿ ಸುಖಿಯೇ
ಕಲುಷಹರ ದೇವ ನೀನಾರೋಗಿಸಯ್ಯ ತ್ರಿ
ಮಲದೂರ ಶಂಭು ನೀನಾರೋಗಿಸಯ್ಯ ನಿ
ಶ್ಚಲ ಭೋಗಿಯಾರೋಗಿಸೈಯೆಂದೆನುತ್ತಿತ್ತು ಸತ್ಪ್ರಸಾದವನೆ ಕೊಂಡು ೧೭

ಮತ್ತೆ ಧೂಪವನಿಕ್ಕಿ ಸದ್ಭಕ್ತ ಸಂತತಿಗೆ
ವಿತ್ತವೆಲ್ಲವನುಳಿಯದಂತಿತ್ತು ಕಾಯದೊಳು
ಉತ್ತಮೋತ್ತಮವೆನಿಪ ಭಸಿತ ರುದ್ರಾಕ್ಷೆಗಳನಾಂತು ನೂತನವಸನಮಂ
ಒತ್ತಿ ಬಿಗಿದುಟ್ಟು ಬೊಬ್ಬಿಟ್ಟಲೆಲೆ ದೇವ ನೀಂ
ಚಿತ್ತವಿಟ್ಟಾಲಿಪ್ಪುದು ಎನ್ನ ಬಿನ್ನಪವನುಂ
ಅತ್ತಿತ್ತ ಬಾಗಿರ್ಪುದೊಳಿತಲ್ಲ ಸಸಿನೆಯಪ್ಪುದು ಲೇಸುಲೇಸರಿಯೆಲೈ ೧೩

೧ ದಾ (ಹ) ೨ ದು (ಹ) ೩ ರ್ಪ (ಹ) ೪ X (ಹ)

ಹರಹರ ಮಹಾದೇವ ಶಿವ ಶಿವಯೆನುತ್ತೆ ಮೃದು
ತರವಪ್ಪ ಹಂಸತೂಲಮನದಂ ತರಿಸಿ ಭಾ
ಸುರಲಿಂಗಮದುರುತರಶ್ರೀಕಂಠದಲ್ಲಿರಿಸಿ ದಿವ್ಯವಸನಗಳನೊಲಿದು
ತರತರದಿ ಮೇಲಿರಿಸುತರ್ಧ ಚಂದ್ರಾಯುಧಕೆ
ನೆರೆ ನೇಣ್ಗಳಂ ಬಿಗಿವುತಾ ಪಾಶಮಂ ಲಿಂಗ
ದುರುಕಂಠದೊಳ್ ಬಿಗಿದನೇನೆಂಬೆನೆಲೆ ನಂಬಿ ಪಾಶಹರನಾನೆನ್ನುವಂ ೧೪

ವರಭಕ್ತಿ ಪಾಶದಿಂ ಬಂಧಿಸಿದನಾ ಭಕ್ತ
ನಿರದಲಾ ಚಂದ್ರಹಾಸವನೈದೆ ತನ್ನ ಸುಂ
ದರವೆನಿಪ ಕಂಠವೊಳಗಿಡಲದಂ ನೋಡಿ ಚೋಳಾದಿಗಳ್ಬೆರಗಾದರು
ಭರದಿಂದಲಾ ಶರಣನೆತ್ತ ತಿರುಗಿದಪತ್ತ
ಧರೆಯೊಡನೆ ಲಿಂಗವದು ಘಿರ್ರೆಂದು ತಿರುಗುತಿಹು
ದರರೆ ಇತದ್ರುವದಿದ್ಭುತವನದೇನೆಂಬೆ ಕಮಲಭವಾಂಡ ಕಂಪಿಸಿದುದು ೧೫

ಜನನಿಯಳ ಕರಗಳಂ ಪಿಡಿದು ಶಿಶು ಬರ್ಪಂತೆ
ನೆನೆದತ್ತ ತೆಗೆದತ್ತ ನುಡಿದತ್ತಲಾ ಲಿಂಗ
ವಸುವಿನಿಂ ಕೊಂಗುಲಿಯರಿಷ್ಟವಿದ್ದಂತಾಗಲಾಲಿಂಗದೊಳಗೆ ಸಾನು
ಘನಪಂಚಮುಖ ದಶಭುಜಂಗಳಿಂ ತೋರುತ್ತ
ಲನಘ ಕೊಂಗುಲಿಯರಂ ತೆಗೆದಪ್ಪಿಕೊಂಡಾಡ
ಲನಿತರೊಳು ಪುಷ್ಪಕಂವೆರಸಿ ಗಣವರರೊಡನೆ ಬಂದನಾ ನಂದೀಶನು ೧೬

ಬಂದ ಪುಷ್ಪಕದೊಳಾನಂದದಿಂ ಕೊಂಗುಲಿಯ
ನಂದು ಕುಳ್ಳಿರಿಸಿ ಗಣಸಂದೋಹದಿಂದೆ ಮಕ
ರಂದ ಕುಸುಮದ ವೃಷ್ಟಿಯಿಂದೆ ಭೇರೀರವಗಳಿಂದೆ ಕೈಲಾಸಪುರಮಂ
ಚೆಂದದಿಂ ಪೊಕ್ಕು ನಾಂ ಬಂಧುರದ ಭಕ್ತನಿಗೆ
ಮುಂದೆ ಗಣಪದವಿಯನು ಕುಂದದಂತಿತ್ತೆನಿದ
ರಿಂದೆ ಕೊಂಗುಲಿಯೆನ್ನ ತಂದೆಯೆಂತೆಂದು ಮುದದಿಂದೆ ನೆನೆಯೈ ಸೌಂದರಾ ೧೭

---

೧ ತದ್ರೂಪವ (ಹ)   ೨ ಳ (ಜ)

ಒರೆವೆನಾಲಿಸು ನಂಬಿ ಮತ್ತೆ ಚೋಳಾವನಿಯೊ
ಳಿರುತಿರ್ದುದೊಂದು ಕಂಜಾರವೆಂದೆಂಬ ಪುರ
ವರಿಯಲಾ ಪುರದೊಳಿರುತಿರ್ದನೊರ್ವಂ ಭಕ್ತ ಬಹುಭಕ್ತಿಯಾತುರದಲಿ
ಪರಮ ಷತ್ಯವೆ ತಾಯಿ ಸುಜ್ಞಾನವೇಪಿತಂ
ವರದಯಾಧರ್ಮಗಳ್ಪೊಡಹುಟ್ಟಿದರ್ತನಗಿ
ತರಬಂಧುವೆಂದಿಲ್ಲ ಭಕ್ತರೇ ಬಂಧುಗಳ್ಬೇರಿಲ್ಲವಾಪ್ತರವರೇ ೧೮

ಸಲ್ಲಲಿತ ನಿಜಸಂಪದಂ ೧ಭಕ್ತಸಂಪದಂ
ಎಲ್ಲ ತನ್ನಯ ಧನಂ ಶರಣರಿಚ್ಛಾ ಧನಂ
ಇಲ್ಲನೆ ಕುಬೇರಂಗೆ ಕಡವನೀವಂ ಮಹಾವ್ಯವಹಾರಿಯೆನಿಸುತ್ತಲೀ
ಉಲ್ಲಾಸದಿಂ ಹೊನ್ನುವಂ ತನ್ನುವಂ ಕೊಟ್ಟು
ನಿಲ್ಲದಲೆ ಭಕ್ತಿಯಂ ತನ್ನತ್ತ ಕೊಂಬುವಂ
ಬಲ್ಲಿದರೆನಿಪ ಭಕ್ತರುಂ ಚೋಳರುಂ ಬರಲು ಸಮಯಾಸಮಯವಿಲ್ಲವು ೧೯

ಎನಿತು ಭಕ್ತರ್ಬರಲು ಧನವನೀವಂ ಮತ್ತ
ಮೆನಿತು ಭಕ್ತರ್ಬರಲು ತನುವನೀವಂ ನಿಲ್ಲ
ದೆನಿತು ಭಕ್ತರ್ಬರಲು ಮನವನೀವಂ ಭಕ್ತವಿತತಿಯಂ ಬಿಟ್ಟಗಲನು
ಘನಭಕ್ತರಿಲ್ಲದ ದಿನವತೃಪ್ತಿಯುಪವಾಸ
ವನುವಿನಿಂದವರಿರ್ದಡುಪವಾಸವೇತೃಪ್ತಿ
ಯೆನಿಸಿ ನಿಚ್ಚಂತಾನು ಕಂಜಾರ ದೇವರಂ ಪೂಜಿಪನದೇಂ ವರ್ಣಿಪೆಂ ೨೦

ಮಿಂದು ಮಡಿಯುಟ್ಟು ತಲ್ಲಿಂಗಾಲಯಕೆ ನಡೆ
ತಂದು ಗಂಧಾಕ್ಷತೆಗಳಿಂದೆ ನವಕುಸುಮಂಗ
ಳಿಂದೆ ಲಿಂಗಾರ್ಚನಂಗೈದು ಸಂತಸಗಡಲೊಳೋಲಾಡುತಂ ನೋಡುತಂ
ಅಂದು ಲಿಂಗವನು ತರ್ಕೈಸುತಂ ಸದ್ಭಕ್ತ
ಸಂದೋಹದಿಷ್ಟಮಂ ಸಲಿಸುತ್ತ ಸಲ್ಲೀಲೆ
ಯಿಂದೆ ತಾಂ ಪಾದೋದಕಪ್ರಸಾದಂಗಳಿಂ ತಣಿವುತ್ತ ಮಣಿವುತ್ತಲೀ ೨೧

---

೧ X (ಹ)

ಸನ್ನುತಂ ಮಿಗೆ ಭಕ್ತಿಗೋಷ್ಠಿಯಿಂ ಪೆಚ್ಚುತಂ
ನನ್ನಿಯಿಂದರಮನೆಗೆ ಬಂದು ಸತಿಯುಂ ತಾನು
ಮನ್ಯೋನ್ಯ ಸುಖದೀವಲಿರುತೊಂದು ದಿವಸವಾತನ ಸತಿಯುಳಿಂತೆಂದಳು
ಎನ್ನರಸ ಕೇಳೊಂದುಪುಂ ಕೊರತೆ ನಮಗಿಲ್ಲ
ಏನ್ನೊಂದಭೀಷ್ಟವೆನಗಿರ್ದಪುದವದೇನೆನಲ್
ಚೆನ್ನೆಸೆವ ಪುತ್ರನಿಲ್ಲದಡೇನಿರಲ್ಕೇನುಯೆನಿತರ್ಥವಿರ್ದಡೇನು ೨೨

ಎಲ್ಲಮುಂ ವ್ಯರ್ಥವಲ್ಲವೆ ಜೀವದೊಲ್ಲಭಾ
ಉಲ್ಲಾಸದಿಂದೆನ್ನ ನುಡಿಯನಾಕರ್ಣಿಸುತೆ
ಸಲ್ಲಲಿತ ರಾಜನಹ ಪುತ್ರನಂ ಕೊಡುವುದೆಂದಭವನಂ ಬೇಡೆಂದಳು
ನಲ್ಲೆಯಾಡಿದ ನುಡಿಗಳಂ ಕೇಳಿ ಕಿವಿಮುಚ್ಚಿ
ತಲ್ಲಲ್ಲ ನುಡಿಯದಿರಿದಂ ದೇವರಂ ಬೇಳ್ಪ
ಸೊಲ್ಲುಗಲಿವರೆ ಕಾಂತೆ ಬೇಡಲಾಗದು ಮತ್ತು ಮತ್ತೀವುದೇ ಕಲಿವುದು ೨೩

ಶಿವನಿಚ್ಛೆಯಲ್ಲೆ ಬೇರೊಂದಿಚ್ಛೆ ನಮಗುಂಟೆ
ಶಿವನಿರಿಸಿದಂತಲ್ಲದಿನ್ನು ಬೇರಿರಲುಂಟೆ
ಸುವಿವೇಕವಲ್ಲವೀ ಬಯಕೆ ಬೇಡೆಂದೆನುತ ಪಲವು ಪರಿಯಿಂದೆ ಪೇಳೆ
ಯುವತಿಗಾಕಾಂಕ್ಷೆಯುಡುಗದೆ ಕಂದಿಕುಂದಿ ಪ್ರತಿ
ದಿವಸಂದಂ ಬಿಡದಲಲವುತ್ತಿರಲು ನೋಡುತಾ
ಪುವಿಮಲ ಶರಣನಂದು ಸಲಿಸಬೇಕಿವಳಿಷ್ಟವೆನುತ ಮನದೊಳ್ತಾಳುತ ೨೪

ಮೃಡನಿಳಯುಮಂಪೊಕ್ಕು ನಿತ್ಯ ನೇಮಂಪಾಡಿ
ಸಡಗರದಿ ಬೇಡಲ್ಕವಂಗೆ ನಾಂ ಮನಮಾಡೆ
ಕೊಡುಯೆಂದು ಬೇಡುವುದು ಕಷ್ಟವಯ್ಯೋ ಭಕ್ತಿಯಿಂತಾಯಿತೇ ಎನುತ್ತೆ
ಮಡದಿಯಾಗ್ರಹವಿಶಿದುಂಶಿ ಬೇಡಲಾನೊಲ್ಲೆಯೆನು
ತೊಡನೆ ಬೇಡಲ್ಕೆ ಬೇಡದಲಿರಲ್ಕಂಜುತ್ತೆ
ಕಡುಕಷ್ಟದಿಂ ಕುರ್ಗಿ ತರ್ಗಿ ಪುತ್ರನ ಮರೆದು ಪುತ್ರಿಯುಂ ಕೊಡುಯೆಂದನು ೨೫

---

೧ ಗಿರ್ಪು (ಹ) ೨ ದಿಂ (ಜ) ೩ ದಂ (ಹ)

ಎಲೆದೇವ ಎನ್ನಂಗನೆಯಳಿಷ್ಟಮಂ ನೀವು
ಒಲವಿಂದದಿಂ ಕರುಣಿಸುವುದೆನುತ್ತಂ ತೀರ್ಥ
ಜಲವನುಂ ಕೊಂಬ ಸಮಯದಿ ಜಡೆಯೊಳಿಹ ಕಮಲಮಂ ತೆಗೆವುತವನ ಕರದೊಳ್
ಚೆಲುವಾಗಿ ನಾನಿರಿಸಲವನು ಲಿಂಗಕ್ಕೆರಗಿ
ಫಲವಾದುದೆನ್ನಿಷ್ಟವೆನುತೆ ಗೃಹಕೈತಂದು
ಲಲನೆಗೀವಾರ್ತೆಯಂ ಪೇಳಲವಳತಿ ಮುದಂದಾಳ್ದಳುಂತ್ಸುಕಂದಿಂದಲೀ ೨೨

ಪರಮ ದಂಪತಿಗಳತಿ ಹರುಷದಿಂದಿರುತಿರಲು
ಸರಸಿಜಾನನೆಗೆ ಗರ್ಭಂ ತೋರಿ ಬರಬರಲು
ಭರಿತ ನವಮಾಸವಾಗಲ್ತರುಣಿ ತರುಣಿಯಂ ಪಡೆದಳುತ್ಸುಕ್ಯತ್ಸವದಲೀ
ನೆರೆ ಬಂಧುಗಳ್ಕೂಡಿ ನೋಡುತ್ತೆ ಪಾಡುತ್ತೆ
ವರಜಾತ ಕರ್ಮಂಗಳಂ ತಾವು ಮಾಡುತ್ತೆ
ತಿರುಮುಡಿವೊಡೆಯಳೆಂದು ನಾಮಕರಣಂಗೈದು ಸದ್ಭಕ್ತಸಂತಾನಕೇ ೨೭

ಹೊನ್ನ ಮಳೆಯಂ ಕರೆದು ತಂದೆತಾಯ್ಗಳು ನೋಡು
ತಳನ್ನಲಿವುತಂ ಭಕ್ತ ಜನರ ಪದಬಲದಿಂದೆ
ಸನ್ನುತ ಶಿಶುವನ್ನೈದೆ ಸಲಹುತಿರೆ ಮೊಲೆವಾಲನೀಂಟಿ ಬಾಲ್ಯಂದಾಂಟುತೆ
ನನ್ನಿಯಿಂ ಬಳೆವುತಿಹಳಿಂದು ದಿನ ಕಳೆಯಂತೆ
ಚೆನ್ನಾಗಿ ಬಳೆವುತಿಹಳಾ ಕಲ್ಪಲತೆಯಂತೆ
ಪುಣ್ಯಮಂ ಪುತ್ರನ್ನುಂ ತಾನೆನಿಸಿ ಪಡೆದರ್ಗೆ ಕನ್ನೆಯುಂ ಬಳೆವುತಿಹಳು ೨೮

ಹರುಷದಿಂ ಬಳೆಯಲವಳಿಂಗೆ ಪದಿನಾಲ್ಕುವ
ತ್ಸರಮೈದೆ ಪೂರೈಸಲಂಗಜಂ ಬಿಲ್ಗೊಂಡ
ನರರೆ ಕನ್ಯಾಮಣಿಯ ರೂಪಾತಿಶಯವನಂತಿಂತೆಂದು ಪೇಳಲಳವೇ
ಚರಣತಳವೆಳೆಯಶೋಕೆಯ ತಳಿರನುಗುಳುತಿರೆ
ಸುರುಚಿರ ನಿತಂಬ ಬಿಂಬಂ ಮೆಲ್ಲನೇರುತಿರೆ
ಕಿರುನಡು ಮೊಲೆಯ ಮುಡಿಯ ಭಾರಕ್ಕೆ ಬಳುಕುತಿರೆ ಕಣ್ಗದಿರು ಸೂಸುತ್ತಿರೆ ೨೯

---

೧ ತ್ಸಖ (ಹ) ೨ ಳಂ (ಹ) ೩ ಮಿ (ಹ) ೪ X (ಹ) ೫ ಯಿಂ (ಹ)

ನವಕಮಲವಮಂ ನಗುತ್ತಿರೆ ಸುಮುಖ ಮಂಡಳಂ
ಕವಲರಿದು ನೀಳ್ದು ಬೆಂಬಿಡದಿಳಿವ ಕುಂತಳಂ
ತವೆ ಮೆರೆವ ಕಾಮನ ಪತಾಕೆಯಂತಂ ತೋರ್ಪುದವಳ ಸೋರ್ಮುಡಿಯ ಸೊಗಸು
ಕವಿವ ಲಾವಣ್ಯರಸವಂಗದೊಳು ಮಡುಗಟ್ಟೆ
ತವರಾಜಿಸುತಿರ್ಪ ತೆರದಿ ನಾಭಿಯುದೆಸೆಯೆ
ಭುವಿಗತಿವಿಚಿತ್ರಪಹ ರೂಪದಿಂದಿನಿತು ತಿರುಮುಡಿಯಳೊಪ್ಪುತ್ತಿರೆ ೩೦

ಅತ್ತಲಾ ಚೋಳ ನೊಲವಿಂದಂ ಕುಮಾರಂಗೆ
ಚಿತ್ತದೊಳು ವೈವಾಹಮಂ ನೆನೆವುತೀಕನ್ನೆ
ಯತ್ಯಂತ ರೂಪಿಯೆಂಬುದನಂ ಪರಸ್ಪರಂ ಕೇಳ್ದು ತಚ್ಚೋಳಭೂಪಂ
ಮತ್ತೆ ಹರುಷಿತನಾಗಿ ಕೊಂಬುವಾಸಕ್ತಿಯಿಂ
ಉತ್ತಮೋತ್ತಮ ಮಂತ್ರಿಗಳನೈದೆ ಕಳುಹಲೀ
ಪತ್ತನಕ್ಕೈತಂದು ತಿಳಿಯಲರುಪಿದರೆಲ್ಲವಂ ಮಾನಕಂಜರಂಗೆ ೩೧

ಕೇಳುತ್ತೊಡಂಬಟ್ಟೆವೆಂದವರ್ಗಳಂ ಕಳುಪಿ
ತಾಳುತ್ತೆ ಸಂತಸವನಿತ್ತಲಾಗಳೆ ಮದುವೆ
ಗಾಲಸ್ಯವಿಲ್ಲದೊದವಿಸುತಿರ್ದುದೂರೊಳುಂ ಸಂಭ್ರಮವನೇವೇಳ್ವೆನು
ಸಾಲು ಮುತ್ತುಗಳ ಮೇಲ್ಕಟ್ಟಿನಿಂ ತೊಳತೊಳಪ
ಮೇಲಲ್ಲಿಗಲ್ಲಿಗೊಪ್ಪುವ ಮಕರತೋರಣಗ
ಳೋಳಿಯಿಂ ಹೊನ್ನಿಂ ವಿವಾಹ ವೇದಿಕೆ ಮೆರೆಯಲೇಸನೆಂಬೆ ಮಂಟಪವನು ೩೨

ಪುರದೊಳೆಲ್ಲಾ ಸುವಾಸಿನಿಯರುಂ ಕರೆಸುತ್ತೆ
ಹರುಷದಿಂದವರು ತಮತಮಗೆ ಸಿಂಗರಿಸುತ್ತೆ
ನೆರೆ ಘಳಿಗಿವಟ್ಟಲಿಕ್ಕುತ್ತಲಲ್ಲಲ್ಲಿ ಸತಿಯರ್ಕಲಶವಿಡಿಳಪುತ್ತಲೀ
ವರಭಕ್ತರಂ ಶಿವಾಚಾರ್ಯರಂ ಕುಳ್ಳಿರಿಸಿ
ತಿರುಮುಡಿಯೊಡೆಯಳಂ ಮಹಾಶೃಂಗರಂ ಗೈಸಿ
ಸರಸೋತ್ಸವದಿ ಮಾನಕಂಜರಂ ಪುಳಕಿಸುತ್ತಿರ್ದನಾವೇಳೆಯೊಳ್ ೩೩

---

೧ X (ಹ) ೨ + ವ (ಹ) ೩ ವದೇ (ಹ) ೪ ಶಮಂ ಪಿ (ಜ)

ಬರುತಿರ್ದನಲ್ಲಿ ಚೋಳನ ವಿಭವವೇನೆಂಬೆ
ಗಿರಿಯ ಸಮ ಕರಿಗಳಿಂ ತುರಗ ಸಂದೋಹದಿಂ
ವರರಥಾನೀಕದಿಂ ನಿಜ ಭುಜಾಳಾಪದ ಪದಾತಿಗಳ ಸಂದಣಿಗಳಿಂ
ಮೊರೆವ ಭೇರೀರವಗಳಿಂ ತಮ್ಮಟಂಗಳಿಂ
ಬಿರಿದೆತ್ತಿ ಕರೆವ ಕಹಳೆಗಳಿಂದೆ ಸತ್ತಿಗೆಗ
ಳುರು ನಿಬಿಡದಿಂದೆ ಚಾಮರಂಗಳಿಂದಾರ್ಭಟಿಸಿ ಪೊಗಳ್ವ ಭಟನಿಕರದಿಂದೆ ೩೪

ಬಂದರತಿ ಸಂತಸದಿ ಲಗ್ನಮಂಟಪದೊಳಗೆ
ಸಂದಣಿಸುತರಸು ನಿಬ್ಬಣಿಗರೊಪ್ಪಿರುತಿರ್ದು
ದಂದು ಕುಳ್ಳಿರ್ದರಗಲಕ್ಕೆ ಸದ್ರಾಜ ತಿಂಥಿಣಿ ಮಕುಟವರ್ಧನರುಗಳ್
ಚಂದದ ಕವಿಗಳಧಿಕ ಗಾಯಕರು ನರ್ತಕಿಗ
ಳಂದು ಮಂತ್ರಿಗಳಗ್ಗಳಿಯ ಬಿರುದಿನಿಂದೆಸೆವ
ಬಂಧುರದ ನಾಯಕವ್ರಜವಮಿತ ಕಲಶ ಕನ್ನಡಿಯಾಂತ ವನಿತಾಂಗಳಿಯಿಂ ೩೫

ಆಗಳೆ ಕುಮಾರಂಗೆ ಸಿಂಗರಂ ಮಾಡಿದರು
ರಾಗದಿಂದಾಭರಣಜಾಲಮಂ ನೀಡಿದರು
ಬೇಗದಿಂ ಹೊಸವಸ್ತ್ರಗಳನುಡಿಸಿ ನವರತ್ನ ಬಾಸಿಗವನೊಲಿದು ಸೂಡಿ
ನಾಗವೇಣಿಯರೊಡನೆ ಮಂಟಪಕೆ ನಡೆತಂದು
ಬಾಗಿ ಸದ್ಭಕ್ತರ್ಗೆ ಹಸೆಯ ಮೇಲೊಪ್ಪಿರಲ್
ಸೋಗೆಮುಡಿ ತಿರುಮುಡಿಯೊಡೆಯಳಿತ್ತಿ ಮಂಟಪಕೆ ಬರುವಂದವೇನೆಂಬೆನು ೩೬

ಪರಿಪರಿ ವಿಳಾಸಿನಿಯರ್ಕೈದೆ ಸುತ್ತಂ ನೆರೆಯೆ
ವರರತ್ನದಿಂದೆಸೆವ ದಂಡೆ ತೊಂಡಲು ಮೆರೆಯೆ
ಸರಸ ಕುಸುಮಾಸ್ತ್ರ ನಸುಮೋಹನದ ವೃಷ್ಟಿಯಂ ಕುಡಿನೋಟದಿಂದೆ ಸುರಿಯೆ
ನೆರೆ ವಂದಿಜನರುಗಳು ಕೈವಾರಿಸುತ್ತಮಿರೆ
ಪರಮಭಕ್ತರ್ಬಾಂಧವರು ನಲಿದು ಪರಸುತಿರೆ
ಹರುಷದಿಂದೈತಂದು ಹಸೆಯ ಮೇಲೊಪ್ಪಿದಳು ಪೊಸಮಿಸುನಿವಣ್ಣದಬಲೆ ೩೭

---

೧ + ವ (ಹ) ೨ ತ್ತೀ (ಹ)

ಅನಿತರೊಳಗಾನವನ ಭಕ್ತಿಯಂ ನೋಳ್ಪೆನೆಂ
ದನುವಿನಿಂದಾಳೋಚನಂಗೈದೆಸೆಲೆ ನಂಬಿ
ಘನಮಹಿಮ ಮಾನಕಂಜರನ ಮಗಳ ಮುಡಿಯುಂ ಬೇಡುವೆಂ ಕೊಟ್ಟೊಡವನಂ
ಗಣಪದವಿಯೊಳಗಿರಿಸುವೆನು ನಾನೆನುತ್ತಂದು
ಮನದಿ ನಿಶ್ಚೈಸಿ ಸದ್ಭಿಕ್ಷವೇಷವ ಧರಿಸಿ
ಮಿನುಗುತಿಹ ಭಸಿತ ರುದ್ರಾಕ್ಷೆಗಳಲಂಕರಿಸಿ ಹಾವುಗೆಗಳಂ ಮೆಟ್ಟುತ ೩೮

ಮೆರೆವ ಕಾಷಾಂಬರವ ಮುಸುಕಿಟ್ಟು ಚಪ್ಪರದ
ನೆರವಿಯೊಳು ಪೊಕ್ಕು ನೋಡುತ್ತಲಾನಲ್ಲಿ ನಿಲ
ಲುರುಭಕ್ತನಹ ಮಾನಕಂಜರಂ ಕಂಡು ಗದ್ದುಗೆಯಂನಿಳಿದೈತಂದನು
ಧರಣಿಯೊಳು ಸೈಗೆಡೆದು ಪುಳಕವೇಳಲ್ಕೆದ್ದು
ಚರಣಕಭಿನಮಿಸಿ ಕೈಗೊಟ್ಟು ಕರೆದೈತಂದು
ನೆರೆ ಗದ್ದುಗೆಯೊಳು ಕುಳ್ಳಿರಿಸಿ [1]ಪೊದಗಳ ತೊಳೆವುತದನು ಶಿರಸಾವಹಿಸುತ ೩೯

ಶಿವನೆ ನೀಂ ಬಂದುದಂ ಬೆಸಸುವದೆನಲ್ಕೆ ನಾಂ
ಸವೆಯದಾನಂದದಿಂ ನಿನ್ನನೊಂದಂ ಕೇಳ್ವ
ತವಕದಿಂದೈತಂದೆವೀಗ ನಿಮಗವಸರಂ ಬೇಡುವಡೆ ಸಮಯವಿಲ್ಲಂ
ತವೆಯದಂ ಕೊಡಲರಿದು ವೈವಾಹದುತ್ಸಾಹ
ಮವನಿಗೆ ವಿರುದ್ಧ[2]ಮುಂ ನಾಳೆ ಬಂದಪೆವೆಂದು
ಶಿವಶಿವಯೆನುತ್ತೆ ಪೋಪೆವು ನೋಡ ನೋಡಲೀ ಮಂಗ[3]ಲೋ[3]ದ್ಯೋಗದೊಳಗೆ ೪೦

ಎಂತು[4]ಕೇಳಲ್ಬಹುದು[4] ಕೇಳ್ದ ಜನವೆಲ್ಲಮುಂ
ಎಂತು ತಾಳಲ್ಕಹುದು ನೀಂ ಕೊಟ್ಟಡೀ ಸಭೆಯು
ತಾಂ ತವಕದಿಂ ನಿನಗೆ ಮುಳಿವದದು ಮತ್ತೇಕೆ ನಡೆಯಲೀ ಮಂಗಲವದು
ಸಂತಸದಿ ಪೋಪೆವೆನೆ ದೇವ ನಿಮಗಂ ವಂಚಿ
ಸಿಂತು ಮತ್ತುಂ ಬೇರೆ ಮಂಗಳಂ ತಾನುಂಟೆ
ಎಂತಾದಡೇಂ ನಿಮ್ಮಡಿಗಳಿಲ್ಲದುತ್ಸಾಹವೀಧರೆಯೊಳೊಪ್ಪಲುಂಟೇ ೪೧

---

೧ ಪಾ (ಹ)  ೨ ರೋಧ (ಹ)  ೩ ಲು (ಹ)  ೪ ಕೇಳ್ಬಹುದುದಂ (ಹ)

ದೇವ ನೀನೊಲಿಯಲಾರ್ಮುಳಿದು ಮಾಡುವುದೇನು
ದೇವ ನೀಂ ಮುಳಿಯಲಾರೊಲಿದು ಮಾಡುವುದೇನು
ಭಾವದೊಳಗಿರ್ದುದಂ ಕರುಣಿವುದು ಬೇಡುವುದು ನೀನೆನ್ನನುದ್ಧರಿಪುದು
ಆವುದಕ್ಕನುಮಾನಿಸದೆ ಬೇಡೆನಲ್ಕೆ ಮ
ತ್ತಾವ ಕ್ರೋಧಮದಿಲ್ಲವೇ ಇಲ್ಲವೆನೂಲೆಮ್ಮ[೧]
ಹಾವುಗೆಗೆ ಬೆರಳೊತ್ತದಂತೆ ನಿನ್ನಯ ಮಗಳ ಮುಡಿಯುನುಂ ಕೊಯ್ದೀವುದು ೪೨

ಅತಿಮೃದುತರಂ ನಿನ್ನ ತನುಜೆಯಳ ತಲೆನವಿರು
ವತಿಮೃದುತರಂ ನಿನ್ನ ಹೃದಯಮೆನುತಂ ಜನರು
ನುತಿಸಲದನಂ ಕೇಳಿ ಶನಾ[೨] ಬಂದೆ ಕೊಟ್ಟಡುಪಕಾರವೆನಿತೇಳ್ವೆನೆಸಲು
ಯತಿರಾಯ ಇದುದಾವ ದೊಡ್ಡಿತವಿದೆಂದು ನೀ
ವತಿ ವಿನಯದಿಂ ಕೇಳ್ದಿರೀ ಜನದ ಕ್ರೋಧಮೇ
ಕಿತರರ್ಗೆ ಬಹಪುಣ್ಯವೇನಿದಂ ಉಳ್ಳುದಂ ಕೊಡುವುದಕ್ಕುಪಕಾರವೇ ೪೩

ಕೊಟ್ಟೆನೈ ದೇವಯೆನುತಂ ಮಾನಕಂಜರಂ
ನೆಟ್ಟನೈತರುತಿರಲ್ ಚೋಳಾದಿಗಳ್ಬೆರಗು
ವಟ್ಟೀಕ್ಷಿಸುತ್ತಿರ್ದರೇನೆಂಬೆ ಮಂಟಪದ ಜಗುಲಿಯೊಳು ಝುಗಝುಗಿಸುವಾ
ದಿಟ್ಟಿ ತಾಗಿದಡೆ ಕರಗುವೊಲಿರ್ದ[೩] ಮಗಳ ಬಳಿ
ಗಟ್ಟಿಹಾಸದಿಯೆನ್ನುವಂ ಕರೆದು ಕೆಲಬಲದಿ
ದಟ್ಟೈಪ ಜನರನಂ ತೆಗೆಸಿ ಎನ್ನುವನು ಬಲವಂದು ಭಕ್ತ್ಯಾತುರವಲಿ ೪೪

ದಂಡೆಯಂ ತೊಂಡಲಂ ನೂಂಕುತ್ತೆ ಚಂದದಿಂ
ಚಂಡಿಕೆವಿಡಿದು ಮಗಳನುದ್ಧರಿಸುವಂವದಿಂ
ಮಂಡಿತ ಮಹಾಭಕ್ತಿ ಕೈಯೊಳಡಂಗಿತೆಂಬಂದದಿಂ ವಾಮಕರದಿಂ
ಮಂಡೆಗೂದಲುವಿಡಿದು ಭಕ್ತರರಸಂ ಜನರ
ಹಿಂಡಿನೊಳು ಬರಲು ಬೆರಗಾಗಿರ್ದರೆಲ್ಲರುಂ
ಕಂಡಿದೇನೆನುತೆ ಚೋಳಂ ಕೌತುಕಂಬಟ್ಟು ನೀನೆಲ್ಲಿಯೇಕೆ ಎಲ್ಲಿ ೪೫

---

೧ ಲೆಂದು (ಹ) ೨ ನಾ (ಹ) ೩ ರ್ದು (ಹ)

ಕರದೊಳು ಕಠಾರಿಯಂ ಪಿಡಿಯಲೇಕೇಂ ಗೈವೆ
ಯರಿಯುದಲೆ ನಿನ್ನ ಕುವರಿಯನೇಕೆ ಬೇಡಿರ್ದೆಂ
ಹರಹರಯೆನುತ್ತೆ ನೃಪನಿರೆ ಗಿಡದೊಳೊಪ್ಪುತಿಹ ಕುಸುಮಂಗಳಂ ಕೊಯ್ವೊಲು
ಸರಸ ಹುವ್ವಿನೊಳಿರ್ಪ ಪರಿಮಳಂ ಕೊಂಬಂತೆ
ಉರುತರ ಕಠಾರಿಯಂ ಭೋಂಕೆನಲು ಪಿಡಿವುತ್ತೆ
ವರ ಕುಮಾರಿಯ ದಿವ್ಯ ಧಮ್ಮಿಲ್ಲಮಂ ಕೊಯ್ದುತನ್ನ ಪಾದದೊಳಿಡಲ್ಕೇ ೪೯

ಮೆರೆದೆ ನಾನಲ್ಲಿ ಪಣೆಗಣ್ಣಶಭುಜಂಗಳಿಂ
ವರ ಜಟಾಭಾರದಿಂ ಪಂಚಾನನಂಗಳಿಂ
ತರಣಿ ಶಶಿಕೋಟಿ ಪ್ರಭಾಪಟಲಮಯವಾದ ತನುವಿನಿಂ ತವಕದಿಂದಂ
ನೆರೆನಂದಿ ಭೃಂಗಿ ವೀರೇಶ ಗಿರಿಜಾತೆಸಹ
ಪರಮಗಣನಿಕರವಾಕ್ಷಣದಿ ಪುಷ್ಪಕಗಳಂ
ತರಲು ಚೋಳಾದಿಗಳ್ನೋಡಿ ಬೆರಗಾಗಿ ನಲಿವಾಗಿ ತಲೆದೂಗಿ ನುತಿಸೆ ೫೦

ಮಾನಕಂಜರನ ನಾಂ ತೆಗೆದಪ್ಪಿ ತತ್ಸುತೆಯ
ನಾನಂದದಿಂ ನೋಡಿ ಮೈದಡವಲಾಕ್ಷಣದೊ
ಳಾನವಿರು ಮೊದಲಿನಂತಾಗಲಾ ಭಕ್ತನಂ ಸತಿಯುಸುಂ ತತ್ತನಯಳಂ
ನಾನಾ ನವೀನವಹ ಪುಷ್ಪಕದಿ ಕುಳ್ಳಿರಿಸಿ
ಸಾನುರಾಗಂದಲಿ ಕೈಲಾಸಕ್ಕೆ ಕೊಂಡೊಯ್ದು
ನಾನವರ್ಗೆ ಗಣಪದವಿಯನ್ನಿತ್ತೆನಿದರಿಂದಲಾತನಂ ನೆನೆ ಸೌಂದರ ೫೧

ಅಂತು ಸಂಧಿ ೧೧ ಕ್ಕಂ ಪದಗಳು ೫೧೧ ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

೧ ದಾಡಿ (ಹ) ೨ ದಿ (ಹ)

# ಸಂಧಿ : ೧೨

**ಸೂಚನೆ :**

ವರಭಕ್ತನೆನಿಸುವರಿವಾಳ್ತಾಂಡ ಮತ್ತೆ ಸು
ಸ್ಥಿರಭಕ್ತನೆನಿಸುವಾನಾಯನಾರುಂ ದಿವ್ಯ
ಸರಸನಹ ಒಲಘಾಂಡಮೂರ್ತಿಗಳ ಕಥೆಗಳಂ ಕೇಳ್ದನಾ ಸೌಂದರೇಂದ್ರ

ಇನ್ನೊರ್ವ ಶರಣನಿತಿಹಾಸಮಂ ಪೇಳ್ವೆ ನಾಂ
ನನ್ನಿಯಿಂದಾಲಿಸೈ ನಂಬಿ ಚೋಳಾವನಿಯೊ
ಳುನ್ನತದ ಕಣ್ಣ೧ಮಂಗಳವೆಂಬ ಪುರದಿ ಅರಿವಾಳ್ತಾಂಡನೆಂಬ ಶರಣಾ
ದೈನ್ಯಗುಣೆಯೆನಿಸುತಂ ಧರ್ಮದಿಂ ಬಾಳುತಂ
ಮಾನ್ಯನೆಂದೆನಿಸುತ್ತ ಕೊಟ್ಟ ಕೂಲಿಗೆ ಕೈಗ
ಳನ್ನಲಿದು ಕೊಯ್ವುತದರಿಂ ಜೀವಿಸುತ್ತೆ ಸದ್ಭಕ್ತನೆನಿಸುತ್ತಿರ್ದನು ೧

---

೧ ಣ್ಣೆ (ಹ)

ಅಲ್ಲಿ ಬಿಳಿದಪ್ಪ ನೆಲ್ಲರಲುಮೇಶಂಗೆನು
ತ್ತಲ್ಲಿ ಬಂದೋಗರದ ನೆಲ್ಲೆಲ್ಲ ಶಿವಗೆನುತ
ಲುಲ್ಲಾಸದಿಂದೆ ದಂಪತಿಗಳ್ಗೆಯುದುವೆ ಪ್ರಸಾದ ಸುಖವಾಗಿರಲ್ಕೆ
ಮೆಲ್ಲಿತ್ತು ನುಡಿಯಲ್ಲದಿತರ ನುಡಿ ನುಡಿದರಿಯ
ಬಲ್ಲತನವೆಂಬುದಂ ನೆನೆದರಿಯ ಕೇಳ್ದರಿಯ
ಮೆಲ್ಲನುದಯದೊಳಿದ್ದು ಕಣ್ಣ ಹೊಸೆವುತ್ತೆ ತಿರುನಲ್ಲೂರ್ಗೆ ನಡೆತರುತ್ತೆ ೨

ಶಿವಲಿಂಗವಲ್ಲಿರ್ದ ಕಾರಣದಿ ತಾಂಬಂದು
ತವಕದಿಂ ಭಕ್ತಿಯಿಂ ಕೈಗಳ ಮುಗಿವುತಂದು
ಶಿವ ನೀನು ಹೆಚ್ಚುಬಾಳೆಂದು ಪರಕೆಯನಿತ್ತು ನಿನ್ನ ಬಾಗಿಲವಲ್ಲದೆ
ಶಿವನೆ ಕೇಳ್ಮತ್ತಾರ ಬಾಗಿಲಂ ಪೊಕ್ಕರಿಯೆ
ಶಿವನಿನ್ನ ಮುಖವಲ್ಲದಿನ್ನಾರ ಮುಖವರಿಯೆ
ಶಿವನೆ ನಿನ್ನಾಳಿನಾಳಾನಲ್ಲದಿತರರ್ಗೆಯಾಳಲ್ಲವಾನು ಕೇಳಾ ೩

ನಿನ್ನ ಭೇರೀನಾದವಲ್ಲದಾಲಿಪ್ಪುದಿಲ್ಲ
ನಿನ್ನ ರೂಹಿನ ನೆನಹವಲ್ಲದಿನ್ನೊಂದಿಲ್ಲ
ಎನ್ನ ಹೊನ್ನುಂ ನೀನೆಯೆನ್ನ ವಸನಂ ನೀನೆಯೆನ್ನ ತಣಿವುಂ ನೀನೆಯ್ಯೆ
ಎನ್ನ ತನುವುಂ ನೀನೆಯೆನ್ನ ಮನವುಂ ನೀನೆ
ಎನ್ನ ಬಳಗಂ ನೀನೆಯೆನ್ನಪ್ಪಸುಂ ನೀನೆ
ಇನ್ನೇನು ನಾನು ನೀನೆಂಬುದಂ ನೀನೆಯೆನುತಂದು ಪೊಡಮಟ್ಟು ತಿರುಗಿ ೪

ನಡೆತಪ್ಪನೆಂದುವುಂ ಇದುವೆ ನೇಮಂ ತನಗೆ
ಬಿಡದರಸಿ ಕೂಲಿಯುಂ ಕರೆಯೆ ಪೋಪಂ ಮತ್ತೆ
ಒಡಲಾಸೆಯಿಂದನ್ಯರಂ ನುತಿಸನಾಶ್ರೈಸನೆನಿತು ಲಾಭವದೆಂದರು
ಮೃಡನಿಳಯಮಂ ಬಿಟ್ಟು ಪೋಗನೇನಾದಡಂ
ಒಡನೆ ಕೂಲಿಯ ಬಿಳಿಗವಳೆಯಕ್ಕಿಯೋಗರವ
ಸಡಗರದಿ ಲಿಂಗಕ್ಕೆ ನೈವೇದ್ಯವಿತ್ತು ತಾವೀರ್ವರುಂ ನಲಿದುಣುತ್ತೆ ೫

ಎನ್ನಾಯುಮಂ ಕೊಂಡು ಒದುಕು ನೀನೆಂದೆನುತೆ
ಎನ್ನಯ್ಯ ಬೆಳೆನೀನೆ ಸಿರಿವಂತನಾಗೆನುತೆ
ನನ್ನಿಯಿಂ ಪೊಡಮಟ್ಟು ತನ್ನೂರ ಪೊಕ್ಕು ಕೂಲಿಯ ಜನರೊಳವರಂತೆಯು
ಎನ್ನ ಮನಕೆನ್ನಂತೆಯಿರುತಿರ್ದು[೧] ತಾಂ ಕೊಯ್ದು
ಉನ್ನತದ ಗದ್ದೆಗಳ ನೆಲ್ಗ[೨]ಳಿಮ್ಮಡಿಯಹಣಿವಿ
ದನ್ನರಿದು ಕೈಗಳೊಡೆಯರು ಲಾಭವಾಯಿತೆಂಬರೀತನಿಂದೇವರಿಯರು ೬

ಎನಿತು ಕೂಲಿಯು ಬಂದಡನಿತಕ್ಕೆ ಹರ್ಷಿಸುತೆ
ಇನಿತನಿತುವೆನ್ನದಲೆ ಎನ್ನತ್ತ ಭಾವಿಸುತೆ
ಘನವಿಮಲ ಸದ್ಭಕ್ತರಂ ಕಂಡುಹಿಗ್ಗಿ ದಾನದ ಕೈಗೆ ಕೂಲಿಗೊಳ್ಳಂ
ಮನಮೊಸೆದು ಭವಿಗಳೊಳು ಕೂಲಿಯಂ ಕೈಕೊಂಬ
ನನುವಿನಿಂದೀತೆರದಿ ಕೆಲವಬ್ದ ವಿರಲೊಂದು
ದಿನದಿವೋಗರದ ನೆಲ್ಬಾರದಿರಲಾ ದಿನದೊಳವರ್ಗಳುಪವಾಸವಾಗೆ ೭

ಎರಡನೆಯ ದಿವಸದುಪವಾಸವಾಗಲ್ಕಾತ
ಹರುಷದಿಂ ಮೀರಿ ಕಳೆಯೇ[೩]ರೆ ಮೂರನೆಯ ವಾ
ಸರದಲುಪವಾಸವಾಗಲ್ಕಿದಂ ನಡೆಯಿಸೈ ಇನ್ನೊಂದು ಬೇಡಲೊಲ್ಲೆ
ಹರಹರ ಮಹಾದೇವ ಉಪವಾಸವಲ್ಲ ಜಾ
ಗರವಿದಂ ತನಗೆಂದು ತೃಪ್ತಿಯಾಗುತ್ತಲಿರೆ
ಪರಿಪರಿಯ ತನುಪೆಚ್ಚಿ ಕಳೆಯೇರುತಿಪ್ಪತ್ತು ದಿವಸದುಪವಾಸವಾಗೆ ೮

ಇದನರಿದು ನಾನಲ್ಲಿ ಗುಪ್ತ ಸದ್ಭಕ್ತನಂ
ಮುದದಿಂದೆ ತೋರ್ಪೆ ಬಾಯೆಂದುಮೆಯನೊಡಗೊಂಡು
ಸುದತಿಯಾನೀರ್ವರುಂ ಒಕ್ಕಲಿಗ ವೇಷಮಂ ತಳೆದು ತಿರುನಲ್ಲೂರೊಳು
ಸದಮಳವೆನಿಪ್ಪ ಲಿಂಗಾಲಯದ ಮುಂದಿರಲ್
ಚದುರನಹ ಭಕ್ತನರಿವಾಳ್ತಾಂಡನಲ್ಲಿಗತಿ
ಪದುಳದಿಂ ಮೆಲ್ಲನೈತರಲಾನು ಗದ್ದೆಯೊಳು ನಿಂದಾತಗಿಂತೆಂದೆನು ೯

೧ ರ್ದ (ಹ)   ೨ ಳಂಮಡಿದಹ (ಪ)   ೩ ರಿ (ಹ)

ಎಲೆಕೂಲಿಗಾರನರಿವಾಳ್ತಾಂಡ ಇತ್ತ ಬಾ
ಒಲವಿಂದೆ ಕೂಲಿಯೋಗರದಕ್ಕಿಯಂ [೧]ತೂರು
ಕಳುಹದಾಂ ಕೂಲಿಯಂ ಕೊಡುವೆನೆನಲಂತಾಗಲೆಂದಾತ ತೂರುತಿರಲು
ಸಲೆ ಗಿರಿಜೆ ಕಂಡೀತ ಭಕ್ತನೆಲೆ ದೇವ
ಪಲವು ಬಗೆಯಿಂದರ್ಚಿಸಲ್ಬಲ್ಲನೇ ದೇವ
ಚೆಲುವಾಗಿ ಪಾಡಿ ಪೊಗಳಲ್ಬಲ್ಲನೇನೀತನೊಕ್ಕಲಿಗನೆಂದು ಜರಿಯೆ ೧೦

ಅರಿಯಾ ಗಿರಿಜೆ ಭಕ್ತನುನ್ನತ ಚರಿತ್ರಮಂ
ನೆರೆ ಪೂಜಿಸಲ್ಕರಿಯನನ್ಯರ್ಗೆರಗಲರಿಯ
ಪರಿಪರಿ ಹೊಗಳಲರಿಯ ಹುಸಿಯ ನುಡಿಯಲ್ಕರಿಯ ಜಾಣತನವೆಂಬುದರಿಯಂ
ಸರಸದಿಂ ಬಲ್ಲವರ ನಿಜವೆಲ್ಲವಂ ಬಲ್ಲ
ಒರೆದೊರೆದು ಪಾಡಲರಿಯಂ ಅರ್ಥವಂ ಬಲ್ಲ
ವರಭಕ್ತನಿವನ ನುಡಿಕಿರಿದು ನಡೆಪಿರಿದಿಹುದು ನಿನಗೆ ನಾಂ ತೋರ್ಪೆನಗಜೆ ೧೧

ಎಂದವನ ಕೂಲಿಯಂ ಕೊಡಲವಂ ತೂರುತಿರೆ
ಬಂದುದೊಂದಂ ಮಹಾ ಬಿರುಗಾಳಿಯದಕೆ ತರು
ವೃಂದವೆಲ್ಲಂ ಹಾರಿಹೋಗುತ್ತಲಿರೆ ಕಾಣುತಂಜುತರಿವಾಳ್ತಾಂಡನು
ಚಂದದಿಂದಕ್ಕಿಯಂ ತುಂಬುತ್ತೆ ಪಿಡಿವುತ್ತೆ
ಮುಂದೈಪ ಧೂಳಿಯೊಳು ಕಂಗಾಣದೈತರುತೆ
ಮುಂದೊಂದು ಬೀಡೆಯಿರೆ ಕಾಣದೆಡಹುತ ಬಿದ್ದನಾಭಕ್ತನೇವೇಳ್ವೆನು ೧೨

ಹರಹರ ನಮಶ್ಶಿವಾಯ ಎಂದು ಕೂಗುತ್ತ
ಉರುಳುತೇಳುತ್ತೀಕ್ಷಿಸಲ್ಕಕ್ಕಿವೊಂದಿರದೆ
ಧರೆಯ ಬೀಡೆಯೊಳೊಕ್ಕಿರಲ್ಕಂಡು ಶಿವ ಶಿವಾ ಶಿವನ [೨]ಬಾಯ್ತುತ್ತ[೨]ಗಳದೇಂ
ನೆರೆ ಶಿವದ್ರೋಹಿಯಾಂ ಪಾಪಿಯಾಂ ಮಾಡಲೇಂ
ಹರನಿನಿತು ದಿವಸಮುಪವಾಸಮಿಹ ಪಸಿದಿಹಂ
ಭರದಿಂದಲಾತನೆದುರಂ ಪೋಗಿ ಪೇಳಲೇನೆನುತಾತ ಮನದೊಳರಿದು ೧೩

---

೧ ಕೇರುತು (ಜ) ೨ ಬಾಯತುತುತ್ತು (ಜ)

ಇರೆನಿನ್ನಯಿರೆನಿನ್ನ ಸತ್ಯವಿದು ಸತ್ಯವಿದು
ಮರುಗಲೇಕಿನ್ನೆನುತೆ ಕರದೊಳಿಹ ಕುಡುಗೋಲ
ಕೊರಳಿಗಿಕ್ಕುತ್ತ ಘರಿಘರಿಲನೆಳೆಯಲ್ಕಂಡು ಹಾಹಾಯೆನಲ್ಕೆ ಗಿರಿಜೆ
ನೆರೆಪೂರ್ಣಹರಿಯಲಾಗೋಣನಾಳಿಂ ಸೈರಿಸೆಲೆ
ತರುಣಿಯೆ ಎನುತಿರಲ್ ಶಿರವು ಕತ್ತರಿಸುತ್ತೆ
ಧರೆಗುರುಳುವನಿತರೊಳ್ನಾಂ ಪೋಗಿ ಕೈವಿಡಿದು ನಿಜರೂಪಮಂ ತೋರಿದಂ ೧೪

ಪತ್ತು ಪತ್ತರೆತೊಳ್ಮೊಗಂಗಳಿಂ ಽಕಂಗಳಿಂಽ
ಮತ್ತೆ ಜಡೆಯಿಂ ಜಡೆಯೊಳಿಪ್ಪ ಜಡವನಿತೆಯಿಂ
ಸುತ್ತಿದಾನೆಯದೊವಲಿನಿಂ ಕೈಯ ತಿಸುಳದಿಂದೊಪ್ಪಿ ನಾನವನನಪ್ಪಿ
ಉತ್ತಮ ಗಣಾಳಿಯಿಂ ಕೈಲಾಸಕೈತಂದು
ಸತ್ಯನಿಧಿಗಳ ಗಣಪದವನಿತ್ತೆನದರಿಂದೆ
ಚಿತ್ತದೊಳು ಜಾನಿಸುತೆ ನುತಿಪುದರಿವಾಳ್ತಾಂಡಿಯಂಘ್ರಿಗಳನ್ನೈದೆ ನಂಬಿ ೧೫

ಆಲಿಸೆಲೆ ನಂಬಿ ಮತ್ತೊರೆವೆ ಚೋಳಾವನಿಗೆ
ಮೇಲೆನಿಸಿ ಮೆರೆಯಿತ್ತು ಮಂಗಳವೆನಿಪ ಪುರವು
ಪೇಳಲಿಕ್ಕರಿದಾದ ವಿಭವದಿಂದಿರಲಲ್ಲಿ ಆನಾಯನಾರರೆಂಬ
ಲೀಲಾಭರಿತನಿರ್ಜನಾತನ ಚರಿತ್ರಮುಂ
ಭೂಲೋಕಕತಿ ಚೋದ್ಯಮೆನಿಸಿ ಬಲ್ಲವರರಿಯೆ
ಮೂಲಕಾರಣಕನೆಂದೆನಿಸಿ ಮೂಲಪ್ರಣಮವಾದ ತನ್ಮಂತ್ರಾಂಗದಿಂ ೧೬

ಪುಟ್ಟಿದಾಕ್ಷಣದಿ ಪಂಚಾಕ್ಷರಿಯ ನೆನಹಲ್ಲಿ
ತೊಟ್ಟಿಲೊಳಗಿರಲು ಪಂಚಾಕ್ಷರಿಯು ನೆನಹಲ್ಲಿ
ದಟ್ಟಡಿಯನಿಡುವಲ್ಲಿ ಪಂಚಾಕ್ಷರಿಯ ನೆನಹು ನಡೆಗಲಿಸಿತಾಮಂತ್ರವು
ನಿಟ್ಟಿಸಲು ಬೆಳೆವುದಂ ಸುಳಿವುದಂ ನುಡಿವುದಂ
ನೆಟ್ಟನಾ ಪಂಚಾಕ್ಷರಿಯೆ ಕಲಿಸಿತಾತಂಗೆ
ಅಟ್ಟಹಾಸದಲಿ ಭಕ್ತನು ಪಯೋವೃತ್ತಿಯಂ ತಾಳುತೊಪ್ಪಿರ್ದನು ೧೭

---

೧ ಣು (ಹ) ೨ x (ಹ)

ಇಂತು ಪಂಚಾಕ್ಷರಿಯೆಂ ಬಾಯಿವೆಣ್ಣೆಯೆನೆ ತಳೆದು
ಸಂತತಂ ಪಂಚಾಕ್ಷರಿಯನೆ ನಾಲಗೆ ಸವಿವು
ತಂ ತವಕದಿಂದುದಯ ಸಮಯದೊಳಗೆದ್ದು ಶಿವನಿಳಯದೊಳು ಬಂದುನಿಂದು
ಅಂತಕಾಂತಕನೆ ಶರಣೆನುತ ಕೈಮುಗಿವುತಂ
ಚಿಂತಿಸುತ್ತೈದಕ್ಕರವನೆ ಉಚ್ಚರಿಸುತಂ
ಇಂತಿದಂ ಲೇಸೆನುತ್ತೊಂದುಪಾ[1]ಯುಂ[1] ಕಂಡಸೆನ್ನ ಪ್ರೇರಣೆಯಿಂದಲೀ ೧೮

ಪುರದ ಗೋವೃಂದಮಂ ಕಾವುದೇ ಲೇಸೆನು
ತ್ತಿರದೆ ನಿಶ್ಚೈಸುತ್ತ ಪೊರಮಡಲ್ಕೊಂದೊಂದು
ತೆರದಿಂದೆ ರುಷಿಗ[2]ಳೆಲ್ಲರ್ಗೆ[2] ಗೋಜನ್ಮವದು ಪ್ರಾಪ್ತಿಯಾಗಿರ್ದ ಕತದಿಂ
ಶರಣನಿರ್ದಾ ಪೊಳಲೊಳಾ ಪಶುಗಳಾಗಿರಲ್
ಸರಸದಿಂದಾ ಗೋಸಮೂಹಮಂ ಕೂಡಿಸುತೆ
ಪುರದತ್ತ ದೂರದೊಳ್ಪುಲ್ಲುಳ್ಳ ಪೊಲಗಳೊಳ್ಪಶುಗಳಂ ಮೇಯಿಸುತ್ತೆ ೧೯

ತಂದ ಕಟ್ಟೋ[3]ಗರವ[3]ನುಂಡು[4] ಕೈಯಂ ತೊಳೆದು
ಬಂದೊಂದು ನೆಳಲ ಹಸಲೆಯ ಮೇಲೆ ನಲಿನಲಿದು
ಚಂದದಿಂ ತಪ್ಪುಗಾಲಿಕ್ಕಿ ತ್ರಿಭಂಗಿಯಿಂದಂ ನಿಂದು ಪೊಸಕೊಳಲನು
ಅಂದವೆನಲೂದುತಂ ಗ[5]ನಾಧಿಪರ್ಗೆಯಾ
ನಂದವೆನಲೂದುತಂ ಪಂಚಾಕ್ಷರಿಯ ಫಲವ
ನಂದು ಸವಿವಂದದಿಂದೆನ್ನ ಕಿವಿಗಳ್ಗೆ ಸವಿಗೊಳಿಸುವತ್ಯಾನಂದದಿಂ ೨೦

ರಾಗರಸದೊಳಗೆ ಪಂಚಾಕ್ಷರಗಳೇಳುತಿರ
ಲಾಗ ನಾನೆಲ್ಲವಂ ಮರೆದು ಕೇಳುತ್ತಲಿರೆ
ರಾಗದಿಂ ವದನದೊಳಗೈದಕ್ಕರಂಗಳಿಗೆ ಹೃದಯದೊಳು ನಾಂ ಜಸಿಜಕ್ಕಿರೆ
ಬೇಗದಿಂ[6]ದೆನ್ನೈ[6]ದು ಮುಖದಿ ಕೊಳಲಧ್ವನಿಯು
ತೂಗುತ್ತ ತೊಳಗುತ್ತಲಿರುತಿರ್ದುದೇನೆಂಬೆ
ಭೋಗಿ ಸಂಕುಲವೆಲ್ಲ ತಮ್ಮತನುವಂ ಮರೆದು ತಲೆದೂಗುತಿರುತಿರ್ದವು ೨೧

---

೧ ಯಮಂ (ಹ) ೨ ಳರ್ಗೆ (ಹ) ೩ ನಲ್ಲುಂಡು (ಹ) ೪ + ಸವಿ (ಹ)
೫ ಜಿ (ಹ) ೬ ದಾನ್ನೈದು (ಹ)

ಬಾರಿಸುಂವಂ ಕೊಳಲ ದನಿಯಂ ಕೇಳ್ದು ಗೋಕುಲಂ
ಮೇರೆಗೆಟ್ಟರಿವುಗೆಟ್ಟಲ್ಲಿ ಪಸಿವಂ ಮರೆದು
ಮೋರೆಯನ್ನೆತ್ತಿ ಕಣ್ಣಂ ಮುಗಿದು ಜೋಲ್ದ ಕಿವಿಯಿಂದ ಕಟವಾಯೊಳಿಸೆವ
ಸಾರಮೃದುವಹ ಎಳಗರುಂಕೆಯ ನೊರೆಗಳಿಂದೆ
ಪೂರೈಪ ಮೈಮರವೆಯಿಂದಂದವಾನಾಯ
ನಾರರ ಹೆಗಲ[1] ಮೇಲೆ ಮೊಗವಿಟ್ಟು ಕೆಲವು ತೋಳೊಳಗೆ ಮೊಗವಿಟ್ಟು ಕೆಲವು ೨೨

ಇಂತು ಗೋಕುಲವೆಲ್ಲ ನಲಿವುತ್ತ ಕೇಳುತಿರೆ
ಮುಂತೆ ಬಗೆಗೆಟ್ಟು ಹಗೆತನಗೆಟ್ಟು ಮೃಗನಿಕರ
ಸಂತಸದಿ ಹುಲಿಯ ಕೊರಳಲ್ಲಿ ಕೋಡಿಟ್ಟು ಕಣ್ಮುಚ್ಚಿ ಕೇಳ್ದವು ಪುಲ್ಲೆಗಳ್
ಎಂತುಸುರ್ವೆ ಮುಂಗುಲಿಯ ಮೇಲೆ ಹೆಡೆಯಿಟ್ಟಹಿ
ಗಳುಂ ತಾವು ಕೇಳುವುವು ತತ್ಸರ್ಪನೋಡನಿರ್ದು
ಚಿಂತಿಸದೆ ಶಿ[2]ಖಿ[2]ಗಳಾಲಿಸುತಿಹವದೇನೆಂಬೆ ತತ್ಕೊಳಲ ಸುಸ್ವರವನು ೨೩

ಗಿಳಿಹಂಸೆ ಕೋಗಿಲೆಗಳೆಳಸಿ ಕೇಳ್ದವು ನಾಡೆ
ಅಳಿಕುಳಂ ತರುಗಿರಿಗಳೆಳಸಿ ಕೇಳ್ದವು ನೋಡೆ
ಇಳೆಯ ಸಚರಾಚರ ಪ್ರಾಣಿಗಳ್ನಲಿದಾಲಿಸಿದವು ಕೊಳಲ ಸ್ವರವನು
ತಳುಹದಲೆ ಬೈಗಾಗೆ ಗೋವುಗಳನೊಡಗೊಂಡು
ನಿಳಯಕೈತರುತಿರ್ದ ಭಕ್ತಿತೋರದ ತೆರದಿ
ಒಳಗೆ [3]ತಾನಾನಂದಿಸುತ್ತಿಹಂ[3] ವಿಳಸಿತ ಯ[4]ಶಂ[4] ಜಿತೇಂದ್ರಿಯನೆನಿಸುತಂ ೨೪

ಆವರಿಚ್ಛೆ ತಾನಲ್ಲ ತನ್ನಿಚ್ಛೆ ಗೋವಾಗಿ
ಅವನಿಚ್ಛೆ ನಾನಾಗಿ ನನ್ನಿಚ್ಛೆಯವನಾಗಿ
ಭುವಿಯ ಜನರರಿಯದೊಲ್ ಗೂಢಭಕ್ತಿಯೊಳಾತ ಕೆಲವಬ್ದ ನಡೆವುತ್ತಿರೆ
ಸುವಿವೇಕದಿಂದಲಾ ಶರಣನಂ ನೋಳ್ಪೆನೆಂ
ದವನಿಗೈತಂದಾತ ಬರ್ಪ ವನದೊಳಗೊಂದು
ನವಪಲ್ಲವಂಗಳಿಂ ಪೂತ ಕಕ್ಕೆಯ ಮರವನೇರಿ ನಾಂ ಕುಳ್ಳಿರಲ್ಕೆ ೨೫

---

೧ ತ (ಹ) ೨ ಶಿ (ಹ) ೩ ತಾನಾಂದಿಹಂ (ಹ) ೪ ಜಂ (ಹ)

ಆನಾಯನತ್ತಲಾವೂರಿಂದೆ ಪೊರಮಟ್ಟು
ನಾನಾವಿನೋದಂಗಳಿಂ ಶಿವಾರ್ಚನೆಗಿಟ್ಟು
ತಾನೆದಿನಂಡದಿಂ ಗೋಕುಲಂ ಬಳಿಗೊಂಡು ಬಂದು ಕಕ್ಕೆಯು ನೆಳಲೊಳು
ಸಾನುರಾಗದಿ ನಿಂದವಂ ಕೊಳಲ ಕೈಕೊಳಲ
ದೇನೆಂಬೆನೆನ್ನುತ್ಸವಂ ಮಗನೆ ಸೌಂದರ
ಭೂನುತ ಚರಿತ್ರನಹ ಭಕ್ತನಾ ಪಂಚಾಕ್ಷರಿಯನೂದಲನುವಾದನು ೨೭

ಅಕ್ಕರದಿ ನಾನಲ್ಲಿ ಕಕ್ಕೆಯ ಮರದೊಳಿರಲು
ಕಕ್ಕೆ ಸದ್ಭಕ್ತನ ಸುಖಕ್ಕೆ ನೆಲೆಯಾಗಿರಲು
ಕಕ್ಕೆ ಭಕ್ತನ ಸಮ್ಮುಖಕ್ಕೆಯೆನ್ನಂತಿರಲು ಪಾಡಿ ನಲಿದಾಡಿ ನೋಡಿ
ಕಕ್ಕೆಯೆನ್ನಯ ರೂಪಕಕ್ಕೆ ಸಮನಾಗಿರಲು
ಕಕ್ಕೆಯಾತನ ನಾಟಕಕ್ಕೆ ನಂಟಾಗಿರಲು
ಚಕ್ಕನೈದಕ್ಕರಂಗಳನೂದುತೆನ್ನ ಪದವಿಡುತೈದೆ ಕೊಳಲೂದುತಂ ೨೭

ಧ್ಯಾನಿಸುವನಾವಗಂ ತನ್ನುರದೊಳಾನಿರಲು
ಧ್ಯಾನವರಿದೊಳಗರಸುತಲ್ಲಿಲ್ಲದಿರುತಿರಲು
ಆ ನಾಯನಾರು ಕಣ್ದೆರೆಯೆ ಮರನಿಳಿದು ನಾನಲ್ಲಿ ನಿಜರೂಪದಿಂದಾ
ಸಾನುರಾಗದೊಳಾತನಂ ನಾನು ತೆಗೆದಪ್ಪ
ಲಾನಂದದಿಂದಾತನೆನ್ನ ಪದಗಳನಪ್ಪಿ
ಏನೆಂಬೆ ನುತಿಸುತಿರ್ದಂ ತಾನು ಭಯಭರಿತ ಭಕ್ತಿಯಿಂದಂ ಮುದದೊಳು ೨೩

ಮನವಾರೆ ನೆನೆವನಂ ಕಣ್ಣಾರೆ ಕಾಣುತಂ
ತನುವಾರೆ ಸೋಂಕಿ ಕೈಯಾರೆ ಬಿಗಿದಪ್ಪುತಂ
ಜಿನುಮಯನೆ ಇಂತೀಯೆಡವಿಗೇತಕೈತಂದೆಯೆನ್ನಯ್ಯಯೆನ್ನ ದೊರೆಯೇ
ಕನಲಿ ಗರ್ಜಿಸುವ ಹುಲಿಕರಡಿಯುಂಟೈ ತಂದೆ
ವಿನುತ ಕೈಲಾಸಮಂ ಬಿಟ್ಟು ಬಂದೈ ತಂದೆ
ಘನಮಹಿಮಳಾದ ಗಿರಿಜೆಯನಗಲಿ ಕರುಣದಿಂದೈತಂದೆಯಯ್ಯತಂದೆ ೨೪

---

೧ ನೋ (ಹ)

ಎನಗೋಸುಗಂ ಮರದ ಮೇಲೆ ನಿಂದೈತಂದೆ
ಎನಗೋಸುಗೀಯಡವಿಯೊಳಗೆ ಬಂದೈತಂದೆ
ನಿನಗಿನಿತವಸ್ಥೆಯಂ ಮಾಡಿತೇನಯ್ಯ ಎನ್ನಯ ದಿವ್ಯ ಪರಮ ಭಕ್ತಿ
ನಿನಗಿನಿತು ಧಾವತಿಯ ಮಾಡಿತೆನ್ನಯ ಯುಕ್ತಿ
ನಿನಗಾವ ಸಂಪ್ರೀತಿಯೈ ಇಲ್ಲಿಗೈತರಲು
ಎನಗಿದಂ ತಿಳಿಪೆಂದು ಮುದ್ದು ನುಡಿಗಳ್ನುಡಿಯೆ ಪೂಮಳೆಗರೆದುದಾಕ್ಷಣಂ ೩೦

ಆಗಳಾ ಗೋವುಗಳ ಜನ್ಮವೆಲ್ಲಂ ಕಳೆದು
ಬೇಗದಿಂ ಋಷಿವೇಷಮಂ ತನತನಗೆ ತಳೆದು
ನಾಗಾಭರಣ ನಾಗಚರ್ಮಧರ ರಕ್ಷಿಸೈಯೆನುತವರು ಕೈಮುಗಿವುತೆ
ಈಗಳುಂ ಕೃತಕೃತ್ಯರಾದೆವೀ ಭಕ್ತನಿಂ
ವೇಗದಿಂ ಗೋಜಾಗತಂ ಮಾಣ್ದುದೀತನಿಂ
ರಾಗದಿಂದೆಮ್ಮನುಂ ಪೊರೆಯೆನುತ್ತೆರಗಲಾ ಋಷಿಗಳಿಗಭಯವೀವುತೇ ೩೧

ನಂದೀಶನಾಕ್ಷಣದಿ ಪುಷ್ಪಕಂವೆರಸಿ ಗಣ
ಸಂದೋಹದಿಂದೆ ಬರಲಾ ಪುಷ್ಪಕದೊಳು ಮುದ
ದಿಂದಲಾನಾಯನಾರನನು ಕುಳ್ಳಿರಿಸುತ್ತೆ ಕೈಲಾಸಮಂ ಪೊಗುತ್ತೆ
ಬಂಧುರದ ಗಣನಿಕರದಲ್ಲಿ ಭಕ್ತಂಗೆ ನಾ
ನಂದು ತತ್ಪದವಿಯಂ ಕೊಟ್ಟೆನದರಿಂದೆ ನೀ
ನಿಂದು ತದ್ಭಕ್ತನಂ ಚಂದದಿಂ ನಂಬಿ ನೀನೊಂದೆಮಾನಸದಿ ನುತಿಸೈ ೩೨

ಕುಶಲದಿಂದಾಲಿಸೈ ನಂಬಿ ಮತ್ತೊರೆವೆ ನಾಂ
ವಸುಮತಿಗೆ ತೊಡವೆನಿಸಿ ಚೋಳದೇಶದೊಳೊಂದು
ಎಸೆವ ಮಧುರಾಪುರವೆನಿಸುತಿರಲ್ಕಂಗಲ್ಲಿರ್ದನೊರ್ವನೆನ್ನಯ ಭಕ್ತನು
ಪೆಸರು ಒಲಘಾಂಡಮೂರ್ತಿಗಳೆನಿಸಿ ವಿತ್ತದಿಂ
ದಸಮನೆಂದೆನಿಸಿ ವ್ಯವಹಾರದಿಂ ಬಲಿಯೆನಿಸಿ
ಒಸೆದು ಸದ್ಭಕ್ತರ್ಗೆ ಕಿಂಕರಂ ತಾನೆನಿಸಿ ಗೆಲವು ಶರಣಾಳಿಗೆನಿಸಿ ೩೩

---

೧ ರ್ಕ (ಹ)

ಇಂತಿರ್ದು ಲಿಂಗಾಲಯಕ್ಕೊಲವಿನಿಂ ಬಂದು
ಸಂತತಂ ಪುಳಕಂಗಳಾವರಿಸುತಿರಲಂದು
ಅಂತಕಾಂತಕ ಶಂಭುವೆ ಎನುತ್ತೊಳಪೊಕ್ಕು ಭರ್ಮ ಕಳಶಂಗಳಿಂದೆ
ತಾಂ ತವೆ ಸುಗಂಧೋದಕದಿ ಮಜ್ಜನವನೆರೆದು
ಮುಂತೆ ಭಸಿತವ ಧರಿಸಿ ಗಂಧಾಕ್ಷತೆಯನಿಟ್ಟು
ಸಂತಸದಿ ಬಿಲ್ವ ಸಂಪಗೆಯರಲ್ಗಳಂ ಸೂಡಿ ಮಂಗಳಾರತಿಯನೆತ್ತಿ ೩೪

ಆರೋಗಿಸಲ್ಕೊಟ್ಟು ಲಿಂಗವಂ ಬಲವಂದು
ಕಾರುಣ್ಯನಿಧಿಯೆ ಚಂದನದ ನೇಮವನ್ನೈದೆ
ಪೂರೈಸಿ ನಡೆಸುವುದು ನಿನಗಿದೇನರಿದಲ್ಲ ತಪ್ಪದಂತೀವುದಯ್ಯಾ
ಮಾರಾರಿಯೇ ಶರಣೆನುತ್ತೆ ಗೃಹಕೈತಂದು
ಸಾರ ಸುಖದಿಂದಿರುತೆ ಪುಸಿಗಿಯುಗಿ ಪುಸಿಯಂ ಕೇಳ
ನಾರಾದಡೇಂ ಮರೆವೊಗಲ್ಕಾಯದಿರನಾತ ಸತ್ಯವೇ ಲಾಭಪೆಸುವಂ ೩೫

ಶರಣರ್ಗೆ ಕೊಡುವುದೇ ವ್ಯವಹಾರವಾತಂಗೆ
ಪರಮಲಿಂಗಕ್ಕೆ ಚಂದನದ ನೇಮಂ ತನಗೆ
ನಿರುತ ಸದ್ಭಕ್ತರಿಚ್ಛಾಪದಾರ್ಥವನೀವುತವರೆನ್ನ ಬಳಗವೆನುತೆ
ಪರಿಪರಿಯ ಗಂಧದುರು ನೇಮಮಂ ನಡೆಸುತ್ತ
ಲಿರಲಿಂತು ಕೆಲವು ವತ್ಸರ ನಡೆಯಲೀ ದೃಢಂ
ಪರಿಕಿಸುವೆನೆಂದು ನಾನವನ ಧನವೆಲ್ಲಮಂ ಕಳೆಯಲುದ್ಯೋಗಿಸಿದೆನು ೩೬

ಕೊಟ್ಟುದುಂ ಕೊಟ್ಟಲ್ಲಿ ಇಟ್ಟುದುಂ ಇಟ್ಟಲ್ಲಿ
ನೆಟ್ಟನಾ ವ್ಯವಸಾಯದಲ್ಲಿ ಧನವೆಲ್ಲಮುಂ
ಕೆಟ್ಟುಪೋಗಲ್ಕನಿತನಿತುಮುಳ್ಳವಿತ್ತವಾ ಚಂದನಕೆ ಸರಿಯಾದುದು
ಪಟ್ಟುಪಟ್ಟಾವಳಿಗಳೆಲ್ಲಮುಂ ಚಂದನಕೆ
ತೊಟ್ಟು ಮೆರೆವಾಭರಣಗಳವೆಲ್ಲಮುಂ ಚಂದನಕೆ
ಪುಟ್ಟಿದಂದಿಂದು ಸಂಪಾದಿಸಿದ ಭೂಮಿಯದು ಚಂದನಕೆ ಬೆಲೆಯಾದುದು ೩೭

---

೧ X (ಹ) ೨ ಮ (ಹ) ೩ ಲ್ಕೆ (ಹ) ೪ ಮುಮನಿಲ್ಲ (ಹ)

ಎನಗೋಸುಗಂ ಮರದ ಮೇಲೆ ನಿಂದೈತಂದೆ
ಎನಗೋಸುಗೀಯಡವಿಯೊಳಗೆ ಬಂದೈತಂದೆ
ನಿನಗಿನಿತವಸ್ಥೆಯಂ ಮಾಡಿತೇನಯ್ಯ ಎನ್ನಯ ದಿವ್ಯ ಪರಮ ಭಕ್ತಿ
ನಿನಗಿನಿತು ಧಾವತಿಯ ಮಾಡಿತೆನ್ನಯ ಯುಕ್ತಿ
ನಿನಗಾವ ಸಂಪ್ರೀತಿಯೈ ಇಲ್ಲಿಗೈತರಲು
ಎನಗಿದಂ ತಿಳಿಪೆಂದು ಮುದ್ದು ನುಡಿಗಳ್ನುಡಿಯೆ ಪೂಮಳೆಗರೆದುದಾಕ್ಷಣಂ ೩೦

ಆಗಳಾ ಗೋವುಗಳ ಜನ್ಮವೆಲ್ಲಂ ಕಳೆದು
ಬೇಗದಿಂ ಋಷಿವೇಷಮಂ ತನತನಗೆ ತಳೆದು
ನಾಗಾಭರಣ ನಾಗಚರ್ಮಧರ ರಕ್ಷಿಸೈಯೆನುತವರು ಕೈಮುಗಿವುತೆ
ಈಗಳುಂ ಕೃತಕೃತ್ಯರಾದೆವೀ ಭಕ್ತನಿಂ
ವೇಗದಿಂ ಗೋಜಾಗತಂ ಮಾಣ್ದುದೀತನಿಂ
ರಾಗದಿಂದೆಮ್ಮನುಂ ಪೊರೆಯೆನುತ್ತೆರಗಲಾ ಋಷಿಗಳಿಗಭಯವೀವುತೇ ೩೧

ನಂದೀಶನಾಕ್ಷಣದಿ ಪುಷ್ಪಕಂವೆರಸಿ ಗಣ
ಸಂದೋಹದಿಂದೆ ಬರಲಾ ಪುಷ್ಪಕದೊಳು ಮುದ
ದಿಂದಲಾನಾಯನಾರನನು ಕುಳ್ಳಿರಿಸುತ್ತೆ ಕೈಲಾಸಮಂ ಪೊಗುತ್ತೆ
ಬಂಧುರದ ಗಣನಿಕರದಲ್ಲಿ ಭಕ್ತಂಗೆ ನಾ
ನಂದು ತತ್ಪದವಿಯಂ ಕೊಟ್ಟೆನದರಿಂದೆ ನೀ
ನಿಂದು ತದ್ಭಕ್ತನಂ ಚಂದದಿಂ ನಂಬಿ ನೀನೊಂದೆಮಾನಸದಿ ನುತಿಸೈ ೩೨

ಕುಶಲದಿಂದಾಲಿಸೈ ನಂಬಿ ಪುತ್ತೊರೆವೆ ನಾಂ
ವಸುಮತಿಗೆ ತೊಡವೆನಿಸಿ ಚೋಳದೇಶದೊಳೊಂದು
ಎಸೆವ ಮಧುರಾಪುರವೆನಿಸುತಿರಲ್ಕಂಲ್ಲಿರ್ದನೊರ್ವನೆನ್ನಯ ಭಕ್ತನು
ಪೆಸರು ಒಲಘಾಂಡಮೂರ್ತಿಗಳೆನಿಸಿ ವಿತ್ತದಿಂ
ದಸಮನೆಂದೆನಿಸಿ ವ್ಯವಹಾರದಿಂ ಬಲಿಯೆನಿಸಿ
ಒಸೆದು ಸದ್ಭಕ್ತರ್ಗೆ ಕಿಂಕರಂ ತಾನೆನಿಸಿ ಗೆಲವು ಶರಣಾಳಿಗೆನಿಸಿ ೩೩

---

೧ ರ್ಘ (ಹ)

ಇಂತಿರ್ದು ಲಿಂಗಾಲಯಕ್ಕೊಲವಿನಿಂ ಬಂದು
ಸಂತತಂ ಪುಳಕಂಗಳಾವರಿಸುತಿರಲಂದು
ಅಂತಕಾಂತಕ ಶಂಭುವೆ ಎನುತ್ತೊಳಪೊಕ್ಕು ಭರ್ಮ ಕಳಶಂಗಳಿಂದೆ
ತಾಂ ತವೆ ಸುಗಂಧೋದಕದಿ ಮಜ್ಜನವನೆರೆದು
ಮುಂತೆ ಭಸಿತವ ಧರಿಸಿ ಗಂಧಾಕ್ಷತೆಯನಿಟ್ಟು
ಸಂತಸದಿ ಬಿಲ್ವ ಸಂಪಗೆಯರಲ್ಗಳಂ ಸೂಡಿ ಮಂಗಳಾರತಿಯನೆತ್ತಿ ೩೪

ಆರೋಗಿಸಲ್ಕೊಟ್ಟು ಲಿಂಗವಂ ಬಲವಂದು
ಕಾರುಣ್ಯನಿಧಿಯ ಚಂದನದ ನೇಮವನ್ನೈದೆ
ಪೂರೈಸಿ ನಡೆಸುವುದು ನಿನಗಿದೇನರಿದಲ್ಲ ತಪ್ಪದಂತೀವುದಯ್ಯಾ
ಮಾರಾರಿಯೇ ಶರಣೆನುತ್ತೆ ಗೃಹಕೈತಂದು
ಸಾರ ಸುಖದಿಂದಿರುತೆ ಪುಸಿಂಯುಂ ಪುಸಿಯಂ ಕೇಳ
ನಾರಾವಡೇಂ ಮರೆವೊಗಲ್ಕಾಯದಿರನಾತ ಸತ್ಯವೇ ಲಾಭವೆಸುವಂ ೩೫

ಶರಣರ್ಗೆ ಕೊಡುವುದೇ ವ್ಯವಹಾರವಾತಂಗೆ
ಪರಮಲಿಂಗಕ್ಕೆ ಚಂದನದ ನೇಮಮಂತ ತನಗೆ
ನಿರುತ ಸದ್ಭಕ್ತರಿಚ್ಛಾಪದಾರ್ಥವನೀವುತವರೆನ್ನ ಬಳಗವೆನುತೆ
ಪರಿಪರಿಯ ಗಂಧದುರು ನೇಮಮಂ ನಡೆಸುತ್ತ
ಲಿರಲಿಂತು ಕೆಲವು ವತ್ಸರ ನಡೆಯಲೀ ದೃಢಂ
ಪರಿಕಿಸುವೆನೆಂದು ನಾನವನ ಧನವೆಲ್ಲಮಂ ಕಳೆಯಲುದ್ಯೋಗಿಸಿದೆನು ೩೬

ಕೊಟ್ಟುದುಂ ಕೊಟ್ಟಲ್ಲಿ ಇಟ್ಟುದುಂ ಇಟ್ಟಲ್ಲಿ
ನೆಟ್ಟನಾ ವ್ಯವಸಾಯದಲ್ಲಿ ಧನವೆಲ್ಲಮುಂ
ಕೆಟ್ಟುಪೋಗಲ್ಕನಿತನಿತುಮುಳ್ಳವಿತ್ತವಾ ಚಂದನಕೆ ಸರಿಯಾದುದು
ಪಟ್ಟುಪಟ್ಟಾವಳಿಗಳೆಲ್ಲಮುಂ ಚಂದನಕೆ
ತೊಟ್ಟು ಮೆರೆವಾಭರಣಗಳವೆಲ್ಲಮುಂ ಚಂದನಕೆ
ಪುಟ್ಟಿದಂದಿಂದು ಸಂಪಾದಿಸಿದ ಭೂಮಿಯದು ಚಂದನಕೆ ಬೆಲೆಯಾದುದು ೩೭

---

೧ X (ಹ) ೨ ಮ (ಹ) ೩ ಲ್ಕೆ (ಹ) ೪ ಮುಮನಿಲ್ಲ (ಹ)

ಮಾನವುಂ ಮಹಿಮೆಯುಂ ಚಂದನಕೆ ತೀರಿತ್ತು
ನಾನಾ ವಿಳಾಸಮುಂ ದಿನದಿನಕೆ ಸವೆಯಿತ್ತು
ಏನೆಂಬೆನಂಗನೆಯ ಕೊರಳ್ಗೆರಡಾಳಿಪ್ರೊಂದುಳಿಯಿತ್ತು ಮಿಕ್ಕುದಿಲ್ಲಂ
ಏನಿದೇತರ ಬಾಳ್ವೆ ಚಂದನಂ ಸಲಿಸದಿರೆ
ಮಾನಿನಿಯ ಧೈರ್ಯಮಂ ತಾಳಿ ತಾ ತಾಳಿಯೆನು
ತಾನಂದದಿಂದೆ ಸಂಸಾರಮಂ ೧ಪರಿವಂತೆ೦ ಹರಿದನಾಗಳೆ ತಾಳಿಯುಂ ೩೮

ಮರೆದನಾಗಳೆ ಲಜ್ಜೆಯುಂ ತಾಳಿಯುಂ ತಂದು
ಪುರದಿ ಮಾರಿದನೈದು ಹಣವಿಂಗೆ ಶಂಕಿಸದೆ
ಸರಸ ಚಂದನವನುಂ ಕೊಂಡು ನೇಮಂ ತೀರ್ಚೆತಂದು ತಾನುಪವಾಸದಿಂ
ಇರದೆ ಹತ್ತೈದುದಿನ ನೇಮವುಂ ಸಾಗಿತ್ತು
ಶರಣಂಗೆ ಹತ್ತೈದು ಉಪವಾಸವಾಗಿತ್ತು
ಹರಹರಯೆನುತ್ತೆ ಲಿಂಗಾಲಯಕ್ಕೈತಂದು ಗಂಧವಿಕ್ಕುತ್ತೆನಿಂದು ೩೯

ನಾಳಿಂಗೆ ನೇಮಕ್ಕೆ ಗಂಧವಿಲ್ಲಿಲ್ಲಯ್ಯ
ಶೂಲಿ ನಿನ್ನ೨ಯುಚಿ ಚಿತ್ತವಿದ್ದಂತೆ ಮಾಡಯ್ಯ
ಕಾಲಹರ ನೀನೀವುದಲ್ಲದೆನ್ನಳವೇಯೆನುತ್ತೈತಂದು ಪಟ್ಟಿರಲ್ಕೆ
ಪೇಳಲೇನಾನವನ ಕನಸಿನೊಳಗಂ ನಿಂದು
ಆಳೋಚನೆಯದೇಕೆ ಗಂಧಕ್ಕೆಯೆಲೆ ಮಗನೆ
ಆ ಲಲಿತ ಗಂಧಮುಂ ನಿನ್ನ ಮೊಳಕೈಯೊಳಿಹುದೆನಲಾತನೆಚ್ಚೆತ್ತನು ೪೦

ಬೆಳಗಾಗಲೆದ್ದವಂ ನೆನೆದು ನೋಡಿದ ಕನಸಿ
ನೊಳಗೀಶ್ವರಂ ಬಂದು ಬೆಸಸಿದನಿದೇನೆಂದು '
ಮೊಳಕೈಯನಲ್ಲಿ ಮೆಲ್ಲನೆ ಮುಟ್ಟಿ ನೋಡುತಂ ಸದ್ಗಂಧವಿಲ್ಲಿರ್ಪುದೆ
ತಿಳಿದುನೋಡುವನಿಂತಿದಂ ಗಂಧವಾಗದೊಡೆ
ಬಳಿಕ ಹೊಸಪರಿಯನೆಸಗುವೆನೆನುತೆ ತಲ್ಲಿಂಗ
ನಿಳಯಕ್ಕೆ ನಡೆತಂದು ಎಲೆದೇವ ನಿನ್ನಿರುಳಿನಲ್ಲಿ ನೀವೆನಗೊರೆದಿರಿ ೪೧

---

೧ X (ಹ) ೨ X (ಹ)

ಅದರೊಲಾಂ ಗೈವೆ ಮೊಳಕೈಯ ಮುಂತೆಯ್ಯಲ್ಕೆ
ಚದುರವಹ ಚಂದನಮಿದಪ್ಪುದೇನ್ಸೈ ಬೆಸಸು
ಅದನರಿಯಬಾರದೇಕೆನುತೆ ಮಜ್ಜನಕೆರೆದನಂತರಂ ಸಾಣೆಗಲ್ಲಂ
ಮುದದಿಂದೆ ತೊಳೆದು ಮೊಳಕೈಯನುಂ ತೊಳೆದು ತಾ
ಸದುರದಾ ವೀರರಸದಗ್ಗಳಿಕೆಯಂ ತಳೆದು
ಮದನ ಮದಕುಧರಹರಕುಲಿಶಾಯಮಾನಂ ಕಪರ್ದಿಯೆ ಕರುಣಿಸೆನುತಂ ೪೨

ದೇವಾ ಇದೇಂ ಚರ್ಮವಲ್ಲ ನೋಡೈ ತಂದೆ
ದೇವಾ ಇದೇಂ ರಕ್ತವಲ್ಲ ನೋಡೈತಂದೆ
ದೇವಾ ಇದೇಂ ಸ್ಥೂಲ ಶಾರೀರಕಾವರ್ಕವಾಗಿಹ ಜುಗುಪ್ಸೆಯಲ್ಲಂ
ಆವ ಸದ್ಗಂಧವಿದಕೆಣೆಯಲ್ಲವೆಂಬಂತೆ
ಶೀವಿದಂ ಕರುಣಿಪುದೆನುತ್ತೆ ಕುಸಿದುಂ ತಾನು
ಏವೇಳ್ವೆ ಮೊಳಂಕಾಲನೂರಿಯೆಡಗೈಯಿಂದ ಬಲದ ಮೊಳಕೈಯ ಒಡಿಮು ೪೩

ಚಿತ್ತಮಂ ಕೊಂಕಿರಲು ವೃತ್ತಮಂ ಮಾಳ್ಪಂತೆ
ಮತ್ತೆನ್ನನೋಲಿಸಲಾಜ್ಞೆಯನು ಕೈಗಿತ್ತಂತೆ
ಉತ್ತಮೋತ್ತಮವೆನಿಪ ಪದವಿಯಂ ಕೈಯ ಮೇಳಲಂ ಪಡೆವೆನೆಂಬುವಂತೆ
ಅತ್ತಿತ್ತ ಚಲಿಸದಾ ಸಾಣೆಗಲ್ಲೊಳಗೆ ತಾ
ನೊತ್ತಿ ಮೊಳಕೈಯನುಂ ನೂಂಕಿತೆಯ್ಯಲ್ಕೆ ಹು
ಟ್ಟಿತ್ತಲ್ಲಿ ಸದ್ಗಂಧವೇವೇಳ್ವೆನ್ಸೈ ನಂಬಿ ಮಘಮಘಿಸುತಿರುತಿರ್ದುದು ೪೪

ಏಕೆ ಬಾವನ್ನವದಕಿಮ್ಮಡಿಯ ಪರಿಮಳಂ
ಏಕೆ ಕಸ್ತುರಿಯದಕೆ ಮುಮ್ಮಡಿಯ ಪರಿಮಳಂ
ಏಕೆ ಮಲ್ಲಿಗೆಮೊಲ್ಲೆ ಪದ್ಮ ಚಂಪಕ ಮರುಗ ಮೊದಲಾದ ಪರಿಮಳಗಳು
ಈ ಕೈಯ ಗಂಧಕ್ಕೆ ಸರಿಯುಲ್ಲವೆಂಬಂತೆ
ನಾಕಿಗರ್ನಿಟ್ಟಿಸಲ್ಕಿದುವೆ ಹೌದೆನುವಂತೆ
ಜೋಕೆಯೆನ್ನದೆ ತೇಯಲಾಕರಂ ಸವೆದುದುಂ ಕವಿದುದುಂ ಸದ್ಗಂಧಮುಂ ೪೫

---

೧ ಣ (ಹ) ೨ ಣ (ಹ) ೩ ಲಿಂ (ಹ)

ಪರಿಮಳವ ಕಾಣುತೊಲಘಾಂಡಮೂರ್ತಿಗಳಾಗ
ಳರರೆ ಕಟ್ಟಿ ಕಟ್ಟಿನು ಇನಿತುಕಾಲವರಿಯದೆಯಿದಿಂ
ತಿರುವದೆಂಬುದನು ಮುನ್ನವೆ ಪೇಳದಿರ್ಪರೇನಯ್ಯ ಶಂಕರ ಶಶಿಧರಾ
ಹೊರಗೆ ಗಂಧವನರಸಿಯಾನಿಂತುವಾದೆನೇ
ನೆರೆ ತೆಯ್ದು ಕೊಂಡು ನಿನಗಾಗಿ ನಾಂ ಸವೆಯನೇ
ನರಿದೆ ನಾಂ ತನುವಿದುಳ್ಳನ್ನೆಗಂ ತೆಯ್ವಲೋಗರ ಗಂಧವೇಂ ಗೈವೆನು ೪೯

ಎನುತೆ ಕೈಯಂ ವಸ್ತ್ರದಿಂದಾತ ಮುದ್ರಿಸ
ಲ್ಕನಿತರೊಳು ಮುದ್ರೆಯಂ ಸಡಲಿ ನಾಂ ತೋರಿಸಲು
ವಿನುತ ಲಿಂಗದೊಳು ನಿಜರೂಪಮಂ ಭಕ್ತನಂ ಮನವಾರೆ ನಾನಪ್ಪುತೇ
ಕನಕ ಪುಷ್ಪಕದೊಳಾತನನಿರಿಸಿ ಕೈಲಾಸ
ವನು ಪೊಕ್ಕು ಒಲಘಾಂಡಮೂರ್ತಿಗಾನಂದದಿಂ
ಗಣಪದವಿಯನ್ನಿತ್ತೆನಿದರಿಂದಲಾಭಕ್ತನಂ ನೀನು ನೆನೆ ಸೌಂದರಾ ೫೦

ಅಂತು ಸಂಧಿ ೧೨ ಕ್ಕಂ ಪದಗಳು ೫೫೮ ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

## ಸಂಧಿ : ೧೩

**ಸೂಚನೆ :**

ರುದ್ರಸ್ವರೂಪರೆಂದೆನಿಸುತ್ತಲಿಳೆಯಲ್ಲಿ
ಭದ್ರ ಕಾರ್ಯಾಧಿಕಾರಿಗಳೆನಿಸಿ ಮೆರೆದ ಆ
ರುದ್ರಪಶುಪತಿಯ ತಿರುನಾಳ್ಪೋವರಿತಿಹಾಸಮಂ ಕೇಳ್ದನಾ ಸೌಂದರಂ

ಅತಿವಿಚಿತ್ರ ಚರಿತ್ರನಾದ ಸದ್ಭಕ್ತನು
ನ್ನತ ಕಥಾವಿಸ್ತರವನೊರೆವೆನಾಲಿಸು ನಂಬಿ
ಕ್ಷಿತಿಗಧಿಕವೆನಿಸುವಾ ಚೋಳಮಂಡಲದೊಳೊಪ್ಪಿತ್ತೊಂದು ದಿವ್ಯಪುರವು
ಮತಭಕ್ತಿಗದುವೆ ನೆಲೆವನೆಯೆನಿಸಿ ಸದ್ಭಕ್ತ
ವಿತತಿಗಾಗರವೆನಿಸಿ ಲಿಂಗಾಯಲಯಂಗಳಿಂ
ದತಿಶಯುವದೆನಿಸಿ ತಿರುತಲೆಯೂರೆನಿಪ್ಪ ಪೆಸರಿಂದಲೊಪ್ಪುತ್ತಿರಲ್ಕೆ ೧

ಆ ಪುರದೊಳಿರ್ಪನೊರ್ವಂ ಶಿವಬ್ರಾಹ್ಮಣಂ
ಕೋಪತಾಪವಿದೂರ ರುದ್ರಪ್ರಭುವೆನಿಪ್ಪ
ವಾ ಪರಮನಾಮದಿಂ ಶುಚಿಯೆಂಬ ಸತಿಯಿಂದೆ ಸುಖದಿಂದಲಲ್ಲಿರುತ್ತೆ
ಶ್ರೀಪಸಖ ಶಿವನೆನ್ನ ಬಂಧುವೆನುತಂ ಮತ್ತೆ
ಗೋಪವಾಹನನೆನ್ನ ಪಿತನೆನುತ್ತಂ ಸುತಿಸು
೧ತಾ೧ ಪುಣ್ಯಪುರುಷನತಿಭಕ್ತಿಯಿಂದರ್ಚಿಪಾಸಕ್ತಿಯಿಂದೊಪ್ಪಿರುತಿರೆ ೨

ಅಲ್ಲಿಯೆನ್ನಯ ಭಕ್ತಿಯೊಡಲಾಂತು ಜನಿಸುವಂ
ತಲ್ಲಿಯೆನ್ನಯ ಸತ್ವ ತನುವನಾಂತೊಗೆವಂತೆ
ಅಲ್ಲಿಯೆನ್ನಯ ಸೌಕುಮಾರ್ಯವದು ರೂಹುಮಂದಳೆವುತುದಯಿಸುವ ತೆರದಿ
ಅಲ್ಲಿಯೆನ್ನ ಸ್ನೇಹಕಾಯದಿಂ ಪುಟ್ಟಿದಂ
ತಲ್ಲಿ ಶುಚಿ೨ಯ೨ಳ ಗರ್ಭದಿಂ ಪುಟ್ಟಿದಂ ಕುವರ
ನುಲ್ಲಾಸವೇನೆಂಬೆ ಮುಂದೆನ್ನನೊಲಿಸುವಂ ಬಲಿಸುವಂ ಭಕ್ತಿಯ೩ನೆ೩ವಂ ೩

ಈತನುನ್ನತ ಮಹಿಮೆಯಂ ಪೇಳಲರಿದೆಮಗೆ
ಭೂತಲದೊಳಸಮನಹನೆನುತೆ ಜೋಯಿಸರೊರೆಯೆ
ತಾತನತಿ ಸಂತಸದಲಾ೪ವೂರ೪ಲಿಂಗಪ್ರಸಾದ ಬಾಯಿವೆಣ್ಣೆಯಿಕ್ಕಿ
ಜಾತಕರ್ಮವನ್ನೈದೆ ನೂತನವನಲ್ಕೈಸಗು
ತಾತಂಗೆ ರುದ್ರಪಶುಪತಿಯೆಂದು ಹೆಸರಿಟ್ಟು
ಪೋತು ಮಾತಾಪಿತರ್ಸುಖದಿಂದ೫ಲೋ೫ವುತ್ತೆ ನೋಡುತ್ತಲಿರುತಿರಲ್ಕೆ ೪

ಪೆರೆಯು ಕಳೆಯಂತೆ ತೊಳತೊಳ೬ಗಿ೬ ಬೆಳಗುತ್ತಮಿರೆ
ಹರೆಯದೊಡನೊಡನೆನ್ನ ಭಕ್ತಿದಳವೇರುತಿರೆ
ಸರಸದಿಂದಾ ಭಕ್ತಿಯೊಡನೆ ರೂಪಂ ಚೆಲ್ವನಾಂತು ಸುಖವಾಂತು ಬೆಳೆಯೆ
ನೆರೆಷೋಡಶಪ್ರಾಯವಾದುದಾ ಮುಗ್ಧಂಗೆ
ವರ೭ಧ೭ರಾ ಕುಸುಮಕೋದಂಡನೆನೆ ಭಕ್ತಂಗೆ
ಗುರುಕರುಣವಾದುದಾ ಶಿವಲಿಂಗಮೂರ್ತಿಯೊಳು ಭಕ್ತಿರತಿಯುಂ ಬಲಿದುದು ೫

---

೧ ವಾ (ಹ) ೨ ಗ (ಹ) ೩ ನು (ಹ) ೪ ವುರು (ಹ) ೫ ಲೊಲ (ಹ)
೬ ಗು (ಹ) ೭ ದ (ಹ)

ಮನವೆಂಬ ಭೂಮಿಯೊಳು ಭಕ್ತಿಬೀಜವನಿರಿಸೆ
ಅನುನಯದಿ ಪಂಚಾಕ್ಷರೀ ವೃಕ್ಷವವತರಿಸೆ
ವಿನುತ ಶಿವನೆಂಬ ಫಲಮಂ ಪಡೆದು ನಲಿದು ಸವಿದುಂ ಸೊಗಸಿನಿಂ ಜೀವಿಪಂ
ಇನಿತು ಸದ್ಭಕ್ತಿಯೊಳು ಯುಕ್ತಿಯಿಂದುರೆ ಸಂದು
ಅನುದಿನಂ ಪೂಜಿಪ ನೇಮಕ್ಕೆ ಮನವಂ ತಂದು
ಅನಘನಹ ತತ್ಪುರದ ದೇವರಲ್ಲಿಗೆ ಬಂದು ಮೃಡನೆ ಶರಣೆಂದು ನಮಿಸಿ ೬

ಮೆಲ್ಲಮೆಲ್ಲನೆ ಪೂಜೆಯಂ ರಚಿಯಿಸುತ್ತಿರಲು
ಅಲ್ಲಿ ಲಿಂಗದೊಳೊಂದಿರುಂಪೆಯೆಸೆವುತ್ತಿರಲು
ನಿಲ್ಲದದನಂ ಕಂಡು ಮರುಗಿ ಹವ್ವನೆ ಹಾರಿ ಮಿಗೆಮನಂಗೆಟ್ಟು ನೊಂದು
ಮೆಲ್ಲೊಡಲಿಪಕ್ಕೀ ಇರುಂಪೆಯೂರಿತೆ ತಂದೆ
ಎಲ್ಲಿರ್ದ ಸುಮ್ಮನಿಹರೇಗೌರಿ ಗಿರಿಜಾತೆ
ನಲ್ಲಂಗಿರುಂಪೆಯೂರಲು ನೋಡುವುದು ನೀತಿ ಇಲ್ಲಿಗೆಲ್ಲಿದಲೆತ್ತ ಪೋದೆ ೭

ಕಂದಿತೇನಯ್ಯ ತನು ಮಿಗೆ ನೊಂದೆಯೇನಯ್ಯ
ಚಂದ ನಾಂ ಬೆಂದೆ ನಾಂ ನೋಳ್ಪೆನಿದನೆಂತು ನಾ
ನೆಂದೆನುತೆ ಪಂಚಾಕ್ಷರಗಳಿಂದೆ ಮಂತ್ರಿಸುತೆ ಪಂಚಾಮೃತಳವಳನೆರೆವುತೆ
ಇಂದಿದಂ ಸಾಲದೆನುತರಿದು ಮತ್ತಲ್ಲಿ ತಾ
ನಂದುಂ ಸಹಸ್ರಾಭಿಷೇಕವುಂ ಮಾಡಿ ಮುದ
ದಿಂದೆ ಪಂಚಾಕ್ಷರಿಯ ಜಪವನೆಸಗುತ್ತೆಂದಿನಂದದಿಂ ಪೂಜಿಸುತ್ತೆ ೮

ಪೂಜಿಸುವ ಪೂಬೀಳೆ ಪಂಚಾಮೃತಂ ಮಾಳ್ಪ
ನಾಜಲದೊಳೇನನಿರೆ ಪಂಚಾಮೃತಂ ಮಾಳ್ಪ
ಸೋಜಿಗದ ಕನಸಗಂಡಡೆ ಮತ್ತೆ ಪಂಚಾಮೃತಂಗಳಂ ಮಾಡುತಿರ್ಪಂ
ಮೂಜಗದೊಡೆಯನೆಂದು ಪಂಚಾಮೃತಂ ಮಾಳ್ಪ
ತೇಜವಹ ಸೊಡರಳಿಯೆ ಪಂಚಾಮೃತಂ ಮಾಳ್ಪ
ರಾಜಿಸುವ ನಿರ್ಮಲದ ಲಿಂಗವೆಡರುಗಳಂ ಕಳೆವುತ್ತೈದೆ ಪೂಜಿಸುತ್ತಂ ೯

೧ ಯಿಲ್ಲದೆ (ಜ) ೨ ರ್ಜ (ಹ) ೩ ರಿ (ಹ) ೪ X (ಹ)

ಇರಲಾನು ಚಿರಗಾಗಿ ಇಂತಪ್ಪ ಸುಖಿಯುಂಟೆ
ಧರಣಿಯೊಳಗೆನಗೀತನಂತೆ ಮೋಹಿತರುಂಟೆ
ಪರಮ ಮುಗ್ಧನೆನುತ್ತ ನಾನವನ ಕಣ್ಗೆ ಕಶ್ಮಲಗಳಂ ತೋರದಂತೆ
ಸರಸದಿಂದಾತ ನೋಳ್ಪುಂದಂಕೆ ಚೆಲುವೆನಿಸುತ್ತೆ
ಇರುಹೆಗಳ್ಪುಳುಗಳಡರಲ್ಕಾನೆ ತೆಗೆವುತ್ತೆ
ನೆರೆಮುಡಿದ ಪುವ್ವುಬಾಡಲ್ಕೆ ನಾಂ ತೆಗೆವುತ್ತೆ ಭಕ್ತ ನೋಯುವನೆನುತ್ತೆ ೧೦

ಇರುತಿರ್ಪನಾತ ಬರ್ಪಲ್ಲಿ ಸೌಂದರನಾಗಿ
ಇರುತಿರ್ಪನಾತಂಗೆ ಸುಕುಮಾರತರನಾಗಿ
ಇರಲಾತನೈತಂದು ಕಾಣುತ್ತೆ ಪುಟವೇಳ್ದು ಪುಳಕದಿಂದಂ ರಾಜಿಪಂ
ಉರವಣಿಪ ನೇಹದಿಂ ನಿಷ್ಠೆಯಿಂ ಪೂಜಿಪಂ
ಉರಗಂಗಳುಂ ಪೊರ್ದಲಮ್ಮವಾತನ ಮುಂದೆ
ವರ ಕರಿಣಜೀವಿಗಳ್ನಿಳಿಯವಾತನ ಮುಂದೆ ಕಂಟಕಂಗಳ್ತೋರವು ೧೧

ಅರಿಯನಾತಂ ಎನ್ನಪೆಸರುಗ್ರನೆಂಬುದಂ
೨ಅರಿಯನಾತಂ ಸರ್ಪಭೂಷನೆಂದೆಂಬುದಂ೨
ಅರಿಯನಾತಂ ಎನ್ನ ಹಸ್ತಂಗಳೊಳಗೆ ತಲೆಯುಗ್ನಿಯುಂ ಪಿಡಿದಿರ್ದುದಂ
ಅರಿಯನಾತಂ ಶಿರೋಮಾಲೆಯಂ ತೊಟ್ಟುದಂ
ಅರಿಯನಾತಂ ಶಿವಂ ಗರಳಧರನೆಂಬುದಂ
ಅರಿಯನಾತಂ ಶೂಲಿಕವಾಂತುಡಂ ತಚ್ಛೂಲದಲ್ಲಿ ಪೆಣವಿರ್ದುದರಿಯಂ ೧೨

ಬಲ್ಲನಾತಂ ಶಿವನುಪಾರಪುಣನೆಂಬುದಂ
ಬಲ್ಲನಾತನು ಶಿವನು ಸುಖಮೂರ್ತಿಯೆಂಬುದಂ
ಬಲ್ಲನೀಶಂ ವಿಮಲಚಂದ್ರಧರನೆಂಬುದಂ ಬಲ್ಲ ಗಂಗಾಧರನೆನಲ್
ಬಲ್ಲನಾತಂ ನಿರ್ಮಲಾಂಗನೆಂದೆಂಬುದಂ
ಬಲ್ಲನಾತಂ ದಯಾಸಿಂಧುವೆಂದೆಂಬುದಂ
ಬಲ್ಲನಾತಂ ಭಕ್ತಕುಲರಕ್ಷಣಾರ್ಥಿ ಶಂಕರನೆಂಬುದಂ ಮನದೊಳು ೧೩

೧ ರ (ಜ) ೨ X (ಹ) ೩ ಲ (ಹ)

ಇಂತರಿಯದರಿದಾತನುಂ ಸುಖದೊಳಿರುತಿರಲು
ಸಂತಸದಿ ಪಲಕೆಲವು ದಿವಸವರ್ಚಿಸುತಿರಲು
ತಾಂ ತವಕದಿಂದೊಂದು ದಿವಸದೊಳು ರುದ್ರಪಶುಪತಿಯೈತರುತ್ತಿರಲ್ಕೆ
ಪಿಂತೆಯೆಂದುಂ ಕಥಾ ಕೇಳದರಿಯದ ಸಾಧು
ಇಂತಂತುವುಂ ಪುರಾಣಂಗಳರಿಯದ ಸಾಧು
ಮುಂತೆ ಬರುತಿರಲೊಂದು ತಾಣದೊಳ್ಶಿವಪುರಾಣದ ಸಭೆಯನುಂ ಕಂಡನು ೧೪

ಬರುತಲ್ಲಿ ಮೈಯಿಕ್ಕಿ ಕೇಳಲು ಮನಂಗೊಂಡು
ಸರಸದಿಂ ಕುಳ್ಳಿರಲ್ಕಂದಾ ಪುರಾಣದೊಳ್[1]
ಶರಧಿಯೊಳ್ ವಿಷಜನನವಾದ ಭೀಕರಮುಮಂ ಬಳ್ಳಿವರಿದಮರರ್ಕಳಂ
ನೆರೆಸುಡುವ ಸಡಗರಮುಮಂ ಸುರಾಸುರರೆಲ್ಲ
ಒರಲಿ ಗೋಳಿಟ್ಟೋಡುವಚ್ಚರಿಗಳಂ ಮತ್ತೆ
ಭರದಿಂದಲೆನ್ನ ಪಾದದಿಬಿದ್ದು ಮೊರೆಯಿಡುವ ಪರಿಗಳಂ ನಾನವರ್ಗೆ ೧೫

ಕರುಣಿಸಿದ ನುಡಿಗಳಂ ಮತ್ತೆನ್ನ ಕರದೊಳಗೆ
ಉರುವಿಷವ ತಾಳ್ದುದಂ ಕೇಳುತಾ ಭಕ್ತನತಿ
ಹರುಷದಿಂ ಕೊಂಡಾಡಿ ಹಿಗ್ಗುತ್ತೆ ಹೆಚ್ಚುತ್ತೆ ಬಾಗುತ್ತೆ ತಲೆದೂಗುತೆ
ಇರಲಾ ವಿಷವನುಂ[3]ಡ[3]ನೀಶನೆಂದೆನುತಿರಲ್
ಹರನ ಕೊರಳೊಳಗಿನ್ನು ವಿಷವಿರ್ದಪುದುಯೆನಲ್
ನೆರೆಕೇಳ್ದು ಕೆಟ್ಟೆನಾಂ ಕೆಟ್ಟೆ[4]ನಾನೇನಾಯ್ತೆನುತ್ತೆ[4] ಮೂರ್ಛೆಯನಾಂತನು ೧೬

ಏನೆಂಬೆನಾ ರುದ್ರಪಶುಪತಿಗಳೆಚ್ಚತ್ತು
ನಾನಾ ಪ್ರಕಾರದಿಂ ಕಡುಗೋಪಮಂ ಬೆತ್ತು
ಏನೇನದೆಂತೆಂತು ತಾನೆತ್ತ ವಿಷವೆತ್ತ ಪೂವೆತ್ತ ಉರಿಯದೆತ್ತ
ಭೂನುತಂ ಶಿವನೇಕೆ ವಿಷವನುಂಡನದೇಕೆ
ನಾನಿತ್ತ ಬರಲೇಕೆ ಇದನು ಕೇಳಿದೆನೇಕೆ
ನಾನುರಾಗದಿ [5]ನಿನ್ನ[5]ನುಡಯುದೊಳಗರ್ಚಿಸಿದೆನೇನುವುಂ ತೋರಲಿಲ್ಲ ೧೭

---

೧ ಳು (ಹ)   ೨ ಡೆ (ಹ)   ೩ ಡು (ಹ)   ೪ ನಾನಾಯ್ತೆನುತೆ (ಹ)
೫ ನಿನ್ನಿ (ಜ)

ಎಲೆಪಾಪಿಗಳಿರಾ ಪರಿಹಾಸವಂ ಮಾಡಿರೆ
ಎಲೆಲೆ ಸತ್ತೆಂ ಕೆಟ್ಟೆನಿನ್ನೆಂತು ಪೇಳಿರೇ
ಅಳಲದೇತಕೆ ನೀವು ಸುಮ್ಮನಿರ್ದಪಿರೆಲ್ಲ ಅಯ್ಯೋಶಿವಂ ವಿಷಕ್ಕೆ
ಸಲುವನಲ್ಲಂ ಜೊನ್ನಮಂ ಕೊಳ್ಳಿ ಮುಟ್ಟಿತೇ
ಚೆಲುವ ಸುಧೆಯೊಳಗೆ ವಿಷವೈತಂದು ಬೆರಸಿತೇ
ಸಲೆಶಿವಂಗೇನಪ್ಪುದೋ ಶಿವದ್ರೋಹಿಗಳ್ಸುಮ್ಮನಿರ್ದಪರೆನುತ್ತೆ ೧೮

ಉರಿಯುಣಲ್ಕಾನೆಂತು ಸೈರಿಸಿದಳೋದೇವಿ
ನೆರೆಯಿದಂ ಬೇಡೆನ್ನದಿರ್ದಳೆ ಮಹಾದೇವಿ
ಸುರರಳಿದಡೇನಲ್ಲಿ ನರರಳಿದಡೇನಲ್ಲಿ ಬೊಮ್ಮೇಂದ್ರರಳಿದಡೇನು
ವರಸುರಾಸುರರೆನಿತು ಪುಟ್ಟರೇಂ ತಾಂ ನೆನೆಯೆ
[1]ಸುರಪವಿಧಿಗಳ[1] ಹಿಂಡು ಹಿಂಡಾಗದೇಂ ನೆನೆಯೆ
ಪರಮ ಶಿವನೊರ್ವನುಂ ತಾನಿರಲ್ಕೇನಾಗದಯ್ಯೋಶಿವಂ ಮರುಳನೈ ೧೯

ಪಲವು ಮಾತೇಕದಂ ಬಿಡಿಸುವೆಂ ಬಿಡಿಸುವೆಂ
ನೆಲದಲ್ಲಿ ಸುಖದಿಂದಲಿರಿಸುವೆಂ ಪರಸುವೆಂ
ಅಳಿಮನದ ಪುರುಷರಿಂ ಪೋಗದಿದು ಪಿರಿದಿಹುದು ಪಂಚಾಕ್ಷರಿಯನೀಕ್ಷಣಂ
ಚಲದಿಂದೆ ಜಪಿಸುವೆನೆನಲ್ಕಾ ಸಭೆಯೊಳಿರ್ದ
ಪಲವು ಪೌರಾಣಿಕರ್ನಿಷ್ಠಾಭರಿತರೆಲ್ಲ
ಸಲೆ ಕೌತುಕಂಬಟ್ಟರೇವೇಳ್ವೆನೆಲೆ ನಂಬಿ ಮುಂಗತೆಯನಾಲಿಸೊಲಿದು ೨೦

ಪೊರಮಟ್ಟನಲ್ಲಿ ಪಂಚಾಕ್ಷರೀ ಸಾಧಕಂ
ಪೊರಮಟ್ಟನಾತಂ ಮಹಾಭಕ್ತಿ ಮೋದಕಂ
ಭರದಿ ಬಂದಂ ವಿಷಂ ಪರಿಹಾರವಪ್ಪೆಡೆಗೆ ಸಾರಾಂಬುನಿಧಿಯ ತಡಿಗೆ
ಶರಧಿಯಂ ಪೊಕ್ಕಲ್ಲಿ ಕಂಠಪ್ರಮಾಣಮಾ
ದುರುಜಲದಿನಿಂದು ಮನುವಂ ಜಪಿಸತೊಡಗಿದಂ
ಉರಿಗೆ ದಾಹಮದಾಯ್ತು ಜಲಕೆ [2]ಶೀತಂ[2] ಪೊರ್ದಿತಗ್ನಿಮರುತಂಗಡರಿತು ೨೧

---

೧ ಸುರಪದವಿಗಳ (ಹ)    ೨ ತ (ಹ)

ಧಾರುಣಿಗೆ ಮುಸಿ ಮುಟ್ಟಿತಾಗ ಸಮ್ಮಲಿನವಾ
ಯ್ತೀಂರುಚಿರ ಮಂತ್ರದಿಂದವುಗಳಂ ಪರಿಹರಿಸಿ
ಸಾರವಹ ಸೊಗಸೆನಿಸಿ ತೋರುವೆಂ ನಾನೆಂಬನೆಂತಂತಂಲಾಂತನೆನ್ನ
ಶ್ರೀರಾಜಿತಂ ಕೊರಳಗರಳಮಂ ಬಿಡಿಸಲ್ಕು
ಮಾಂಗೆ ನೇಹದಿಂ ಪಿತನು ತೂಪಿರಿವಂತೆ
ವೀರಮುಗ್ಧಂ ರುದ್ರಪಶುಪತಿಯು ಪಂಚಾಕ್ಷರಿಯ ಜಪವನೆಸಗುತಿರ್ದಂ ೨೨

ಕ್ಷಿಪ್ರದೀದಾತ ಕಣ್ಮುಚ್ಚಿ ನೆರೆ ನಚ್ಚಿ ಮಹಿ
ಮಾಪ್ರತಾಪಂ ಮನುವನ್ನೆದೆ ಜಪಿಯಿಸುತಿರ್ದ
ನಪ್ರತಿಮಭಕ್ತನತ್ತಿತ್ತ ಚಲಿಸದೆ ಮನವನಿಲಿಸಿ ಜಪಿಯಿಸುತಿರ್ದನು
ಸುಪ್ರಬಲಕೀರ್ತಿಮಯನಲ್ಲಿ ಜಪಿಯಿಸುತಿರ್ದ
ನಪ್ರಮೇಯಾನಂದಮೂರ್ತಿ ಜಪಿಯಿಸುತಿರ್ದ
ವಿಪ್ರಕುಲನಾಥನಹರುದ್ರಪಶುಪತಿ ಜಪಿಸೂಲೇವೇಳಿಲ್ವೆ ಕೌತುಕವನು ೨೩

ಇಂತು ಜಲದೊಳು ನಿಂದು ಜಪಿಸುತಿರೆ ಜಲಚರಗ
ಳುಂ ತವಕದಿಂದಾತನಂಗದುರು ಚರ್ಮಮಂ
ಓಂತೆ ಮುಂತೆನ್ನದಾಪ್ಯೈಯೆಲ್ಲವಂ ಕಡಿದು ತಿಂದವೇನೆಂಬೆನವನಂ
ಇಂತಾಗಲಾತನಳುಕದೆ ಬಳುಕದಾನಂದ
ವಾಂತು ಜಪಿಯಿಸುತಿರ್ದನಸ್ಥಿಗಳುಳಿದವಲ್ಲಿ
ಸಂತಸದಲಸ್ಥಿಮಾಲಾಧರಂಗರ್ಪಿತವಿದೆಂಬಂತೆ ನಿಂದಿರ್ದನು ೨೪

ಆಯುತೀರ್ದಡೆ ನಿಷ್ಠೆ ತೀರದೆಂಬೊಲ್ಕೆನೆಯೆ
ಕಾಯವಳಿವಡೆ ಮನಂ ಗೃಹವಾಗುವೊಲ್ಕೆನೆಯೆ
ಆಯತದ ಪದವಿಗಳೊಳಿಪ್ಪ ದೇವರ್ಕಳೆಲ್ಲರ್ನಡುಗಿದರ್ ೩ಉಡುಗಿದರ್೩
ಮಾಯುವಾದರು ನಾಗಲೋಕದೊಳಗಿರ್ದ
ಜೀಯರಾ ದಿಕ್ಪತಿಗಳಳಗಿಳವುತಿರ್ದರು ನಾಕ
ನಾಯಕಂ ಜಡಜಭವರೆಲ್ಲ ನಿಜಪದಗಳಂ ಧ್ಯಾನಿಸುತ್ತಿರುತಿರ್ದರು ೨೫

---

೧ ತಾ (ಹ)     ೨ ಲ್ಕೆಯೇ (ಹ)     ೩ X (ಹ)     ೪ ೪ (ಹ)

ಎಳಸುವನೆಯೆನ್ನವಂ ಅಜಶಕ್ರಪದವಿಗಳ
ನೆಳಸುವನೆ ಭಕ್ತಿಯಿಲ್ಲದೆ ಕೆಡುವ ಪದವಿಯುಂ
ತಿಳಿಯದವರೀ ಭಾವಮಂ ಚಿಂತಿಸುತ್ತಿತ್ತಲಿರಲಿತ್ತಲೀ ಭಕ್ತನು
ಪಲವು ಕಾಲಂ ನಂಬುತಿಂತು ಜಪಿಸುತ್ತಿರಲು
ಒಲವು ಮಿಗಿಲವನ ಸಾಮರ್ಥ್ಯವೆನ್ನುವನೆಳೆಯೆ
ಸಲೆ ಭಕ್ತನಂ ಕಾಣದಿರಲಾಗದೆಂದು ನಾಂ ಗಿರಿಜೆಯೊಡನೀತೆಂದೆನು ೨೬

ಅಂದಿನ ಮಹಾವಿಷಂ ಕಂಠಾಭರಣಮಾಯ್ತು
ಇಂದಿವನ ನೇಪಲತೆ ಕೊರಳಿಗುಬ್ಬಸವಾಯ್ತು
ಇಂದುಮುಖಿ ನಡೆ ನೋಡುವೆವು ನಮ್ಮ ಭಕ್ತನಂ ಎನುತೆ ದೇವಿಯನು ಕೂಡಿ
ಬಂದಲ್ಲಿ ಕಾಣದಂತಗಜೆಯನಿರಿಸಿ ನಾನು
ಚಂದದಿಂ ನರವೇಷಮಂ ತಾಳುತೈತಂದು
ಸಿಂಧುವಿನ ತಡಿಯಲ್ಲಿ ನಿಲ್ಲುತಾ ರುದ್ರಪಶುಪತಿಯಂ ನುಡಿಸುತೆಂದೆನು ೨೭

ಎಲೆ ಭಕ್ತ ನೀನೇಕೆ ನಡುನೀರೊಳಿರುತಿರ್ದಿ
ಜಲಧಿಯೊಳು ಮಾಳ್ಪ ತಪವಾವುದಿಲ್ಲೇಕಿರ್ದಿ
ಘಳಿಲನಿದು ಪೇಳೆನಲು ಶಂಕರನ ಕೊರಳ ೩ಗರಳವನು ಬಿಡಿಸುವುದಲ್ಲದೆ
ಚಲಿಸೆನ್ನೈ ನಾನೆನಲು ನಗುತಾನು ಕಟಕಿಯಿಂ
ದೆಲೆ ಶಿಶುವೆ ನೀನೇಂಮಹಾಗರಳಮಂ ಕಳೆವೆ
ನೆಲದೊಳಗೆ ಮುನ್ನವಿಂತಪ್ಪ ವಾರ್ತೆಗಳ ನಾನೆಂತುವುಂ ಕೇಳ್ದುದಿಲ್ಲಂ ೨೮

ಹರನುಂಡ ಗರಳವಾಗಳೆ ಹೋದುದಿಂದುಂಟೆ
ಗರಳ ೪ಮೊಂದೆ೪ ಹರಂ ಧರಿಸಿದನೆನುತ್ತರಿಣದ್ವಾ೫
ಮರುಳಾಗದಿರು ನಿನ್ನವಶವಲ್ಲ ಬಿಡಿಸುವಡದೇನೇನ ಬಿಡಿಸುತಿ೬ರ್ಪಿ೬
ಕರದ ತಲೆಯಂ ಬಿಡಿಸು ತೊಟ್ಟ ಹಾವಂ ಬಿಡಿಸು
ಕರಿಯ ಚರ್ಮಂ ಬಿಡಿಸು ಪುಲಿಯದೊವಲಂ ಬಿಡಿಸು
ನೆರೆಬೂದಿಯಂ ಬಿಡಿಸು ಪಿಡಿದ ತಿಸುಳಂ ಬಿಡಿಸು ಅಲ್ಲಿಪ್ಪ ಪೆಣನ ಬಿಡಿಸೈ ೨೯

---

೧ ದುಯೆಂ (ಹ) ೨ + ಗಳ (ಹ) ೩ ಳ್ಗೆ (ಹ) ೪ ಮುಂದೆ (ಹ)
೫ X (ಹ) ೬ ರ್ದಿ (ಹ)

ನೀನೇಕೆ ವಿಷವೇಕೆ ಬಿಡಿಸುವಾಯಸವೇಕೆ
ನೀನೇಕೆ ಹರನೇಕೆ ಪೊರಮಡಾಯಸವೇಕೆ
ನೀನೇನ ನೆನೆದುದದುಪೇನೇನನಾಗದೆನಲಾತನಂ ಬಿಸುಸುಯ್ವುತಾ
ಹೀನವಹ ವಿಷವಿರಲಿ ಮತ್ತೆಯೆನ್ನಯ್ಯಂಗೆ
ಈನಿಂದೆಯುಂ ಬಂದುದೆನಗೇಕೆ ರುದ್ರಜಪ
ವೇನಾದಡೇಂ ಶಿವನ ದೂಷಣಂಗಳೆವೆನೆನೆ ಮತ್ತೆ ನಾಂ ಕಟಕಿಯಾಡೆ ೩೦

ಕೇಳುತ್ತ ನೊಂದು ಘುಡುಘುಡಿಸಿ ಕೋಪಾಗ್ನಿಯಂ
ತಾಳುತ್ತ ಶರಧಿಯಿಬ್ಬಗಿಯಾಗುವೊಲ್ತನ್ನ
ಪೋಳ ಪೊಯ್ವುತ್ತ ಕುಬುಬೆಂದು ಬೊಬ್ಬೆಯನಿಡುತ ತನಗೆ ಕೈಸಾರ್ದ ಪದಮಂ
ಮೇಲೆನ್ನ ಬಳಿಗೆ ತೆಗೆದಿಡುವಂತೆ ನಿಷ್ಠೆಯಂ
ಬಾಲೇಂದುಧರನೆ ಕೋಯೆನುತೆ ತಾಂ ಕೊಟ್ಟಂತೆ
ಶೂಲಿಯೇ ನೀನುಂಡ ವಿಷವನುಂ ಬಿಡುಬಿಡುಯೆನುತ್ತೆ ಮಂತ್ರಿಸುತಿಡುವೊಲು ೩೧

ಆ ವಿಮಲ ಸಲಿಲಾಂಜುಲಿಯನು ಎನಗೀವಂತೆ
ಕೇವಲಾ ಶಿವದೂಷಣೆಯೆ ಅಡಗಡಗೆನುತ್ತೆ
ಭಾವಶುದ್ಧಿ ಜಲವನಭಿಮಂತ್ರಿಸುತ್ತಿಡಲ್ನಾನುಳಿದೆನಾವೇಷಮಂ
ಆವನಾದಡದೇನು ಕೃತ್ರಿಮಂ ಗೆಲವುದೇ
ದೇವನಾದಡದೇನು ಸಟೆದಿಟಕೆ ನಿಲುವುದೇ
ವಿವೇಳ್ವೆವೇಷವಾಗಳೆ ಹಾರಿಹೋಯಿತ್ತು ನಿಜರೂಪದಿಂದಿರ್ದನು ೩೨

ಜಡೆಕುಂಡಲಂಗಳಿಂದುರು ಕಳೇವರದಲ್ಲಿ
ತೊಡೆದ ಸದ್ಭಸ್ಮದಿಂದುಟ್ಟ ಗಜಚರ್ಮದಿಂ
ಬಿಡದಾಂತ ಶೂಲದಿಂ ಪಂಚಮುಖದಿಂದೆ ದಶಭುಜಗಳಿಂ ಪುಲಿದೊವಲಿನಿಂ
ಇಡಿದ ನಾಗಂಗಳಿಂ ಮೆರೆವ ಪೆರೆಯಿಂದೆ ನಾ
ನೊಡನೆ ನಗೆಮೊಗದಿಂದಲಗಜೆಯುಂವೆರಸಿ ನಿಲೆ
ಕಡುಭಕ್ತಿರೂಪನಹ ರುದ್ರಪಶುಪತಿಯೆನ್ನ ಕಾಣುತಚ್ಚರಿವಟ್ಟನು ೩೩

---

೧ ದ (ಹ)

ಮೃಡನ ನಿಲವೆಂದರಿದು ನೇಹಮಂ ಮುಂದಿಟ್ಟು
ಬಿಡು ಬಿಡು ಬಿಡೆನ್ನಾಣೆ ನಿನ್ನಾಣೆ ಹರಿಯಾಣೆ
ಬಿಡು ಬಿಡು ವಿಷವನುಂಬರೆ ಸದಾಶಿವಯೆನುತೆ ಜಡಧಿಯಿಂ ಪೊರಮಡುತ್ತೆ
ಧಡಧಡನೆ ನಡೆತಂದು ನೋಡಲೆನ್ನಯ ಕಂಠ
ದೆಡೆಯಲ್ಲಿ ವಿಷವಿಲ್ಲದಿರಲಂದು ಎಲೆ ತಂದೆ
ಪಿಡಿದೆ ನೀನಾವ ಕೈಯೊಳು ವಿಷಂ ಮತ್ತದನು ಕೊರಳಿನಲ್ಲೇಕೆ ತಳೆದೈ ೩೪

ಗಿರಿಜಾಮಹಾದೇವಿ ಸೈರಿಸುವರೇ ನೀನು
ಭರದಿ ನಿನ್ನೈದೆತನವುಳಿಯಿತ್ತು ತಿಳಿನೀನು
ವರ ಸುಧಾಕರಮೌಳಿಯೆಲ್ಲಿ ವಿಷವಂ ತಳೆದೆ ಪೇಳಯ್ಯ ಎಂದೆನುತ್ತೆ
ಕೊರಳನುಂ ಮುಟ್ಟುತೆ ನಮಶ್ಶಿವಾಯಯೆನುತ್ತೆ
ವರದ ಪಂಚಾಕ್ಷರಿಗಳಿಂದೆ ತಾಂ ಮಂತ್ರಿಸುತೆ
ಕರಪನುಂ ಕಂಠಮುಂ ವಾಸಿಸುತೆ ನೋಡುತ್ತೆ ನಾಲಿಗೆಯನಿಟ್ಟರಿವುತೆ ೩೫

ಒಂದು ವೇಳೈಕ್ಕೆ ಬದುಕಿದೆ ತಂದೆ ಸಾಲ್ಗಯ್ಯ
ಎಂದು ಇಂತಪ್ಪುದಂ ಮಾಡದಿರು ಕಂಡಯ್ಯ
ಇಂದು ಮೊದಲಾಗಿ ನಾನಗಲೆ ನಿನ್ನಂ ಇಂತಿದಂ ಗೈಯಲೀಯೆ ನಾನು
ಕುಂದದಂತಂ ನಿನಗೆ ಹರಿಯಾಯುವಜನಾಯು
ಸುಂದರದ ಸುರರಾಯು ಧರೆಯಾಯು ಮುನಿವರರ
ಬಂಧುರ ಚಿರಾಯು ನಿನಗಾಗಲೆನುತಂ ಪರಸಿ ನಮಿಸುತ್ತೆ ನಿಂದಿರ್ದನು ೩೬

ಅಲ್ಲಿ ಪೂಮಳೆಗರೆದುದಿರದೆ ತಾರಾ ಪಥದಿ
ಸಲ್ಲಲಿತ ದುಂದುಭಿನಿರ್ನಾದವೆಸೆದುವು ಮತ್ತೆ
ಬಲ್ಲಿದ ಗಣಾಧಿಪರ್ನೆರೆದರಾ ನಂದಿ ಪುಷ್ಪಕವನುಂ ಕೊಂಡು ಬಂದಂ
ನಿಲ್ಲದಾತನನಪ್ಪಿ ತನುವ ಮೊದಲಂತೆಸಗಿ
ಮೆಲ್ಲನಾ ಪುಷ್ಪಕದಿ ಕುಳ್ಳಿರಿಸಿ ಕೈಲಾಸ
ಕುಲ್ಲಾಸದಿಂ ಬಂದು ಗಣಪದವನಿತ್ತೆ ನೀನೀತನಂ ನೆನೆ ಸೌಂದರಾ ೩೭

ಮತ್ತಾಲಿಸಲೆ ಸಂಬಿ ಚೋಳದೇಶದೊಳೆಸವ
ಸ್ತ್ಯಪತಿಯೆನಿಪ್ಪ ಪುರಮಿರ್ದುದದರಲ್ಲಿ
ಉತ್ತಮೋತ್ತಮ ಭಕ್ತನಿರುತಿರ್ದನೈದೆ ತಿರುನಾಳ್ಪೋವನೆಂಬಾತನು
ಅತ್ಯಧಿಕ ಪಿರಿಯ ೧ಮಾಂಹೇಶ್ವರನೆನಿಸಿಯೆನ್ನ
ಚಿತ್ತಕಾನಂದವೆಂದೆನಿಸಿ ಕೂಲಿಯ ಮಾಳ್ಪ
ವೃತ್ತಿಯಿಂದೊಪ್ಪಿ ಧರೆಯೊಳು ಕಿರಿಯನೆನಿಸಿ ಪರದೊಳು ಪಿರಿಯನೆನಿಸುತಿರ್ದಂ ೩೮

ಇಂತಾತನಿರುತ್ತಿರುತ್ತೊಂದು ದಿನವಿರುಳಲ್ಲಿ
ಚಿಂತಿಸಿದನೊಂದು ಕಾರ್ಯವನು ತನ್ನಯ ಮನದಿ
ಸಂತಸದಿ ಪೊನ್ನಂಬಲಕೆ ಪೋಗುತಲ್ಲಿ ಶಿವನಂ ಕಾಣ್ಬೆನೆನುತಾತನು
ಎಂತಾಡಂ ನಾಳೆ ಪೋಪೆನೆನಲುಡಯದೊಳು
ಮುಂತೆ ತಾಂ ಸಂಚಕಾರವನಿತ್ತ ವಿಪ್ರ ಮ
ತ್ತಂ ತವಕದಿಂದೆ ಕೈಗೆಲಸಕ್ಕೆ ಕರೆದೊಯ್ಯೆ ತಿರುನಾಳ್ಗೆ ನಾಳೆಪೋಪೆಂ ೩೯

ಎಂದೆನುತ್ತೀತರದಿ ದಿವಸದಿವಸಂಗಳೊಳು
ಕುಂದದೆ ಕೈಗೆಲಸಗಳುವೊದಗುತಿಂತಿರಲು
ಛಂದದಿಂ ನಾಳೆನಾಳೆಂಬ ಭರವಿಡಿದು ವಿಪ್ರನ ಸಂಚಕಾರವಿಡಿದು
ಎಂದುವುಂ ನಾಳೆನಾಳೆನುತಿರ್ದ ಮನದೊಳಾ
ನಂದದಿಂ ತಿರುನಾಳು ತಿರುನಾಳೆನುತ್ತಿರ್ಪ
ನಿಂದಲ್ಲಿ ಪೋಪಲ್ಲಿ ಉಣುವಲ್ಲಿ ಮರವೆಯರುವಿನೊಳು ತಿರುನಾಳೆನುತ್ತೆ ೪೦

ಚಿತನವಗೆ ತಿರುನಾಳು ಪರವವಗ ತಿರುನಾಳು
ಸತಿಪುವಗೆ ತಿರುನಾಳು ಮತಿಯವಗೆ ತಿರುನಾಳು
ಗತಿಯವಗೆ ತಿರುನಾಳು ತಿರುನಾಳಿನಿಂ ಬಪ್ಪವರನವಂ ಕಾಣುತೆರಗಿ
ಅತಿಶಯದ ಹರಣಮುಂ ಬಂದಂತೆ ನಲಿದಾಡಿ
ನುತಿಸುತೆ ನಿರೀಕ್ಷಿಸುತೆ ಪದಗಳನು ಮುಂಡಾಡಿ
ವಿತತ ಭಕ್ತಿಯೊಳವರ್ಗಳಂ ತನ್ನ ಗುರುದೇವರೆನುತೆ ಸತ್ಕರಿಸುತ್ತಲೀ ೪೧

---

೧ ಮ (ಹ)

ಈ ತೆರದಿ ಪನ್ನೆರಡುಪತ್ಸರಂ ತಿರುನಾಳ
ಪ್ರೀತಿಯಿಂ ದಿನದಿನಕೆ ಪೆರ್ಚುತ್ತಲಿಲೆ ಶಿವನೆ
ಏತಕೆನ್ನಂ ನಿನ್ನ ಪೊನ್ನಂಬಲಕ್ಕೆ ಕರೆದೊಯ್ಯದಿರ್ದೆಯೈ ದೇವಾ
ನಾಥ ಮನ್ನಾಥ ತಿರುನಾಳ್ಗೆ ಕರೆದೊಯ್ ತಂದೆ
ಪೂತಾಂಗ ನಿನ್ನ ಪದಗಳನು ತೋರೈ ತಂದೆ
ಭೂತನಾಥಾನತಜನೇಷ್ಟದಂ ನೀನೆನ್ನನುದ್ಧರಿಸದಿಹರೆ ದೇವಾ ೪೨

ಕರುಣಿಸೈ ದೇವಾಯೆನುತ್ತೆ ನಿಚ್ಚಂ ನಿಚ್ಚ
ಇರುಳು ಹಗಲೆನ್ನದೋರಂತೆ ತಿರುನಾಳೆನು
ತ್ತಿರುತಿರಲ್ಕೊಂದು ದಿನವಾ ಪಾರ್ವ ಪಂಗುನಿ ಮಹಾವಿಭವ ತಿರುನಾಳಿಗೆ
ಭರದಿ ಪೋಗುವನಾಗುತೆಲ್ಲವಂ ಸಂಗ್ರಹಿಸಿ
ಸರಸರನೆ ಬಂದು ಬಾರಯ್ಯ ತಿರುನಾಳ್ಗೀವ
ಪರಮೋತ್ಸವದಲೀಗೆ ಪೊನ್ನಂಬಲಕ್ಕೆ ಪೋಗುವೆವು ಏಳೇಳೆನಲ್ಕೆ ೪೩

ಪೊನ್ನಂಬಲೆಂಬ ನುಡಿ ಕಿವಿದಟ್ಟಿದಾಕ್ಷಣದಿ
ನನ್ನಿಯಿಂ ಕುಣಿಕುಣಿದು ಕೈಚಪ್ಪಳೆಯನಿಕ್ಕು
ತಿನ್ನಾವನೆನಗೆಣೆಯೆನುತ್ತೆ ತೂಗಾಡುತ್ತೆ ಕೂಗುತ್ತೆ ಬಾಗುತ್ತಲೀ
ಎನ್ನಯ್ಯ ಏನಿರ್ದುದಂ ಹೊರಿಸು ಹೊರಿಸಯ್ಯ
ಎನ್ನುತ್ತೆವೊಂದೆರಡು ಮೂಡೆಗಳ ಹೊತ್ತು ಸೈ
ಪೊನ್ನಂಬಲವೆಯೆನ್ನ ಪೊನ್ನಂಬಲವೆಯೆನುತೆ ಹರ್ಷವಾನುತ್ತೆ ಬರುತೆ ೪೪

ಎಲೆಲೆ ಕಾಲ್ಗಳಿರ ಬದುಕಿದಿರಯ್ಯ ನೀವೆನುತೆ
ಎಲೆಲೆ ಕೈಗಳಿರ ಬದುಕಿದಿರಯ್ಯ ನೀವೆನುತೆ
ಎಲೆಲೆ ಕಂಗಳಿರ ಭಯವಿಲ್ಲ ನಿಮಗಿನ್ನು ಪೊನ್ನಂಬಲಂ ಕಾಣ್ಬೆರಯ್ಯ
ಎಲೆಲೆ ಕಿವಿಗಳಿರ ಬದುಕಿದಿರಯ್ಯ ನೀವಿಂದು
ಎಲೆಲೆ ಮನವೇ ನಿನಗೆ ಸಫಲವಾಯಿತ್ತಿಂದು
ಎಲೆಲೆ ತನುವೆ ಪುಳಕಿಸೆನುತಂ ತನ್ನ ತಾನೆ ವಂದಿಸಿಕೊಳುತ್ತಂ ಬರುತಿರೆ ೪೫

---

೧ ತ್ಸಾಹ (ಹ)

ಬರಬರಲು ಮುಂದೆ ಪೊನ್ನಂಬಲಂ ಕಾಣುತಿರೆ
ಧರೆಬಿರಿವ ತೆರದಿ ಕಹಳಾರವಗಳೊದರುತಿರೆ
ವರಭಕ್ತನೆನಿಪ ತಿರುನಾಳ್ಪೋವ ಕಂಡು ಕೇಳುತ್ತ ಹಿಗ್ಗುಗ್ಗಿತ್ತ ಮನದಿ
ಹರನೆ ನಿನ್ನಂ ಕಂಡೆನಯ್ಯಾ ಎನುತ್ತೆ ಪುರ
ಹರನೆ ನಿನ್ನಂ ಕಂಡೆನಯ್ಯಾ ಎನುತ್ತ ಶಂ
ಕರನೆ ನಿನ್ನಂ ಕಂಡೆನಯ್ಯಾ ಎನುತ್ತೆ ಕೆಲಬಲನರಿಯದೈತರುತಿರೆ ೪೬

ಅನಿತರೊಳಗಲ್ಲಿಯುತ್ಸವಮೂರ್ತಿ ಬೀದಿಯೊಳು
ಘನವಿಭವದಿಂ ಬರ್ಪ ಸಂಭ್ರಮವನೆವೇಳ್ವೆ
ಕನಕಚಾಮರಗಳಿಂ ಶ್ವೇತಾತಪತ್ರಂಗಳಿಂ ಸಿಂಧ ಸೀಗುರಿಗಳಿಂ
ವಿನುತ ಸಂದೋಹದಿಂ ಭೇರೀರವಂಗಳಿಂ
ದನುಪಮರ ಚೋಳಾಧಿಪರ ನೆರವಿಯಿಂದೆ ಸಂ
ದಣಿಸಿರ್ದ ಗಜತುರಗ ನಿಕರದಿಂದಂಗನಾಪ್ರಕರದಿಂದೊಪ್ಪುತ್ತಲೀ ೪೭

ಒಂದೆಸೆಗೆ ರಾಜರ್ಕಳೊಂದೆಸೆಗೆ ತೇಜರ್ಕ
ಳೊಂದೆಸೆಗೆ ದಾನಿಗಳ್ಪೊಂದೆಸೆಗೆ ಮಾನಿಗ
ಳ್ವೊಂದೆಸೆಗೆ ಯೋಗಿಗಳ್ವೊಂದೆಸೆಗೆ ಭೋಗಿಗಳ್ವೊಂದೆಸೆಗೆ ವ್ಯವಹಾರಿಗಳ್
ಒಂದೆಸೆಗೆ ಕರಿಗಳುಂವೊಂದೆಸೆಗೆ ಹರಿಗಳುಂ
ಒಂದೆಸೆಗೆ ಪಂಡಿತರ್ವೊಂದೆಸೆಗೆ ಮಂಡಿತರ್
ಒಂದೆಸೆಗೆ ವನಿತಾಕದಂಬದಿಂದೊಪ್ಪಿ ನರಸುರರಧಿಯೆಂಬಂತೆಸೆದುದು ೪೮

ಹರಹರಯೆನುತ್ತೆ ಕೈಚಪ್ಪಳೆಯನಿಡುವರಿಂ
ಪುರಹರಯೆನುತ್ತೆ ಕೈಗಳ ಮುಗಿವುತಿರ್ಪರಿಂ
ಅರಳ್ಗಳಂ ಸೂಸುತ್ತೆ ಪೊಡಮಡುವರಿಂ ಕೈಯನೆತ್ತಿ ಕೀರ್ತಿಸುತಲಿಹರಿಂ
ಸರಸದಿಂದಿಷ್ಟಾರ್ಥಮಂ ಬೇಡುತಿರ್ಪರಿಂ
ಬೆರಳ ಕಚ್ಚುತೆ ಮೈಮರೆದು ನೋಡುತಿರ್ಪರಿಂ
ಪರಮೋತ್ಸವಾದೀಶಮೂರ್ತಿ ತಾನಿಂತು ವೈಭವದಿಂದಲೈತರುತಿರೆ ೪೯

ಎಡೆವಿಡದ ಸಂದಣಿಯೊಳಲ್ಲಿ ತಿರುನಾಳ್ಪೋವ
ನೊಡನೆ ಕಾಣುತ್ತ ನಡೆಯಲ್ಕರಿಯ ಮುಟ್ಟುತ್ತ
ನುಡಿಸಿಪಡದರಿಯ ನೆಲನೆಂದರಿಯ ದೇವರೆಂದರಿಯ ತಿರುನಾಳರಿಯನು
ಎಡಹಿದಡದರಿಯ ತಾಗಿದಡರಿಯ ಮತ್ತೆ ತ
ನ್ನೊಡನರಿಯ ನಾನು ನೀನೆಂಬುದೇನುವರಿಯ
ನಿಡಿದಿರ್ದ ಸಂತಸದಿ ಮೈಮರೆದು ನಿಜಸುಖದೊಳಾಳ್ದು ಕುಣಿದಾಡುತಿರ್ದಂ ೫೦

ನೋಡಿದ್ಯಾ ಪಾರ್ವತಿಯೆಯೆನ್ನ ಸದ್ಭಕ್ತನಂ
ಕೂಡಿರ್ದ ಸುಖದೊಳಿರಡರಿಯದಿಹ ಭಕ್ತನಂ
ಪಾಡುತ್ತೆ ನೆನೆವುತ್ತೆ ತಿರುನಾಳುತಿರುನಾಳೆನುತ್ತಲೆನ್ನವನಾಡನು
ಆಡಲರಿಯದ ಸಂತಸದೊಳು ಮುಳುಗುತ್ತ ತೂ
ಗಾಡುತ್ತೆ ಶಿವದ ಹೊರೆಯಿಂದಿರ್ದನವನ ನಾಂ
ಕೂಡಿಕೊಂಬೆನು ನೋಡೆನುತ್ತೊರ್ವ ಪೂಜಾರಿಯಂ ಕರೆದು ಬೆಸನವಿತ್ತೆಂ ೫೧

ಅವನೆನ್ನವನ ನೋಡಿ ಮುಟ್ಟದೈತರಲು ನಾಂ
ಪ್ರವಿಮಳಂ ನಂದೀಶಗೊರೆಯಲಾತಂ ಮಹೋ
ತ್ಸವದಿಂದೆ ಭೋಂಕನೈತಂದು ತಿರುನಾಳ್ಪೋವನಂ ತಾನು ತೆಗೆದಪ್ಪುತೆ
ವಿವಿಧವಹ ಜನನ ಭಾರವನಿಳುಹಿಸುವ ತೆರದಿ
ತವಕದಿಂದವನ ಮೂಡೆಯನಿಳುಹುತೊಡಗೊಂಡು
ತವೆಯೆನ್ನ ಬಳಿಗೈತರಲ್ಕೆ ಕೊಂಡದೊಳು ಮುಳುಗಿಸುತ್ತಿತ್ತ ತಹುದೆನಲ್ಕೆ ೫೨

ಒಲವು ಮಿಗಿಲಿಂ ನಂದಿಯಾ ಭಕ್ತನಂ ಕೊಂಡ
ದೊಳು ತೊಳೆವುತಿರ್ದಂ ಕುಲವ ಜಲದಿ ತೊಳೆದು ಶಿವ
ಕುಲವ ಮಾಳ್ಪಂದದಿಂ ನೀರೊಳು ಮುಳುಂಗಿಸಲ್ಕೊಡನೆ ಶುದ್ಧಾಂಗನಾಗಿ
ಬೆಳಗಿನ ಬಳಗವೊಬ್ಬುಳಿಯಗೊಂಡುದೆಂಬಂತೆ
ತೊಳಪ ಪುಣ್ಯದ ಪುಂಜವುಂ ಘಟ್ಟಿಯಾದಂತೆ
ಕಳೆವೆತ್ತು ನಿಜರೂಪದಿಂದಿಲ್ಲಿಗಿಂದು ತಾಂ ಬಂದನೇನೆಂಬಂದದಿಂ ೫೩

ಜೊನ್ನವವಯುವವನಾಂತಿಲ್ಲಿ ನಿಂದಿರ್ದುದೆನ
ಲೆನ್ನ ಕಾರುಣ್ಯವಂಗವ ತಾಳುತೊಪ್ಪಿತೆನ
ಲೆನ್ನ ಸಾಮರ್ಥ್ಯಮುಂ ಸಂದಣಿಯುಗೊಂಡಿಲ್ಲಿ ಬಂದಿರ್ದುದೆಂಬಂದದಿಂ
ಹೊನ್ನ ಬಣ್ಣದ ತನುವನುಂ ತಳೆದು ಪೊಸಜಡೆಗ
ಳಿನ್ನರೆ ಪೊಳೆವ ಮಕುಟದಿಂ ಫಾಲಭಸಿತದಿಂ
ರನ್ನದಿಂ ರಂಜಿಸುವ ಕುಂಡಲಗಳಿಂದೆ ೧ರುದ್ರಾಕ್ಷಿಗಳ ಮಾಲೆಯಿಂದಂ ೫೪

೨ಹಸಿತ ಮುಖದಿಂದೆ ಸುಲಿಪಲ್ಬೆಳಗಿನಿಂದೆ ರಂ
ಜಿಸುವ ವಸನಗಳಿಂದೆ ಶಾಂತಿವಿಗ್ರಹದಿಂದೆ
ದಶಭುಜಂ ಪಂಚಮುಖಮುರಿಗಣ್ಣ ಕೊರಳೆಡೆಯ ಗರಳವಿಲ್ಲದ ಶಂಕರಂ
ವಸುಧಾಮಹೇಶನೆಂದೆನಿಸುವ ಪೊಗಳ್ಕೆಯಿಂ
ದೆಸೆವ ಕುಲವಳಿದುದು ಕುಲವನಾಮುವಿರ್ದುದಿಂ
ತೊಸೆದು ತನುವಳಿದಸುವಿನಂತೆ ಶೋಭಿಸುತೆ ತಿರುನಾಳ್ಪೋವ ನಿಂದಿರ್ದನು ೫೫

ಇರಲಾತನು ನಂದಿ ಕೊಂಡೆನ್ನ ಬಳಿಗೆ ಬರೆ
ವರಲಿಂಗಸಂಗದೊಳಗಾತನೊಪ್ಪುತ್ತಲಿರೆ
ಭರದಿಂದೆ ಪೂಮಳೆಗರೆದುದಲ್ಲಿ ನಾನವನ ಕೊಂಡೊಯ್ದು ಕೈಲಾಸದೊಳ್
ಸುಸದಿಂದಾತಂಗೆ ಗಣಪದವನಿತ್ತೆನೈ
ಧರೆಯೊಣ್ಮ ಸೌಂದರನೆ ಕೇಳು ಮದ್ಭಕ್ತರಂ
ನೆರೆ ನಿನ್ನ ಮಾನಸದಿ ನಂಬುತ್ತೆ ಮತ್ತವರ ಪದಗಳಂ ನುತಿಸು ಕಂಡ್ಯಾ ೫೬

ಅಂತು ಸಂಧಿ ೧೩ ಕ್ಕಂ ಪದಗಳು ೬೧೪ ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

---

೧ X (ಹ) ೨ X (ಹ)

## ಸಂಧಿ : ೧೪

**ಸೂಚನೆ :**

ತಿರುಕುರುಂಪೆಯತೊಂಡರಿತಿಹಾಸಮಂ ಮತ್ತೆ
ವರಭಕ್ತ ಚಂಡೇಶ ಪಿಳ್ಳೆಯರ ಕಥೆಯನುಂ
ಸರಸ ನಿರ್ಮಲ ಮನದ ಮುರುಘರ ಚರಿತ್ರಮುಂ ಕೇಳ್ದನಾ ಸೌಂದ್ರರೇಂದ್ರ

ಒರೆವೆನಾಲಿಸು ನಂಬಿ ಕಾಂಚೀ ನಗರದಲ್ಲಿ
ತಿರುಕುರುಪೆತೊಂಡನೆಂಬೂಸಗಂ ಭಕ್ತಂ ತಾನು
ಪರಿಶೋಭಿಸುತ್ತಲಲ್ಲಿರ್ದನೆನ್ನುವನಲ್ಲದೇನೆಂಬುದರಿಯನಾತಂ
ವರಭಕ್ತರಾಜ್ಞೆಯಂ ತಪ್ಪದದರಂತಿರ್ಪ
ನುರುಶರಣರುಗಳ ಸೇವಾಸಕ್ತಿಯಿಂದಿರ್ಪ
ನಿರದೆ ನುಡಿನುಡಿಗೆಯು ನಮಶ್ಶಿವಾಯ ಎನುತ್ತೆ ಮುಂಜಾವದೊಳಗೇಳುತೆ ೧

---

೧ ಗಸ (ಹ) ೨ ತಿಶ (ಹ)

ನ್ನಿಯಿಂ ದಿವ್ಯಪುಷ್ಪಂಗಳನೆಳಸಿ ತಂದು
ಉನ್ನತದ ಲಿಂಗಾಲಯಕ್ಕೆ ನಡೆದೈತಂದು
ಭಿನ್ನಿಸದೆ ನೈಜಮಾನಸದಿಂದೆ ಲಿಂಗವಡಿಗಳ್ಗೆ ಪೂಗಳನೆ ಸೂಸಿ
ನಿನ್ನ ಬಾಗಿಲವಲ್ಲದನ್ಯ ಬಾಗಿಲವರಿಯೆ
ನಿನ್ನ ನೆನಹಲ್ಲದನ್ಯರ ನೆನಹ ನಾನರಿಯೆ
ಎನ್ನಯ್ಯಯೆನ್ನರಸಯೆನ್ನ ಹೊನ್ನಿನ ಕುಪ್ಪಿ ಕರುಣಿಸೈ ಶರಣೆನುತ್ತೆ ೨

ತೆರಳುತೆ ನಿಜಾಲಯಕ್ಕೈತಂದು ತನ್ನಸು
ಸ್ಥಿರಕಾಯಕಂ ನೆಗಳಲಾಗಿ ಭಕ್ತಾವಳಿಗ
ಳಿರದಿತ್ತ ವಸನಂಗಳೆಲ್ಲವಂ ನಿಲ್ಲದೊಲ್ತೊಂದೊಂದುಗೂಡಿಸುತ್ತೆ
ದುರಿತವೆಂದೆಂಬ ಮಲಿನದ ಸೀರೆಗಳ ಕಟ್ಟು
ತುರುಕೋಪವೆಂಬ ರಾಸಭದ ಮೇಲದನೊಟ್ಟಿ
ನೆರೆಯೆನ್ನ ಭಕ್ತಿರಸವೆಂಬ ತೊರೆಗೈತಂದು ಹರ ನಿನಗೆ ಶರಣೆನುತ್ತೆ ೩

ಝಗಝಗಿಪ ಸುಜ್ಞಾನಮವೆಂಬಗ್ನಿಯಿಂ ಕುದಿಸಿ
ಮಿಗೆಧೈರ್ಯವೆಂಬರೆಯ ಮೇಲೆ ತೊಳೆವುತ್ತೊಗೆದ
ಬಗೆಯರಿಯೆ ಭಕ್ತಿರಸದೊಳಗೊಗೆದನಲ್ಲಿ ತನುಗುಣವಳಿಯಲೊಗೆದನಲ್ಲಿ
ಒಗೆವ ಚಿದ್ಧ್ವನಿಯುಂ ಕೇಳ್ದು ರಘುವಿಲ್ಲದಂತೊಗೆದ
ನೊಗೆದೇಕ ನಿಷ್ಠೆಯಿಂ ತಿರುಹಿ ಕಲುಷಂ ಹಿಂಡಿ
ಜಗಕೊರ್ವ ಶಿವನೆನ್ನುವವನ ಶಾಸನ ಭಾವವೆಂಬ ಬಿಸಿಲಿಂದಾರಿಸಿ ೪

ಪರಮಪ್ರಸಾದದಿಂದೈದೆ ಗಂಜಿಯನಿಟ್ಟು
ಶರಣರ ಸುಸಂಗದಿಂ ಘಟ್ಟಿಸುತಲೊಪ್ಪಿಟ್ಟು
ನೆರೆಯೆನ್ನಡಿಗಳನ್ನಗಲದಂತೆ ಬಿಚ್ಚದ ಮಡುಪನಿಟ್ಟು ಮಡಿಯನೆಸಗಿ
ತಿರುಕುರುಪೆತೊಂಡನೀ ತೆರದಿ ಭಕ್ತಾವಳಿಗೆ
ಸರಸದಿಂ ಮನದ ಮಡಿಯುಂ ಕೊಡುತ್ತಿರುತಿರ್ದ
ಪರಗಣಸಮೂಹಮುಂ ಸಿಂಗರಿಸುತಾ ಪುರದೊಳೀ ಪರಿಯೊಳಿರುತಿರ್ದನು ೫

---

೧ ದೆ (ಹ) ೨ ಯೆಂ (ಹ) ೩ ಧ್ವ (ಹ) ೪ ಡೆ (ಹ)

ಎನಿತು ದಿನ ಉಪವಾಸವಾಗಂಲಂಳಲದೆಪೊಗೆವ
ಎನಿತು ಉಪವಾಸವಿರೆ ಸಕುತಿ ಕುಂದದೆಪೊಗೆವ
ಇನಿತಿನಿತುವೆಂದು ಪೇಳಲ್ಕರಿದೆನಿಸಿ ಕೆಲವು ದಿನವಿರಲ್ಕಾ ಭಕ್ತನಂ
ವಿನುತರಜತಾಚಲಕೆ ತರುವೆನೆಂದುಂ ನಾನು
ನೆನೆವುತ್ತೆ ಗಣಕುಲಕ್ಕೈದೆ ಬೆಸಸಿದೆನಲ್ಲಿ
ಘನತಿರುಕುರುಪೆತೊಂಡನಂ ಮುಂದುಗೆಡಿಸಿಬಹುದೆಂದವರನಾಂ ಕೞುಹಲು ೬

ನಡೆದುದಗಣಿತಕೋಟಿ ಗಣವಿತತಿಯತ್ತ ಬಹು
ಸಡಗರದಿ ಭಕ್ತನಹ ತಿರುಕುರುಂಪೆಯತೊಂಡ
ನೆಡೆಗೆ ಪೋಗುತ್ತಾನುಮುಂಚೆ ನೀ ಮುಂಚೆನುತ್ತೆಲ್ಲ ವಸನಂಗಳೀಯೆ
ಪೊಡವಿಯುಗಲಕೆ ಬೆಟ್ಟಕಧಿಕೞವಿನ್ನತ್ತತ್ತ
ನುಡಿಯಲರಿದೆನಿಸಿ ಸಂಖ್ಯಾತೀತವೆನಿಸಿರ
ಲ್ಕೊಡನೆ ತಾಂ ಕಾಣುತ್ತಲಾಹಯೆನ್ನಯ ಪುಣ್ಯಕೆಣೆಯಿಲ್ಲವೆಂದೆನುತ್ತೆ. ೭

ಒಗೆವುತಿರ್ದಂ ಒಗೆವುತಿರ್ದವಸನಂಗಳಂ
ಒಗೆಯಲಿಮ್ಮಡಿಯಾಗಿ ಬೆಳೆವುತಿರ್ದವು ಇತ್ತ
ನಗುತೊಗೆವುತಿರ್ದ ನಲಿವುತ್ತೊಗೆವುತಿರ್ದನಾಹಾ ದೇವಯೆನುತಿರ್ದನು
ಹಗಲಿರುೞಿೞಿದೆನ್ನದೊಗೆವುತ್ತಿರ್ದಶನಶಯನಮಂ
ಬಗೆಯದೊಗೆವುತ್ತಿರ್ದನೊಂದೆರಡು ಉಪವಾಸ
ಮಿಗಿಲೆನಿಸಿ ಕೆಲವು ಉಪವಾಸಂಗಳಿಂದೆ ಸಂತುಷ್ಟನಾಗುತ್ತೊಗೆದನು ೮

ಪೇಳಲೇನೊಗೆದೊಗೆದು ಸಕುತಿಗೆಟ್ಟಂ ಮತ್ತೆ
ಬೀಳುತ್ತಲೇೞುತ್ತಲೊಗೆವುತ್ತಲೆಲೆದೇವ
ಲೀಲೆಯಿದು ನಿನ್ನದಿದಕಾನಂಜೆನಾನಂಜೆನಸುವಳಿಯಲಂಜೆನಯ್ಯ
ಬಾಲೇಂದುಮೌಳಿಯೇ ನೋಡೆನುತ್ತಂ ನಿಷ್ಠೆ
ಯಾ ಲಕ್ಷಣಂಗಳಿಂ ಮುಟ್ಟಲ್ಕೆ ಕೆಲವು ವ
ಸ್ತ್ರಾಳಿಗಳ್ನಿರ್ಮಲಂ ಪೊಂದಿದುವು ನಿಟ್ಟಿಸಲ್ಕೆಲವು ಶುದ್ಧಂದಳೆದುವು ೯

---

೧ ಳ (ಹ) ೨ ನ್ನೈತ್ತೆ (ಹ) ೩ ಳ (ಹ) ೪ ವಸ (ಹ) ೫ ವೇ (ಹ)

ನೆನೆಯೆ ಮಿಕ್ಕಿನವಸನವೆಲ್ಲ ಧಾವಲ್ಯವಂ
ಡೆನಿಸಿ ಸೊಗಸೆನಿಸಿದವದಂ ಕಾಣುತೈದೆ ಗಣ
ವಚ್ಚರಿಯನಾಂತು ಮನದೊಳು ಭಯುವನಾಂತು ಎನ್ನಬಳಿಗೈತಂದರು
ಘನಮಹಿಮನವನ ಘನವ[ದು] ಸುರಾಸುರವಿನುತ
ಚನುಮಯಾತ್ಮಕನವಂ ಎಮ್ಮ ವಶವಲ್ಲವೈ
ಮನಸಿಜಮದಾಪಹರ ನಿನ್ನವನ ಚರಿತೆಯಂ ನೀನೇ ಬಲ್ಲೆಯೆಂದರು ೧೦

ಬಾರಾ ಗಿರಿಜೆ ಎನ್ನ ಭಕ್ತನಂ ನಿನಗೆ ನಾಂ
ತೋರುವೆಂ ನಡೆಯೆನುತ್ತೊಡಗೊಂಡು ಬಂದಲ್ಲಿ
ತಾರಾಪಥದೊಳರಿಯದಂತುಮೆಯನಿರಿಸಿ ಚರವೇಷಮಂ ತಳೆವುತಾನು
ಧಾರಣಂಗೈದ ಗಜಚರ್ಮವಂ ಕಂತೆಯೆನ
ಲಾರಾಜಿಪಂತೆಸಗಿ ಹೊಳೆಯ ತಡಿಯಲ್ಲಿರ್ದ
ವೀರಭಕ್ತನ ಬಳಿಯ ಸಾರ್ದು ತಿರುಕುರುಪೆತೊಂಡರು ನೀವೆಯೋ ಎನಲ್ಕೆ ೧೧

ಘೋರಳುತ್ತಲಲ್ಲಿಂದ ಮೆಲ್ಲನೆದ್ದೈತಂದು
ಕರುಣಸೈದೇವ ಏನಾಜ್ಞೆಯೆನೆ ಕಂಥೆಯನು
ನೆರತೋರಿಸುತ್ತವಗೆ ಎಲೆಮಗನೆ ಬಹುಮಲಿನವಸನವಿದು ಶುಭ್ರವೆಸಗೈ
ತ್ವರಿತದಿಂದೀವುದೆನೆ ಎಲೆ ತಂದೆ ಹೊಗೆಮುಟ್ಟಿ
ದುರುವಸನದಿಂದಧಿಕವೇ ತಂದೆ ಈ ಕಂಥೆ
ಭರದಿಂದ ನಾಳಿನುದಯಕ್ಕೆ ಬಿಳಿದೆನಿಸಿ ಚೆಲುವೆನಿಸುತಾನೀವೆನಯ್ಯ ೧೨

ಎನಲವನ ನುಡಿಗೆ ನಾನೊಲಿದು ಬೀಳುಡುಗೆಯಂ
ಘನವೆನಿಸಿಕೊಟ್ಟಂತೆ ರಜತಾಚಳಕ್ಕವನ
ನನುವಿನಿಂದೊಯ್ಯುವದಕೆ ಸಂಚಕಾರವನಿತ್ತು ತೆರದಿ ಕಂಥೆಯನಿತ್ತೆನು
ಅನಿತಾಗಲೇದು ನಾನಿತ್ತಬರಲವನತ್ತ
ಮನವೊಸೆದು ಕಂಥೆಯಂ ಒಗೆವುತ್ತಲಿರುತಿರ್ದ
ನೆನೆದ ನಾನಲ್ಲಿ ಮತ್ತೊಂದದ್ಭುತದ ಕಾರ್ಯವಾಲಿಸೈ ಸೌಂದ್ರರೇಂದ್ರ ೧೩

ಧರೆಯರಿಯದಂತಾಗಸವನರಿಯದೆತೆ ದಿ
ಕ್ಕರಿಯದಂತಾದಿತ್ಯನಿಲ್ಲೆನಿಸುವಂತೆ ಕ
ಣ್ದೆರೆಯದಂತೊಡನೆ ಕತ್ತಲುಧೂಳಿವೆರಸಿ ಮೇಘಾಡಂಬರಂ ಕವಿಯಲು
ಸುರಿವುತ್ತ ಜಲಧಾರೆ ಘೋರೆಂದು ಶಬ್ದದಿಂ
ದಿರದಾಣೆಗಲ್ಗಳಿಂ ಮೊಳಗುಮಿಂಚುಗಳಿಂದೆ
ನೆರೆ ಭಯಂಕರವಾಗಲಾ ಭಕ್ತನಳುಕದಲ್ಲಿಂ ತೆರಳದೊಗೆವುತಿರ್ದಂ ೧೪

ಒಗೆದನೊಗೆದಂ ಉದಯ ಮೊದಲಸ್ತಮಯವಾಗ
ಲೊಗೆದನೊಗೆದಂ ತಾನು ನಡುವಿರುಳು ಪರಿಯಂತ
ಒಗೆವುತಿರ್ದಂ ಬಿಚ್ಚಿ ನೋಡುತ್ತಲೊಗೆವುತ್ತಿದೇನೆಂದು ಚಿಂತಿಸುತ್ತೆ
ಒಗೆದೊಗೆದು ಕರತಳಂಗಳು ಕೆಂಜೊನಾಗೆ ಮ
ತ್ತೊಗೆಯೆ ಬೆರಳ್ಗಳೊಳರುಣಜಲಧಾರೆ ಸುರಿಯಲ್ಕೆ
ಒಗೆಯಲಾ ಕಂಥೆ ಕರಿದಿಮ್ಮಡಿಸಿತೇನೆಂಬೆ ನೀಲಗಿರಿಯಲ್ಲೆನಿಸಿತು ೧೫

ಮೇಲಿದರ ಕರಿದಿಂಗೆ ಅಳಿಯಲ್ಲ ಪಿಕವಲ್ಲ
ಕಾಲನೆಂಬವನನುಜೆಯಲ್ಲಲ್ಲ ಮತ್ತಿದಕೆ
ಚಾಳೆ ಚಮ್ಮಳಿಯರೆಂಬುವರಲ್ಲ ವಿಷವಲ್ಲವೇನೆಂಬೆನಿದಕೆನುತ್ತೆ
ಕಾಲದೆಗೆಯದೆ ನಿಂದು ಮಳೆಯೆನದೆ ಚಳಿಯೆನದೆ
ಪೇಳಲಿಕ್ಕರಿದಾದ ನಿಶಿಯೆನದೆ ಕಂಥೆಯಂ
ಮೇಲೆ ಮೇಲಾ ಜಲದಿ ತೊಳೆಯಲ್ಕೆ ಸೆಳೆಯಲ್ಕೆ ಒಗೆಯಲಿಂತಿರ್ದಂತಿದ್ದುದು ೧೬

ಖಾತಿಗೊಂಡುಂ ಚಿಂತೆಗೊಂಡು ಬಿಸುಸುಯ್ವುತಂ
ಓತಿದಂ ಎಲ್ಲಿ ಗಳಿಸಿದನ್ನೈ ಮಹಾತ್ಮನುಂ
ಏತಕಿದನಂ ಪಿಡಿದೆನಯ್ಯೋಮಹಾದೇವ ಶಿವಶಿವ ನಮಶ್ಶಿವಾಯ
ಭೂತೇಶ ಜಯಜಯಯೆನುತ್ತಲೊಗೆವುತ್ತ ಮ
ತ್ತಾತನಿರಲನಿತರೊಳಗಾದಿತ್ಯನುದಯಿಸಲ್
ಭೀತಿಯಿಂದಾ ಭಕ್ತನಾ ಭಕ್ತ ಬರ್ಪನೆಂದಾತ ಚಿಂತಿಸುತಿರ್ದನು ೧೭

---

೧ ಪ (ಹ) ೨ ರ್ದಂತಿರ್ದು (ಹ)

ಎಂತುಗೈವೆನು ಭಕ್ತ ಬರುವನಯ್ಯೋ ಭವಾ
ಎಂತವರ ಮೊಗವನಾಂ ನೋಳ್ಪೆನಯ್ಯೋ ಶಿವಾ
ಕಂಥೆಯುಂ ಬಿಳಿದಾಗದೇಂಗೈದರೇಂಗೈವೆನಾದೇವನೇನೆಂಬನೋ
ಎಂತಾದಡೇಂ ನಾನು ಹುಸಿಕನಾದೆನು ದೇವ
ಗಿಂತವರು ಸೈರಿಪರೆಯೆನುತೆ ಪಲವೆಣಿಕೆಯಿಂ
ಚಿಂತಿಸುತ್ತಾತನಿರಲನಿತರೊಳಗಾಂ ಪೋಗಲೆನ್ನುವಂ ಕಾಣುತಾತಂ ೧೮

ಧೃತಿಗೆಟ್ಟು ಮತಿಗೆಟ್ಟು ನಡೆಗೆಟ್ಟು ನುಡಿಗೆಟ್ಟು
ವ್ಯಥೆಯಿಂದೆ ಲಜ್ಜೆಯಿಂದಿರದೆ ಕಳವಳಿಸುತ್ತೆ
ಅತಿಭಕ್ತಿ ಪರವಶದಿ ನಿತ್ಯಪದನಿಷ್ಠೆಯು ನಿಮಿರ್ದು ತನುವೋಹವಡಗಿ
ಕೃತದ ಹುಸಿಯುಳುವಿನಿಂದಳಿವು ಲೇಸೆಂಬಂತೆ
ನುತ ಕಂಥೆಗವನಂಗವನ್ನೊಗೆದು ಕೊಡುವಂತೆ
ಪ್ರತಿರಹಿತ ವಸ್ತ್ರದ ಮಲಿನಮಂ ಕಳೆಯಲಾರೆನೆಂದೆನ್ನಗೆರಗುವಂತೆ ೧೯

ನೆರೆ ತನಗೆ ತಾಂ ಮುಳಿದು ತನುವನೊಗೆದೀವಂತೆ
ವರಸೂಕ್ಷ್ಮ ತನುವುಂ ಒಗೆದು ಕೊಡುವನೆಂಬಂತೆ
೧ಉರುಂಮಲಿನವಿಲ್ಲಿ ಪೋಗದು ರಜತಗಿರಿಯೊಳೊಗೆದೀವನೇನೆಂಬಂದದಿಂ
ಭರದಿಂದಲಾಭಕ್ತ ತನ್ನತಾನೊಗೆದುಕೊಳು
ತಿರಲಾನು ನೋಡಿ ಹಾಹಾಯೆನುತ್ತೈತಂದು
ತಿರುಕುರುಪೆತೊಂಡನಂ ತೆಗೆದಪ್ಪಲಲ್ಲಿ ಕುಸುಮದವೃಷ್ಟಿಯಂಗರೆದುದು ೨೦

ದಶಭುಜಂ ಪಂಚಮುಖದಿಂದಲಾನೆಸೆಯಲ್ಕೆ
ಮಿಸುಪ ಗಣವಿಸರ ಸುರನಿಕರವೈತರಲಲ್ಲಿ
ಗಸಮ ನಂದೀಶ ವೀರೇಶ ಭೃಂಗಿ ಪ್ರಮುಖರೈತಂದರಾನಂದದಿಂ
ದೆಸೆಗಳ್ಬಿರಿವ ತೆರದಿ ಭೇರೀರವಂಗಳಾ
ಗಸದಿ ಮೊಳಗಿದುವು ವರತಿರುಕುರುಂಪೆಯತೊಂಡ
ನೊಸೆದು ಭಯಭರಿತ ಭಕ್ತಿಯೊಳು ಕೈಗಳಮುಗಿವುತೆನ್ನೆದುರು ನಿಂದಿರ್ದನು ೨೧

೧ ಯಿರುವ (ಹ)

ಒಗೆದನೀತಂ ವಸುಧೆಯೊಳಗಂಸಗ[1] ಕುಲದಲ್ಲಿ
ಒಗೆದನೀತಂ ಗಣಾಧಿಪರ ವಸನವನಿಲ್ಲಿ
ಒಗೆದನೀತಂ ಮತ್ತೆ ತನುಗುಣಂಗಳನೆಲ್ಲವಂ ಒಂದುಳಿಯದಂದದಿಂ
ಮುಗಿದನೀತಂ ಮಾಯೆಯುಳ ಬಾಯನ್ನೈದೆ ತಾ
ಮುಗಿದನೀತಂ ಜನನ ಮರಣದುರು ಮೂಲಮಂ
ಮುಗಿದನೀತಂ ಕೈಗಳಂ ಶಿವಂಗಿಲ್ಲಿವಂಗಣೆಯೆಂದು ನಂದಿ ನುಡಿದಂ ೨೨

ವರಪುಷ್ಪಕದೊಳಾತನಂ ಕುಳ್ಳಿರಿಸಿ ರಜತ
ಗಿರಿಗೆ ತೆರಳುತ್ತಲ್ಲಿ ಕೈಲಾಸಮಂಟಪ ದೊ
ಳಿರುವ ಗಣವರರ ಸನ್ನಿಧಿಯೊಳಾತಂಗೆ ಸಂತಸದಿಂದೆ ಪದವನಿತ್ತು
ಪೊರೆದನೈ ತಿರುಕುರುಪೆತೊಂಡನಂ ನೀನವನ
ಚರಣ ಪದ್ಮಂಗಳಂ ಮರೆಯದಂತಂ ನೆನೆವು
ತಿರು ಭಜಿಸುತಿರು ಮತ್ತೆ ಮತ್ತೆ ಕೊಂಡಾ[2]ಡು[3] ಮುಂಡಾಡುತಿರು ಮನದಿನಂಬಿ ೨೩

ವಾಚಿಸುವೆನಾಲಿಸೈ ಸೌಂಧರಾಧಿಪ ಮತ್ತೆ
ಯಾ ಚೋಳದೇಶದೊಳು ನಲ್ಲೂರೆನಿಪ ಪುರವು
ಭೂಚಕ್ರದೊಳಗಧಿಕವೆನಿಸಿರಲ್ಕಲ್ಲಿರ್ದನೊರ್ವ ಶೈವ ಬ್ರಾಹ್ಮಣಂ
ವಾ[4]ಚಾ[4]ಧಿಪತಿಯಂತನಂತ ಶಾಸ್ತ್ರಾರ್ಥಗ
ಳಾ ಚಮತ್ಕೃತಿಯಿಂದೆ ಸಾವಿತ್ರಿಯೆಂದೆಂಬು
ವಾ ಚಾರು ಸತಿಯಿಂದಲಾತನಚ್ಯುತಭಟ್ಟನೆಂಬ ಪೆಸರಿಂದೊಪ್ಪಿರೆ ೨೪

ಮನಕೆನಿತು ಬೇಕನಿತು ಧನಧಾನ್ಯದಿಂದೊಪ್ಪಿ
ಜನರಿಂದೆ ಪೂಜ್ಯತೆಯೆನಿತಬೇಕನಿಳತನೊಳಪ್ಪಿ
ವಿನುತ ತನುಸಂಜಾತರಿಲ್ಲೆಂಬ ವ್ಯಸನದಿಂದೊಪ್ಪಿಯವರಿರುತಿರಲ್ಕೆ
ಘನವೆನಿಪ ತತ್ಪುರದಿಯೆನ್ನ ಹಿರಿಯಣುಗನಹ
ಚೆನಕನೆಂಬುವನಲ್ಲಿ ದಂಡಪಿಳ್ಳೆಯವೆಸರ
ವನು ತಾಳಿ ಸಕಲರಿಂ ಪೂಜೆಯಂಗೊಳುತಿರ್ದನೇವೇಳ್ವೆನವನುತ್ಸವಂ ೨೫

---

೧ ಗಸ (ಹ)  ೨ ಡಿ (ಹ)  ೩ ತಾ (ಹ)  ೪ ತೊ (ಹ)

ಭೂವಳಯದವರಿಷ್ಟಮನ್ನೀವ ಪೂಜಿಸಲ್
ದೇವತತಿಯರ್ಚಿಸಲ್ಕವರ ವಾಂಛಿತವೀವ
ಭಾವಶುದ್ಧದಿ ಪೂರ್ಣ ದೇವರ್ಕಳೆರಗಲವರಿಷ್ಟಾಪದವನೀವನು
ಸೇವೆಯಂ ಗೈಯೆ ಪನ್ನಗಸಿದ್ಧ ಸಾಧ್ಯರುಗ
ಳಾವುದಂ ಬೇಡಲದನೀವುತವರವರಿಂಗೆ
ದೇವ ದೇವಂ ಮಹಾದಾನಿಯೆಂದೆನಿಸಿ ಪೂಜಿಸಿಕೊಳುತ್ತಿರುತಿರ್ದನು ೨೬

ಉನ್ನತದ ಗೆಜ್ಜೆಗಾ೧ಲಿಂ೧ ಚೆನ್ನ ಡೊಳ್ಳಿನಿಂ
ಧಿನ್ನದಕೆ ಸುತ್ತಿದಹಿಯಿಂ ಪಿಡಿದ ಕೊಡಲಿಯಿಂ
ರನ್ನಂಗಳಿಂದೆ ರಾಜಿಸುವತುಲಮುಕುಟದಿಂದಮಲವಸನಂಗಳಿಂದೆ
ಗನ್ನವಹ ಗಂಧಕಸ್ತೂರಿ ಮಾಲ್ಯಂಗಳಿಂ
ದೆನ್ನಣುಗನೊಪ್ಪಿರಲ್ಕಾವಿಪ್ರನೈತಂದು
ನನ್ನಿಯಿಂ ಪೂಜಿಸುತ್ತೆಲೆ ದೇವಯೆನಗೂರ್ವ ಪುತ್ರನಂ ಕೊಡುಯೆಂದನು ೨೭

ಇತ್ತನೈ ಪೋಗೆನಲ್ಕಾತ ಹರ್ಷಂದಳೆವು
ತಿತ್ತ ತನ್ನಂಗನೆಗೆ ಪೇಳಿ ಸುಖದಿಂದಿರ
ಲ್ಕತ್ಯಧಿಕ ಗರ್ಭಮಂದಳೆವಳಾವನಿತೆಯೊಂದೆರಡು ಮಾಸಂಗಳಲ್ಲಿ
ಬಿತ್ತರದ ನವಮಾಸವಾಗಲ್ಕೆ ಪುತ್ರನಂ
ಪೆತ್ತಳಾ ಸಾವಿತ್ರಿ ಪತಿಗೆ ಸಂತಸವಾಗೆ
ಕತ್ತನುಜಗಂ ವಿಪ್ರ೩ಕರ್ಮದಿಂ೩ ನಾಮಕರಣಂ ಗೈದರೊಲವಿನಿಂದೆ ೨೮

ದಂಡಪಿಳ್ಳೆಯೆನಿಪ್ಪ ಗಣಪತಿಯ ಪೆಸರಿಟ್ಟು
ತಂಡತಂಡದ ಸುಖನಿಕಾಯದಿಂ ಪೊರೆಯೆ ಭೂ
ಮಂಡಲಕ್ಕಚ್ಚರಿಯೆನಿಸಿ ಬೆಳೆದನಾ ಕುವರನದರ ಪರಿಯೇವೇಳ್ವೆನು
ಮಂಡಿತದ ವಿಭವಮುಂ ಮೆಲ್ಲನದು ಕಾಲ್ದೆಗೆಯೆ
ಚಂಡಪ್ರತಾಪವಲ್ಲಿಂದಲ್ಲಿವೊಳಸರಿಯೆ
ಉಂಡುಟ್ಟು ಸುಖಬಟ್ಟ ಜನವೆಲ್ಲ ದೂಷಿಸುತ್ತಿರುತಿರ್ದುದಾ ವಿಪ್ರನಂ ೨೯

---

೧ ಲಂ (ಹ) ೨ ಯಂ (ಹ) ೩ ಕರ್ಮಾದಿ (ಹ)

ಬಡತನಂ ಬಾಲಕಂ ಒಡನೊಡನೆ ಬೆಳೆವುತಿರ
ಲಿಡಿದ ಮಾಯವು ಭಕ್ತಿಯಂ ಸೇರದೆಂಬಂತೆ
ಕಡುಸಂಶಯಂ ಶವವನುಂ ಸೇರದೆಂಬಂತೆ ರವಿಯುಂ ತಮಮಂ ಸೇರದೊಲ್
ದೃಢಶರಣರುಗಳು ಸಿರಿಯಂ ಸೇರರೆಂದೆಂಬ
ಪೊಡವಿಯ ಜನದ ೧ನುಡಿಯುಂತೆರದಿ ತತ್ಕುವರನ
ಸಡಗರದ ವಿಭವಮಂ ಸೇರದಂತಂ ಕಳೆದನೆಲ್ಲವಂ ಒಂದುಳಿಯದೆ ೩೦

ಇಂತಾಗೆ ಪುರಜನಂ ಕಂಡೆಲೆಲೆ ವಿಪ್ರರೇ
ಎಂತಪ್ಪ ಕಂದನಂ ಪಡೆದಿರೆಲೆ ಭಟ್ಟರೇ
ಎಂತಾದಡಂ ದುರ್ಮುಹೂರ್ತದಿಂ ಕುವರನುದಯಿಸಲು ನಿಮಗಿಂತಾದುದು
ಮುಂತಾದಡುಂ ರಕ್ಷಿಪರಿಗೆ ಸುತನಂ ಕೊಟ್ಟು
ಭ್ರಾಂತಿಯಿಂ ಕಳೆದಿರಲ್ನಿಮಗೆ ಲೇಸಹುದೆನಲ್
ಚಿಂತನಂಗೈವುತಾತಂ ನುಡಿದನಲ್ಲಿ ತನಗಾಗಿ ಮರುಗುವ ಜನಕ್ಕೆ ೩೧

ಎನಗೆನ್ನ ಹೊನ್ನುವುಂ ವಸ್ತ್ರಮುಂ ಕಂದನೇ
ಎನಗೆನ್ನ ಬಂಧುವುಂ ಬಳಗಮುಂ ಕಂದನೇ
ಎನಗೆನ್ನ ಸಂಪದಂ ಸುಖಕರಂ ಕೀರ್ತಿಯುಂ ಪ್ರಾರ್ಥನಂ ಕಂದನಲ್ತೆ
ಎನಗೆನ್ನ ಜನನಿಯುಂ ಜನಕನುಂ ಕಂದನೇ
ಎನಗೆನ್ನ ಜೀವಮುಂ ಭಾವಮುಂ ಕಂದನೇ
ವಿನುತ ಸುತನಂ ಪರರ್ಗಿತ್ತು ಬಳಿಕಂ ಬರ್ಪ ಸಂಪದವನಿನ್ನೇತಕೆ ೩೨

ಮಗನುಳ್ಳ ಬಡತನಂ ಸಕಲಸಂಪದಕಿನ್ನು
ಮಿಗಿಲೆಂದು ಭಾವಿಸಿಹೆ ೩ನಾನು೩ ಪೇಳದಿರೆಂದು
ಸೊಗಸಿನಿಂ ತನಯುನಂ ಬಡತನಂ ಬಿಡದೆ ಧೃತಿಗೆಡದೆ ಜೀವಿಸುತಿರ್ಪಿರ್ದ೪ಳನು
ಬಗೆಬಗೆಯ ಬೆಳವಿಗೆಯುಲೀರಾರು ಸಂವತ್ಸ
ರಗಳಾಗಲಾತ್ಮಜಗೆ ಎಲೆಭಟ್ಟರೇ ನಿಮ್ಮ
ಮಗನಂ ಕಳುಹುದೆಮ್ಮ ಕರುಗಳಂ ಕಾಯಲ್ಕೆನ್ನುತ್ತಲೆಲ್ಲಾ ಪುರಜನಂ ೩೩

---

೧ X (ಹ) ೨ ಡರೆ (ಹ) ೩ ನಿನ್ನು (ಹ) ೪ ರ್ಪ (ಹ)

ಒಂದು ಕರುವಿಂಗೊಬ್ಬಳಂ ಧಾನ್ಯಮಂ ಕೊಡುವೆ
ವೆಂದೆಲ್ಲರುಂ ನುಡಿಯೆ ಕೈಕೊಂಡನಾ ವಿಪ್ರ
ನಂದು ಮನದೊಳು ನೊಂದು ಚಿಂತೆಯಿಂ ಬೆಂದು ತಾಂ ಕಣ್ಗಳೊಳು ನೀರತಂದು
ಕಂದನಂ ಕರುಗಾವುದಕ್ಕೆ ನಾಂ ಪಡೆದೆನೇ
ಇಂದುಧರನಣುಗನಿಂತಿದಕೆ ಕರುಣಿಸಿದನೇ
ಎಂದಿಂತು ಶೋಕಿಸುತೆ ಕರುಮರಿಗಳಂ ಕೂಡಿಸುತ್ತೆ ತನಯಂಗುಸುರುತೆ ೩೪

ಎಲೆ ಕಂದ ನೀನರಿಯಿ ಸುಯಿಧಾನವಿರಲಯ್ಯ
ಸಲೆ ಕರುಗಳಲ್ಲಿ ಮರೆದಂ ಒರಗ ಬೇಡಯ್ಯ
ಬಲು ಬಡತನದ ಕುಂದು ಕರುಗಳಿಯಲಿವರಲ್ಲಿ ಮತ್ತೆ ಕುಂದಹುದು ಕಂದ
ನೆಲೆಯರಿಯದವ ನೀನು ದೂರ ಪೋಗದಿರಯ್ಯ
ಮಲೆಯೊಳಗೆ ಹುಲಿಗಿಯುಂಟು ಕರಡಿಗಿಯುಂಟರಿಯಯ್ಯ
ಅಲಸದಿರು ನಿನಗೆದುರು ನಾಂ ಬಪ್ಪೆನೈ ಕಂದ ಪೋಗೆಂದು ಕಳುಹಿಬಂದಂ ೩೫

ಬಂದು ವಿಪ್ರಂ ಮನಂ ಮರುಗುತ್ತ ಮನೆಯೊಳಿರ
ಲಂದು ತದ್ದಿನ ಪಡುವ ಜಾವಕ್ಕೆ ಕರುಗಳಂ
ಚಂದದಿಂ ಕೂಡಿಕೊಂಡೈತರಲ್ಪುತ್ರನಂ ನೋಡಿ ಹರ್ಷಂದಳೆವುತಾ
ಕಂದನಿಂತುಂ ಬುದ್ಧಿಗಲಿತನಿನ್ನೇನು ನಾ
ನಿಂದು ಬಡತನಕಂಜೆನೆಂದಿರಲ್ಕೀತೆರದಿ
ಸಂದಿರ್ದ್ವೆಂಟು ದಿನ ಮತ್ತೊಂದು ದಿನವೈದೆ ಪಿತನೊಡನೆ ಸುತನೆಂದನು ೩೬

ಎಲೆತಾತ ಕರುಗಳಂ ಕಾವುದೇನೊಂದರಿದೆ
ಪೊಳಲೊಳಿಹ ಪಶುಗಳಂ ತಂದುಕೊಡು ಕಾದಪ್ಪೆ
ಪೊಲಗಳಂ ನಾನರಿದೆ ಮತ್ತೆ ಪಶುವಾಡುಂಬೊಲಗಳ ನಾನರಿದೆನೆನಲು
ಒಲವಿನಿಂ ಪುತ್ರನಂ ತೆಗೆದಪ್ಪುತಲ್ಲಲ್ಲಿ
ಯಲಸದೆಲ್ಲರ್ಗರುಹಿ ನೂರುಗೋವುಗಳ ತಾಂ
ಚೆಲುವಾಗಿ ಕೂಡಿಸುತ್ತೊಂದು ಗೋವಿಂಗೊಂದು ಕೊಳಗ ಧಾನ್ಯಂಗೈವುತಾ ೩೭

---

೧ ವುಂ (ಹ) ೨ ವುಂ (ಹ) ೩ ರ್ಪ (ಹ)

ಹಸಿವುವೋಡಿತ್ತೆನ್ನ ಮಗನಿಂದವೆಮಗೆಂದು
ಪಶುಗಳಂ ಕೂಡಿಕೊಟ್ಟುಂ ಕಳುಪೆ ಮಗನಂದು
ಒಸೆದು ಪುಲ್ಲುಳ್ಳ ಹೊಲದೊಳು ಗೋವು ಮೇವುತಿರೆ ದಂಡಪಿಳ್ಳೆಯರಿಗಿತ್ತ
ಕುಶಲದಿಂ ಬಲಗಣ್ಣು ಬಲಭುಜಂ ಕೆತ್ತಲಾ
ಗಸದಲ್ಲಿ ಬೆಳಗನೊಳಕೊಂಡು ನಾನೈತರು
ತ್ತಸಮನಹ ಕಲಿದಂಡಪಿಳ್ಳೆಯಂ ಕಂಡವನ ಶಿರದಲ್ಲಿ ಕರವನಿಟ್ಟು ೩೮

ವಿಮಲ ಪಂಚಾಕ್ಷರಿಯನುಪದೇಶಮಂ ಕೊಟ್ಟು
ರಮಣೀಯವೆನೆ ಮಳಲ ಲಿಂಗವನೆಸಗುತಿಟ್ಟು
ಸುಮನದಿಂದಿದನರ್ಚಿಸುತ್ತಲಿರು ಕೇಳದಿರು ಕಾಣದಿರು ಮಮನಿಂದೆಯಂ
ಕ್ರಮತಪ್ಪಿಯಿದನಾರ್ಗೆವೊರೆಯದಿರು ಮರೆಯದಿರು
ಮಮಹರುಷ ಪುತ್ರನೇ ಪೋಪೆನೆನುತಂ ಪೋಗ
ಲಮಮ ಸುಕುಮಾರ ತಾಂ ಜಾತಿಸೂತಕವಳಿದು ಜನ್ಮರಾಹಿತ್ಯನಾದಂ ೩೯

ಮುನ್ನಿನಂತಲ್ಲದಡಿಗಡಿಗೆ ಕಳೆಯೇರುತಂ
ತನ್ನ ಮನದೊಳು ತಾನೆ ಹಿಗ್ಗಿ ಹೊರೆಯೇರುತಂ
ಉನ್ನತದಲಿರೆ ಪಗಲು ಕಡೆಗಾಣಲೆಲ್ಲ ಗೋವ್ಗಳನು ಕೊಂಡೂರ್ಗೆ ಬರಲು
ಗನ್ನವಹ ಗೋವುಗಳು ಪಾಲನಿಮ್ಮಡಿಗರೆಯೆ
ನನ್ನಿಯಿಂದವರಿವಗೆ ಉಡುಗೊರೆಗಳಂ ಸುರಿಯೆ
ಮನ್ನಣೆಯ ಸುಖದೊಳಿದ್ದುದಯದೊಳಗೆದ್ದು ಗೋವುಗಳಕೊಂಡು ಪೊರಮಟ್ಟನು

ಗೋವುಗಳನಲ್ಲಲ್ಲಿ ಮೇಯಲ್ಕೆ ಬೆಸನಿತ್ತು
ನಾವೈದೆ ತನಗಿತ್ತ ಶಿವಮಂತ್ರಮಂ ಪೊತ್ತು
ದೇವನೆನಗಂ ನಿನ್ನೆ ಕರುಣಿಸಿದ ತಾಣವಿದು ಶಿವನಿರ್ದ ಪೊಲವಿದೆಂದು
ಏವೇಳ್ವೆನಾಪೊಲದಿ ಮಣಿವುತಂ ಕುಣಿವುತಂ
ಭಾವದೊಳು ಗುರುಪದವನಚ್ಚೊತ್ತಿ ತಣಿವುತಂ
ಕೇವಲಾನಂದರಸಮುಂ ತನುವಿನೊಳು ತೀವಿ ಕಡೆಗಣ್ಗಳಿಂ ಸೂಸಲು ೪೧

ಜನನಮರಣಂಗಳಂ ರೂಹುಗೆಡಿಸಿದ ಗುರುವೆ
ಮನದೊಳಗೆ ಕಣ್ಣೊಳಗೆ ತೀವಿ ನೆಲಿಸಿದ ಗುರುವೆ
ಬಿನುಗುವಿಷಯಂಗಳಂ ಕರ್ಮಂಗಳೆಲ್ಲವಂ ನೆರೆಕಳೆದ ಧರ್ಮ ಗುರುವೆ
ವಿನುತ ಸುಜ್ಞಾನದೊಳು ನಿಲಿಸಿದುತ್ತಮ ಗುರುವೆ
ದನುಜ ದಿವಿಜ ನಿಜಾದ್ವೈತವರಿಯದ ಗುರುವೆ
ಯೆನುತ ಸವಿನುಡಿಗಳಿಂ ಪೊಗಳುತ್ತ ನುತಿಸುತ್ತಲೊಂದು ಮಾಮರುಂದಡಿಯೊಳು ೪೨

ಮಳಲಲಿಂಗವನೆಸಗಿ ಸಿಂಗರಂ ಗೈವುತ್ತ
ಲಿಳಿವಶ್ರುಜಲದಲಭಿಷೇಕವಂ ರಚಿಸುತ್ತ
ಲೆಳೆಯ ಎಕ್ಕೆ ಕಕ್ಕೆ ಪೂಗಳಂ ತಂದರ್ಚಿಸುತ್ತ ಕೈಯಂ ಮುಗಿವುತಾ
ಫಳಿಲನಪ್ಪುತ್ತ ಮುದ್ದಾಡಿ ಮೋಹಿಸುತ ಕಂ
ಗಳನೈದೆ ಮುಚ್ಚಿ ಪರವಶದೊಳೋಲಾಡುತ್ತ
ತಿಳಿವುತೆದ್ದದ್ದು ಕುಣಿಕುಣಿದಾಡಿ ಕೈಯೆತ್ತಿ ಕೂಗಿಟ್ಟು ಕರೆಕರೆವುತಂ ೪೩

ಶಶಿಧರಾ ಶಂಕರಾ ಬದುಕಿದೆಂ ಬದುಕಿದೆಂ
ಪಶುಪತಿಯೆ ಪುರಹರಾ ಬಾಳ್ದೆ ನಾಂ ಬಾಳ್ದೆ ನಾಂ
ಹಸಿತಮುಖಿ ಕರುಣಾಪಯೋನಿಧಿಯೆ ಧನ್ಯ ನಾಂ ೨ಧನ್ಯ ನಾ೩ ಧನ್ಯನಾದೆ
ವಿಶದ ತರುಗಿರಿಗಳಿರ ಕಂಡಿರಾ ಪುಣ್ಯವಂ
ಅಸಮನೆನ್ನಿಂದಲರ್ಚಿಸಿಕೊಂಬ ಗಣ್ಯಮಂ
ಭಸನ ಗಿಳಿಹಂಸೆ ಕೋಗಿಲೆಗಳಿರ ನೋಡಿರೀ ಸಂ೪ಪ೪ದದ ಶಿವಪದವನು ೪೪

ಆಹಾಮಹೇಶ್ವರಾ ಗಿರಿಜಾಮನೋಹರಾ
ಆಹಾ ಮದೀಶ್ವರಾ ಅತುಲ ಮಹಿಳಮಾಕರ೫
ಆಹಾ ಸುಧಾಕರಾದಿತ್ಯನಿರ್ವಾಣಲೋಚನ ಭಾವಭವಮದಹರಾ
ಆಹಾಯೆನುತ್ತ ಕೊಳಲೂದಿ ಕರೆದಂ ಗೋಸ
ಮೂಹಮಂ ಬನ್ನಿರೌ ಹಾಲೀವ ತಾಯ್ಗಳಿರ
೫ಮಾ೫ಹೇಶ್ವರಂಗೆ ಮುದವೀವಗೋಸುಗ ಬನ್ನಿ ನೀವೆಂದು ಕೂಗಿ ಕರೆದಂ ೪೫

---

೧ ದೆಡೆ (ಜ) ೨ X (ಹ) ೩ ವಿ (ಹ) ೪ ಮಾಕಾರ (ಹ) ೫ ಮ (ಹ)

ಕರೆಯೆ ಮೇವಂ ಮರೆದು ಘೋಂಕನಾಲಿಸಿ ಕೇಳ್ದು
ನೊರೆವಾಂಯಿಂಗರಳ್ದ ಕಿವಿಸಟ್ಟು ಮೋಹಂದಾಳ್ದು
ನೆರೆ ಬಾಲಮಂ ನೀಳ್ದನೆತ್ತುತೆಲ್ಲಾ ಗೋವ್ಗಳಿರದೋಡಿಬಂದು ಸುತ್ತಂ
ನೆರೆದು ಕಡುನೇಹದಿಂದವನಂಗಮಂ ನಕ್ಕು
ತಿರೆ ಹೂಂಕರಿಸುತಿತ್ತತ್ತ ನೋಡುತ್ತಲೀ
ಧರೆಗೆ ಪೊಸತೆಂಬಂತೆ ಲಿಂಗಮಂ ಸಡಲಿಸುತ್ತಮೃತಮಂ ಕರೆದವಲ್ಲಿ ೪೭

ಮೃಡಭಕ್ತಿರಸಧಾರೆಯೆಂಬಂದದಿಂ ಕರೆಯೆ
ಬಿಡದೆ ನಿರ್ಮಲದ ನಾಲ್ಮೊಲೆ ತೊರೆದವಂ ಕರೆಯೆ
ಸಡಗರದ ಧರ್ಮಾರ್ಥಕಾಮಮೋಕ್ಷಂಗಳಂ ಒಂದೊಂದನಂ ಕರೆವೊಲು
ಮುಡಿದ ಚಂದ್ರಂ ಮುಳುಗಿ ತೇಂಕಾಡುವೊಲ್ಕರೆಯೆ
ಒಡನೆ ಕಂಠದ ವಿಷವದಿನಿದಾಗುವೊಲ್ಕರೆಯ
ಲಿಡಿದ ಪುಣ್ಯಂ ಲಿಂಗಮೂರ್ತಿಯಂ ಓಲೈಸಿತೆಂಬಂತೆ ಪಾಲ್ಗರೆದುವು ೪೭

ಪಾಲುಂಡು ಶಿವಲಿಂಗವಾನಂದವಾಗುತಿರೆ
ಲೀಲೆಯಿಂದಾ ಭಕ್ತಲಿಂಗಮುಮಜನಜಪ್ಪುತಿರೆ
ಮೇಲೆ ಗೋವ್ಗಳನೊಮ್ಮೆಯಪ್ಪುತ್ತ ಗುಡಿಗಟ್ಟಿ ಕುಣಿವುತಂ ಕೊಂಡಾಡುತಂ
ಪೇಳಲರಿದಾದ ಸಂತಸದೊಳಿರಲಸ್ತಮಯ
ಕಾಲವಾಗಲ್ಕೆ ಪುಟ್ಕೈತರುತ್ತವರವರ
ಆಲಯಂಗಳಿಗೆ ಗೋವ್ಗಳನಟ್ಟಿ ತನ್ನಾಲಯದೊಳು ಸುಖದಿಂದಿರ್ದನು ೪೮

ಈ ತೆರದೊಳುಂ ಪಲವು ದಿವಸಂಗಳಾಗುತಿರ
ಲೀತೆರದೊಳವರವರ ಮನೆಯ ಪಶು ಕರೆಯದಿರೆ
ಖಾತಿಯಿಂ ಪಶುಗಳೊಡೆಯರ್ಬರುತ್ತೇನಿದಚ್ಯುತಭಟ್ಟರೇ ಗೋವ್ಗಳಿಂ
ಏತಕಂ ಕರೆಯುವವು ಕರುವಿಂಗೆ ಹನಿಯಿಲ್ಲ
ಘಾತುಕಂ ದಂಡಪಿಳ್ಳೆಯ ಕಾಪು ಲೆಸಿಲ್ಲ
ಸಾತಿಶಯ ಹಸುವೆಮಗೆ ಪಾಲ್ನಿಮಗಿದೆಂಬ ಪರಿಯಾಯ್ತು ಕಾಹಂ ಸಾಕೆಲೈ ೪೯

---

೧ ಯ (ಹ) ೨ ವೃತವಂ (ಹ) ೩ ಳಿದೆ (ಹ) ೪ + ವ (ಜ)
೫ ನೊ (ಹ) ೬ X (ಹ) ೭ X (ಹ)

ಎನೆ ಕೇಳ್ದು ಪುತ್ರನಂ ಕರದು ಸಿಡಿಮಿಡಿಗೊಂಡು
ತನಯನೇ ನಿನ್ನಿಂದೆ ನಾವ್ವೈದೆ ಕೂಳ್ಗಂಡು
ಇನಿತು ದಿನ ಬದುಕಿದೆವು ಮತ್ತೇನ ನೆಗಳಿದ್ದೈ ಪಶುವನೆಂತಾಡಿಸಿದೆಲೈ
ಮನಕೆ ಬೇಕಾದನಿತು ಹುಲ್ಲುಂಟು ನೀರುಂಟು
ದನವೇಕೆ ಪಾಲ್ಗರೆಯವಿದನುಸುರೆಲೈ ಕಂದ
ಜನರು ದೂರುತ್ತಿಹರಿದೇನಿದೇನೆಲ್ಲಿರ್ದೆಯೆಲ್ಲಿ ಕಾವುತ್ತಿರ್ದೆಯೋ ೫೦

ಎಂದಡೀತಂ ಸುಮ್ಮನಿರೆ ಭಟ್ಟರೆಲ್ಲರ್ಗೆ
ಚಂದದಿಂ ಕೈಮುಗಿದು ಸಂತೈಸಿ ಕಳುಪುತ್ತ
ಲಂದಿನಿರುಳಂ ಚಿಂತೆಯಿಂ ಪಟ್ಟಿರಲ್ಕೆ ಮತ್ತನಿತರೊಳು ಬೆಳಗಾದುದು
ಬೆಳಗಾದುದೀಶ ಪ್ರಸನ್ನವಿಂದೆಂಬಂತೆ
ಬೆಳಗಾಯ್ತು ದಂಡಪಿಳ್ಳೆಗೆ ಶುಭೋದಯದಂತೆ
ಬೆಳಗಾಗಲೆದ್ದಂದಿನಂತೆ ಪಶುವಂ ಕೂಡಿಕೊಂಡು ಪೋದಂ ಭಕ್ತನು ೫೧

ಒಂದು ಮರನೇರಿನೋಡುವೆನಿವಂ ಮಾಳ್ಪುದಂ
ಅಂದಂದು ಪಾಲ್ಬಚ್ಚಿಯಾಗಿ ಬರಿದಪ್ಪುದಂ
ಎಂದೆನುತ್ತಂ ತಾತ ಇವನರಿಯದಂತೊಂದು ಮರನೇರಿ ಕುಳ್ಳಿರಲ್ಕೆ
ಎಂದಿನಂತಂ ಪಶುಗಳಂ ಹೊಡೆದು ಹೊಲದಲ್ಲಿ
ಚಂದದಿಂ ಪೂಜಿಸುವ ನಿರ್ಮಲದ ಠಾವಿನಲಿ
ಬಂದ ತಾಂ ಮಳಲಲಿಂಗವನೆಸಗಿ ಕಾಡ ಪುಷ್ಪಂಗಳಿಂ ಪೂಜಿಸುತ್ತ ೫೨

ಬನ್ನಿರೌ ಶಿವನ ಪಂಚಾಮೃತದ ಪ್ರಿಯರಿರಾ
ಬನ್ನಿರೌ ಅಮೃತರಸಪೂರಕರ ನಿಧಿಗಳಿರ
ಬನ್ನಿರೌ ಅಮೃತಕರಧರವಾಹನಪ್ರಿಯಾವಳಿಗಳಿರ ಬನ್ನಿರೆಂಪು
ನನ್ನಿಯಿಂ ಕೊಳಲೂದಿ ಕರೆಯಲ್ಕೆ ಗೋವೆಲ್ಲ
ಮುನ್ನವೈತಂದು ಲಿಂಗದ ಮೇಲೆ ಪಾಲ್ಗರೆಯೆ
ಗನ್ನವೆನೆ ಪಾಲಹಳ್ಳಂ ಹರಿಯೆ ದಂಡಪಿಳ್ಳೆಯ ಮನಕೆ ಸುಖವ ಸುರಿಯೆ ೫೩

ಅತ್ತಲಾ ಮರದಿಂದಲಿಳಿದನಾಪಾತಕಂ
ಚಿತ್ತದೊಳು ಭಕ್ತಿವೇದಿಸದಾತ್ಮಘಾತುಕಂ
ಉತ್ತಮದ ಲಿಂಗಮಂ ಮುಟ್ಟುತಿರೆ ಕಾಣುತುರಿದೆದ್ದನಾ ದಂಡಪಿಳ್ಳೆ
ಒತ್ತಿಡಿದ ಕೋಪದಿಂದುರಿದೆದ್ದು ಕೋಲ್ಗೊಂಡು
ಎತ್ತಿದಡದಂ ಕೊಡಲಿಯುಂತಿರ್ದುದಾನೆವೊಗ
ನತ್ಯಂತ ಹರ್ಷದಿಂ ಮಚ್ಚಿ ತನ್ನಾಯುಧವನಿವಗಿತ್ತನೆಂಬಂತಿರೆ ೫೪

ಕೆಡೆಕೆಡೆ ಶಿವದ್ರೋಹಿ ಲಿಂಗಮಂ ಮುಟ್ಟುವಾ
ಘಡ ೧ಕುನ್ನಿ೧ ಭವಿನಾಯಿ ಒಡೆಯನಂ ಮುಟ್ಟುವಾ
ಹೊಡೆಹೊಡೆಯೆನುತ್ತ ಹೊಡೆದಂ ಹೊಡೆದನಮಮ ದಂಡೇಶಪಿಳ್ಳೆಯು ತಂದೆಯಂ
ಒಡನಿತ್ತಲೈತಂದು ಮೈನೊಂದುದೇ ತಂದೆ
ಕಡುಮೃದುವೆನಿಪ್ಪ ತನುಕಂದಿತೇನೈ ತಂದೆ
ಜಡ೨ಭಾ೨ವದುರುಕರ್ಮಿ ನಿನ್ನ ಮೈಮುಟ್ಟಿದನೆ ಎಲ್ಲಿ ಮುಟ್ಟಿದನು ಪೇಳೈ ೫೫

ಎನುತೆ ಲಿಂಗವನಪ್ಪುತಿರಲತ್ತ ಕೆಡೆದವಂ
ತನುಜನೇ ಎನ್ನನಿಂತಂ ಪೊಯ್ವರೇ ಕಂದ
ಎನಲಿವಂ ಕೇಳಿ ಮತ್ತಾಳಿದನೀಪಾಪಿಯೆನುತಂ ಶಿರವನುಂ ಕಡಿಯಲು
ಅನಿತರೊಳಗಾನಲ್ಲಿ ಲಿಂಗದೊಳು ನಿಜರೂಪ
ವನು ತೋರಿದೆನು ಪಂಚಮುಖದಶಭುಜಂಗಳಿಂ
ವಿನುತ ಗಣವರರಿಂದೆ ಪುಷ್ಪಕವನುಂ ಕೊಂಡು ನಂದಿಯೈತಂದನಾಗಳ್ ೫೬

ಮಡಿದವಂಗಸುವಿತ್ತು ಪಿತಸುತರುಗಳ್ವೆರಸಿ
ಬಿಡದೆ ತಾನಾಡಿದ ಹೊಲಂವೆರಸಿ ಲಿಂಗಮಂ
ಸಡಗರದಿ ಪೂಜಿಸಲದಂ ಕಂಡ ಖಗಮೃಗಂವೆರಸಿ ಗೋವೃಂದವೆರಸಿ
ನಡೆದೆ ನಾಂ ಕೈಲಾಸಕಲ್ಲಿಯಾಭಕ್ತಂಗೆ
ದೃಢವಾದ ಗಣಪದವನಿತ್ತೆನೈ ನಂಬಿಕೇಳ್
ಬಿಡದೆ ನೀಂ ದಂಡಪಿಳ್ಳೆಯಂರಘ್ರಿಯುಂಗಳಂ ನೆನೆವುತ್ತಲಿರು ಮನದೊಳು ೫೭

---

೧ ಕುಂಭಿನಿ (ಹ) ೨ ಭ (ಹ)

ಒರೆವೆನಾಲಿಸು ನಂಬಿ ತಚ್ಚೋಳ ದೇಶದೊಳು
ತಿರುಪಗಲ್ಪುರವೆಂಬುದಿರ್ದುದಾ ಪುರದಲ್ಲಿ
ಪರಮ ಸದ್ಭಕ್ತನೆಂದೆನಿಸುತೆ ನಮಃಶಿವಾಯಾ ಮುರುಘರೆಂದೆಂಬುವಾ
ಸರಸಾಭಿಧಾನದಿಂದಿರುತಲಾಪೂರೊಳಿಹ
ವರಲಿಂಗಮೂರ್ತಿಯಂ ಪೂಜಿಸುವ ನೇಮದಿಂ
ಭರದಿಂದೆ ಪುಷ್ಪವಾಟಿಯನೈದೆಪೊಕ್ಕು ನಿರ್ಮಲಕುಸುಮಗಳನೆತ್ತುತೆ ೫೮

ಒಂದು ಲಿಂಗಕ್ಕೆ ಮಜ್ಜನವೆರೆದು ಭಸ್ಮಮಂ
ಚಂದದಿಂ ಧರಿಸಿ ಪರಿಪರಿಯ ಕುಸುಮಂಗಳಿಂ
ದಂದು ಪೂಜಿಸುತೆ ಧೂಪವನಿಕ್ಕಿ ಬೆಳಗೆತ್ತುತುಣಲಿತ್ತು ನಲಿವುತ್ತಲೀ
ನಿಂದು ನೋಡುತ್ತ ಮಣಿವುತ್ತಲಪ್ಪುತ್ತಲಾ
ನಂದದಿಂ ಕುಣಿವುತ್ತ ಮತ್ತುಮತ್ತುಂ ನುತಿಸು
ತಂದು ತೂಗುತ್ತ ಬೀಗುತ್ತ ಭೋಂಕನೆಕೂಡಿ ತಾನಲ್ಲಿ ಮೈಮರೆವುತ ೫೯

ಮೂರ್ಛೆಯಿಂದಿರಲದರೊಳುಂ ಭಕ್ತಿಯಿಂದೆ ಮೈ
ವೆರ್ಚೆ ಪುಳಕಂಗಳಿಂ ಲಿಂಗಮೂರ್ತಿಯನು ತಾಂ
ಬೆರ್ಚಿದಷ್ಟಲರ್ಗಳಿಂ ಗಂಧಾಕ್ಷತಂಗಳಿಂ ಧೂಪದೀಪಂಗಳಿಂದಂ
ಅರ್ಚಿಸುತ್ತಲ್ಲಿ ನೋಡುತ್ತಲಪ್ಪುತ್ತಮಿಗೆ
ಚರ್ಚೆಯಿಂ ನುತಿಸಲಾನರಿವೀಯಲಂಗಂ ಬಿ
ದಿರ್ಚುತೇಳುತ್ತಲಾಲಿಂಗಮಂ ನೋಡಿ ಹಾಯೆಂದು ಬಿಗಿದಪ್ಪಿಕೊಳುತ ೬೦

ದೇವಹರಿವಿಧಿಗಳಿಗಗಮ್ಯಲಿಂಗಂ ನೀನು
ದೇವ ಭಕ್ತರ ಮನದೊಳಿಪ್ಪ ಲಿಂಗಂ ನೀನು
ದೇವ ನಿಖಿಲಾಗಮನಿಕರ ದುರ್ಲಭಂ ನೀನು ಬಹುಜೀವರಾಧಾರಿಯು
ದೇವ ರವಿಶಶಿಕೋಟಿತೇಜ ಲಿಂಗಂ ನೀನು
ದೇವ ದನುಜಾಮರಸ್ತುತ್ಯಲಿಂಗಂ ನೀನು
ದೇವ ಪೂಷ್ಪೇಂಷ್ವಾಸಗಂಧೇಂಧನಾವಳಿಧ್ವಂಸ ದಾವಾನಲನು ನೀಂ ೬೧

---

೧ ಷ್ಪೆ (ಜ)

ಎನುತೀತೆರದಿ ಲಿಂಗಮಂ ಪೂಜಿಸುವ ನೇಮ
ವನವರತವಿರಲವನ ಚರ್ಯಮತ್ತೇವೇಳ್ವೆ
ನೆನೆದುದಂ ನೆನೆಯುದುದನದುವೇನಮಃಶಿವಾಯಂ ಮತ್ತೆ ಮತ್ತೆ ತಾನುಂ
ಮನದ ಸುಖವಸುಖವು ನಮಃಶಿವಾಯಂ ನಾಡೆ
ಜನದ ಹಿತವಹಿತವು ನಮಃಶಿವಾಯಂ ನೋಡೆ
ಘನವೆನಿಪ ಪುಣ್ಯಮುಂ ಪಾಪಮುಂ ಕೋಪಮುಂ ತಾಪಂ ನಮಃಶಿವಾಯಂ ೬೨

ನಡೆವುದುಂ ನಿಲುವುದು ನಮಃಶಿವಾಯಂ ಮತ್ತೆ
ಕೊಡುವುದುಂ ಕೊಂಬುದು ನಮಃಶಿವಾಯಂ ತಾನು
ತೊಡುವುದುಂ ಬಿಡುವುದು ನಮಃಶಿವಾಯಂ ಮಗುಳೆ ನೋಳ್ಪುದು ನಮಃಶಿವಾಯಂ
ಎಡದೊಳುಂ ಬಲದೊಳು ನಮಃಶಿವಾಯಂ ಪೊಗಳ್ವ
ನುಡಿಯೊಳುಂ ನಿಜದೊಳು ನಮಃಶಿವಾಯಂ ಮೊದಲು
ಕಡೆಯೊಳು ನಮಃಶಿವಾಯಂ ನೆಲದಲುಂ ನಭದಲೆಲ್ಲಿಯುಂ ನಮಃಶಿವಾಯಂ ೬೩

ಇಂತು ಪಂಚಾಕ್ಷರಿಯೆ ತನುವಾಗಿ ಮನವಾಗಿ
ಚಿಂತನಂಗೈವುದಕೆ ನಾನಾಗಿರಲ್ಮತ್ತೆ
ಸಂತಸದಿ ಮುರುಘರಂ ಎನ್ನುತ್ತ ಮಾಳ್ಪೆನೆಂದರಿದು ಕೆಲವಬ್ದ ಕಳೆದು
ನಾಂ ತವೆ ವಿನೋದದಿಂದೊಂದಿರುಳು ಕನಸಿನೊಳು
ನೀಂ ತಳುಹದೆನ್ನೊಳ್ಳೈದುವುದೆಂದು ಬೆಸಸಲಾ
ತಂ ತವಕದಿಂದಲೆಚ್ಚತ್ತು ನೋಡುತ್ತ ನೆನೆವುತ್ತಿದಂ ಹರ್ಷಿಸುತ್ತ ೬೪

ಭಸಿತರುದ್ರಾಕ್ಷೆಯಂಧರಿಸಿ ನಾನಾವಿಧದ
ಕುಸುಮಂಗಳಂ ತಂದು ಲಿಂಗಾಯಕೆ ಬಂದು
ಒಸೆದು ಮಜ್ಜನವೆರೆದು ಗಂಧಂಪುಷ್ಪಂಗಳಿಂ ಪೂಜಿಸುತ್ತಾ ಲಿಂಗಮಂ
ಹಸಿತಮುಖನಾಗುತಡಿಗಡಿಗೆ ನುಡಿನುಡಿಗೆ ತಾ
ನಸಮ ಪಂಚಾಕ್ಷರಿಯನುಚ್ಚರಿಸುತಂ ನಿನ್ನೆ
ನಿಶಿಯೊಳುಂ ಪೇಳ್ದಂತೆ ಮಾಡುಮಾಡ್ಯೆ ತಂದೆ ನಿನ್ನೊಳೆನ್ನುಪನಡಗಿಸ್ಯೆ ೬೫

---

೧ ಪುಷ್ಪಕ (ಹ)

ಗುರುದೇವ ಕರುಣಿಸೈ ಕಾಮಕಾಲಾರಿ ಭಾ
ಸುರದೇವ ಕರುಣಿಸೈ ಸದ್ಭಕ್ತಜನಕಲ್ಪ
ತರುದೇವ ಕರುಣಿಸೈ ಕರುಣಾಪಯೋನಿಧಿ ಪ್ರವಿಮಳ ಶರೀರ ನೀನೈ
ಹರಹರ ಮಹಾದೇವ ಕರುಣಿಸೈ ಪಾಪ ಸಂ
ಹರ ಹರೀಶ್ವರದೇವ ಕರುಣಿಸೈ ಶಂಭು ಶಂ
ಕರ [೧]ಕರಿಮುಖ ಕ್ರೌಂಚರಿಪು ಶರಭಷಣ್ಮುಖ[೨]ಗಣಾವಳಿ ರಕ್ಷಣೋದ್ಯೋಗಿಯೇ ೬೬

ಎನುತಂ ನಮಃಶಿವಾಯಂ ಎಂದು ಲಿಂಗಮಂ
ಮನಬುದ್ಧಿ ಚಿತ್ತದಿಂದಪ್ಪಿ ತನುವಿಂದಪ್ಪಿ
ನೆನಹು ನಿಲುಕದ ಕಳೆಯು ಕೂಡೆಕಳೆಯೆನಿಸಿ ಲಿಂಗದೊಳು ತಾಂ ಲಿಂಗವೆನಿಸಿ
ತನುವಿಲ್ಲವೆನಿಸಿ ಲಿಂಗವದೊಂದೆಯೆನಿಸಲಾ
ಕ್ಷಣದಿ ದುಂದುಭಿ ರವಂ ಪೊಣ್ಮಿತ್ತು ಮತ್ತಲ್ಲಿ
ಘನವೆನಿಪ ಕುಸುಮವರ್ಷಂಗರೆದುದಲ್ಲಿ ನಾಂ ನಿಜರೂಪದಿಂದಿರುತ್ತೆ ೬೭

ಎನಗಚ್ಚರಿಯ ತೋರಲಾ ರೂಪಮಂ ತೆಗೆದು
ವಿನುತ ಪುಷ್ಪಕದೊಳಿರಿಸುತ್ತೆ ನಂದೀಶಾದಿ
ಗಣವರರ ಸಂದಣಿಯೊಳಾನು ಕೈಲಾಸಕೈತಂದಲ್ಲಿ ಮುರುಘರಿಂಗೆ
ಗಣಪದವನಿತ್ತನೈ ಎನ್ನ ಭಕ್ತರ ಚರಿತೆ
ಇನಿತನಿತುಮೆಂದು ಪೇಳಲ್ಕರಿದೆಲೈ ನಂಬಿ
ಮನವೊಸೆದು ಭಯಭರಿತ ಭಕ್ತಿಯಿಂದೀ ಭಕ್ತನಡಿಗಳಂ ಪೊಗಳು ಕಂಡ್ಯಾ ೬೮

ಅಂತು ಸಂಧಿ ೧೪ಕ್ಕಂ ಪದಗಳು ೬೮೨ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

---

೧ ಹ (ಹ)    ೨ ಖಾ (ಜ)

## ಸಂಧಿ : ೧೫

ಸೂಚನೆ :

ಅಜ್ಞಾನದಿಂದಭವಸಂ ಮರೆದು ಸಂಚರಿಸಿ
ಸುಜ್ಞಾನದಿಂದೆ ಮತ್ತರಿದು ಶಿವನಂ ಹೊಂದಿ
ವಿಘ್ನಂಗಳಂ ಜೈಸಿ ಮರೆದ ವಾಗೀಶರಿತಿಹಾಸಮಂ ನಂಬಿ ಕೇಳ್ದಂ

ಒರೆವೆನಾಲಿಸು ನಂಬಿ ತಚ್ಚೋಳ ದೇಶದೊಳು
ಪರಿಶೋಭಿಸಿತ್ತು ತಿರುವಾಲೂರೆನಿಪ್ಪ ಸ
ತ್ಪುರಮಲ್ಲಿಯುಂದಿಸಿದಂ ಒರ್ವ ದಿವ್ಯಾಧಿಕಂ ಸಂಗೀತನಿಪುಣನೆನಿಸಿ
ಉರುಶಾಸ್ತ್ರ ಕೌಶಲ್ಯನೆನಿಸಿ ವಸುಧಾಧಿಪರ
ನಿರದೆ ತಲೆವಾಗಿಸುವ ವಾಕ್ಯವರ್ಧನನೆನಿಸಿ
ಧರೆಯೊಳನುಪಮ ತರ್ಕಿಯೆನಿಸಿ ವಾಗೀಶನೆಂದೆಂಬುವಭಿಧಾನದೊಳಿರೆ ೧

---

೧ ದಯಿ (ಹ)

ಆತನಿಂ ಪಿರಿಯಳೊರ್ವ್ವಳು ಮಹಾಶಿವಭಕ್ತೆ
ಖ್ಯಾತವಹ ತಿರುವರುಫೆಯೆಂಬೂರೊಳಾಭಕ್ತೆ
ಓತು ತಿರುವಲನಾಚಿಯೆಂಬ ಪೆಸರಿಂದಿರಲ್ಕಿತ್ತಲಾ ವಾಗೀಶನು
ಸಾತಿಶಯ ಪೂರ್ವಕಲ್ಪನೆಯ ವಾಸನೆಯಿಂದೆ
ಭೂತಲದಿ ಜೈನದೀಕ್ಷೆಯ ಚಪಲತನದಿಂದ
ಲಾತನಿನ್ನಾರನುಂ ಲೆಕ್ಕಿಸದೆ ತರ್ಕ ಕರ್ಕಶನೆನಿಸಿ ಬುಧನಿಕರದೊಳ್ ೨

ತನ್ನ ಪೆಸರಂ ಧರ್ಮಸೇನ ಪಂಡಿತರೆಂದು
ಸನ್ನಿಯಿಂ ಕರಿಸಿಕೊಳುತಿರ್ದು ವಸುಧಾತಲದಿ
ಮನ್ನಣೆಯಲೆಂಟುಸಾವಿರ ಸವಣಶಿಷ್ಯರಂ ಮಾಡಿಕೊಂಡೆಂತಪ್ಪರಂ
ಉನ್ನತದ ತರ್ಕದಿಂದಂ ಗೆಲುವ ಜೈನಕುಲ
ದಿನ್ನಮಿಸಿಕೊಳುತ ಕರಿತುರಗ ನರವಾಹನಗ
ಳಿನ್ನಲಿದು ಮೆರೆವುತ್ತ ಮನ್ನೆಯಂಗುಪದೇಶವಂ ಮಾಡಿ ಗುರುವೆನಿಸುತೆ ೩

ಕರಿಗೊಡನನುಗುಳ್ವ ಬೇತಾಳರ ಬಳಗದಂತೆ
ಉರಿಯಿಂದಲರೆಬೆಂದ ಕಾಡುಗೊರಡುಗಳಂತೆ
ನೆರೆದ ಮಾಗಿಯೊಳೊಂದುಗೂಡಿಕೊಂಡಿರುತಿಪ್ಪ ಶಾಖಾಮೃಗಂಗಳಂತೆ
ಬರತ ಬಳ್ಳುವಿನಂತೆ ಕರಿಕುಕೊಳ್ಳಿಗಳಂತೆ
ಮರವೆಲೆಗಳಂ ಕಳೆದುನಿಂದ ತರುಕುಳದಂತೆ
ಉರುಮಲದ ಹಡಿಕೆಗಳು ಮಿಂಚುದಲೆ ಮುದಿಪದ್ದು ಬತ್ತಲೆಯ ಬಾಳ್ದಪೆಣಗಳ್ ೪

ಸುತ್ತಿ ಮುತ್ತಿರೆ ಸವಣಕುಲವವರ ನಡುವೆ ತಾ
ನುತ್ತಮೋತ್ತಮನೆನಿಸಿ ಧರ್ಮಸೇನಂ ಮುದಂ
ಬೆತ್ತು ಸವಣರ ಪೂಜೆ ಸವಣಘೋಷಣೆ ಸವಣರಾಣೆಯಂ ಪಾಲಿಸುತ್ತೆ
ಅತ್ಯಂತ ಜೈನಕುಲವಿಭವದಿಂದೊಪ್ಪಲೆಂ
ಬತ್ತು ಬರಿಸಂ ಸಂದವಿತ್ತ ತಿರುವಲನಾಚಿ
ನಿತ್ಯಮಂ ತಪ್ಪದಾ ಪುರದ ೧ಶಿವಂಲಿಂಗಾರ್ಚನಂಗೈವುತಿರುತಿರ್ದಳು ೫

---

೧ X (ಹ)

ಪುಳಕಪುಬ್ಬರಿಸೆ ಲಿಂಗಕ್ಕೆ ಮಜ್ಜನವೆರೆದು
ಲಲಿತ ಸದ್ಭಸ್ಮಗಂಧಾಕ್ಷತೆಗಳಂ ಧರಿಸಿ
ಚಲುವ ಪುಷ್ಪಂಗಳಿಂ ಧೂಪದೀಪಂಗಳಿಂದರ್ಚಿಸುತ್ತುಪಹಾರಮಂ
ನಲವಿನಿಂದಿತ್ತು ವೀಳ್ಯಂಗೊಟ್ಟು ಕೈಮುಗಿದು
ಎಲೆ ದೇವ ದೇವ ದೇವೇಶ ದುರಿತವಿನಾಶ
ಮಲಹರ ಮಹಾಮುಕ್ತಿಕೋಶ ಮತ್ಕುಲಪೋಷ ಲಾಲಿಸೆನ್ನಯ ಬಿನ್ನಪಂ ೬

ಎನ್ನ ತಮ್ಮನನಿಂತು ಮಾಡುವರೆ ಶಂಕರಾ
ನಿನ್ನತ್ತಲಭಿಮುಖಂ ಮಾಡಿಕೋ ಶಶಿಧರಾ
ಅನ್ಯಾಯವೇನೆಂಬೆ ಕುನ್ನಿದುರ್ಮತದೊಳಾಡುತ್ತವಂ ಕೆಟ್ಟನಯ್ಯೋ
ಹೊನ್ನಂಬುನಿಂತು ನೀರೊಳಗೆಚ್ಚ ತೆರನಾಯ್ತು
ರನ್ನಮಂ ಕರ್ಪಿನ ಕುಣಿಕೆಗಿಕ್ಕಿದಂತಾಯ್ತು
ಚೆನ್ನೆಸೆವ ವಾಗೀಶ್ವರನ ಸುಮತಿ ವ್ಯರ್ಥಮಾಗುತ್ತಲದೆ ಕರುಣಿಸಯ್ಯಾ ೭

ಎಂದಿಂತು ನಿತ್ಯಲಿಂಗಾರ್ಚನೆಯೊಳೊಮ್ಮೆಯುಂ
ಸಂದಣಿಪ ಬಿನ್ನಪಂಗೈವುತಿಹಳಾಕೆಯುಂ
ಒಂದು ದಿನವವಳ ಭಕ್ತಿಯ ನುಡಿಗೆ ಮೆಚ್ಚಿ ನಾನಂದು ಯೋಚಿಸಿದೆನೊಂದಂ
ಬಂಧುರದ ಶೂಲಕಾಜ್ಞಾಪಿಸಲ್ಕಾ ಶೂಲೆ
ಬಂದುದು ಮಹಾಜ್ವಾಲೆಯಂತೆ ವಾಗೀಶಂಗೆ
ನಿಂದವಯವಂಗಳೊಳಗಂ ಸುಟ್ಟುದಾ ಶೂಲೆಯೇವೇಳ್ವೆನದ್ಭುತವನು ೮

ಕೊಂಕಿರ್ದ ಚಿತ್ತಮಂ ಕಾಸಿ ತಿದ್ದುವ ತೆರದಿ
ಭೋಂಕನುರಿಯುರಿವುತೇರಿತ್ತು ದೇಹದೊಳುರದಿ
ವೆಂಕಿಂವಿಟ್ಟಂತಾಗಿಂ ಪೊರಳುತಿರ್ದಂ ನಿಲ್ಲದವನು ಕೋಟಲೆಗೊಳುತ್ತೆ
ಶಂಕಿಸಲಸಾಧ್ಯಮಾಗಿರೆ ಸವಣರೆಲ್ಲರಂ
ದುಂ ಕಳವಳಂಗೊಳುತಿರ್ದೇನೆಂದು ತಚ್ಛಿಷ್ಯ
ಸಂಕುಳಂ ಬೆರಗಾಗಿ ನೋಡುತ್ತಮಿಗೆ ಮನದಿ ಚಿಂತೆಯಿಂ ಚಿಂತಿಸುತ್ತೆ ೯

---

೧ + ೮ (ಹ)  ೨ ವಿಟ್ಟಂಗಿ (ಹ)

ಬಂದು ಮೈಯಂ ಮುಟ್ಟಿ ನೋಡಿ ಹೌವನೆಹಾರಿ
ನಿಂದು ಮಂತ್ರಿಸಲೆಂದು ಮನದೊಳಗೆ ಭಯವೇರು
ತಂದು ತಮತಮಗೆ ಮಂತ್ರಿಸುತಿರ್ದರಲ್ಲಿ ತಂಥಾಣಪಂಥಾಣೆನುತ್ತಂ
ಬಂಧುರದ ಮಂತ್ರ ಭದ್ರಾಣೆಗಿದ್ರಾಣೆಂದು
ಛಂದದಿಂ ಮಂತ್ರಿಸಲು ಮಿಗೆ ಧಗಿಲು ಭುಗಿಲೆಂದು
ಬೆಂದುದಾತನ ಕಾಯ ಮಂತ್ರಿಸುವವರ ಜಂಪ್ಪೆಸೀಳಿದುವು ತನುವುರಿದುವು ೧೦

ಮೋರೆಗಳು ಸೀದು ಥಟ್ಟುರಿದು ಗುಂಡಿಗೆ ಬಿರಿದು
ಕಾಠವೊಲು ಕಂದಿ ಮೈಬೆಂದು ಜಗ್ಗನೆ ಜರಿದು
ಕ್ರೂರಗುಣರಹ ಸವಣರೆಲ್ಲರಳಲುತ್ತ ಸುಯಿವುತ್ತ ಮರುಳಾಗುತ್ತಲೀ
ಆರೆಂದು ೧ನುಡಿವೆವ್ಮೈ ಮಡುಹಿದರ್ಪಂಡಿತರು೧
ವೀರಸವಣ ಕುಲಕ್ಕೆ ಮೃತ್ಯುವೆಡೆಗೊಂಡುದೆಂ
ದಾರಾಜ ಮೊದಲುಗೊಂಡಗಿವುತಿರಲಿತ್ತ ವಾಗೀಶನತಿವ್ಯಥೆ ಬಡುತಿರೆ ೧೧

ನಡೆತಿ೨ಲ್ಲಿ೨ವಲ್ಲಿನಾಚಿಯುರಲ್ಲಿಗೆಂಬಂತೆ
೩ಬೀ೩ಡದೈವದಲ್ಲಿ ಫಲವಿಲ್ಲ ನಡೆಯೆಂಬಂತೆ
ಒಡಲೊಳಗೆ ಶೂಲೆಯುಷ್ಣ ಜ್ವಾಲೆಮಿಗೆ ನೆಗೆದು ಹರಣಮಂ ಹೋ೪ಳಲು೪ತಿರಲು
ಇಡಿದ ನೋ೫ವಿಂ೫ಗಾರದಾಗ ವಾಗೀಶ್ವರಂ
ಒಡನೆ ತನ್ನಂತಸ್ಥವರಿವ ಶಿಷ್ಯರ ಕರೆದು
ನುಡಿದನೆನ್ನಂ ಕೊಂಡು ನೀವೀಗಳೆಮ್ಮಕ್ಕನಲ್ಲಿಗಂ ಪೋಗಿರಯ್ಯಾ ೧೨

ಗುರುಪೂಜೆಯುರುಹಂತ ಪೂಜೆಯೆಂದುಸುರಲ್ಕೆ
ಹರಣಮಂ ಕಾವುದು ಮಹೋಪಕಾರವೆನಲ್ಕೆ
ನೆರೆ ಕೇಳ್ದು ಶಿಷ್ಯರಿರ್ವರು ಮಧ್ಯರಾತ್ರಿಯೊಳಗಾರರಿಯದಂತೆ ಗುರುವಂ
ಭರದಿಂದೆ ಪೊತ್ತೈತರುತಿರಲ್ಮಾರ್ಗದೊಳು
ಉರಿತಗ್ಗಿ ತನುವಾಗಲಾಗ ವಾಗೀಶಂಗೆ
ಸರಸದಿಂ ನಂಬುಗೆಗೆ ನೆಲೆಯಾಗೆ ಬಂದರಾ ತಿರುವರುಘೆಯೆಂಬ ಪುರಕೆ ೧೩

---

೧ ನುಡಿವೆಮ್ಮಮಡುಹಿರ್ಪಂಡಿತರು (ಹ)   ೨ ಲ್ಲ (ಹ)   ೩ ಬಿ (ಹ)
೪ ಗು (ಹ)   ೫ ಲಿಂ (ಹ)

ಘಳಿಲನೈತರುತಲಾವೂರ ದೇವಾಲಯದ
ಬಳಿಯಲಾತನನಿಳುಹಿ ಪೋದರವರತ್ತಿತ್ತ
ಬೆಳಗಾಗಲೆಂದಿನಂದದಿ ಪೂಗಳಂ ಕೊಂಡು ಕೊಳನಗ್ಗವಣಿಯ ಕೊಂಡು
ಚೆಲುವ ಲಿಂಗಾರ್ಚನಕ್ಕೆಂದು ತಿರುವಲನಾಚಿ
ನಲವಿನಿಂದೈತರಲ್ಕಾಕೆಯೊಡನೈತಪ್ಪ
ಲಲನೆಯರು ಕಂಡರಾ ವಾಗೀಶನಂ ಕಾಣುತವರಚ್ಚರಿಯನಾಂತರು ೧೪

ನಿನ್ನನುಜನಿಲ್ಲಿ ಬಿದ್ದಿಂಪಂ ನೋಡುಯೆಲೆ ತಾಯೆ
ನಿನ್ನಡಿಗಳಂ ನೋಡುತಿರ್ಪ ರಕ್ಷಿಸು ತಾಯೆ
ಎನ್ನಲೆನಗೆಲ್ಲಿವೊಡಹುಟ್ಟಿದಂ ಪೇಳಿರೇ ಕುಂದನಾಡುವರೆ ನೀವು
ಮುನ್ನ ಸತ್ತವನ ಪೆಸರ್ಗೊಳುತಿರ್ದಿರೇಕವ್ವ
ನನ್ನಿಯಿಂದವನಿತ್ತಲೇಕೆ ಬಂದಪನವ್ವ
ಇನ್ನು ಬೆಳಗೆತ್ತ ತಮವೆತ್ತ ತಿಳಿವೆತ್ತ ಮರೆವೆತ್ತ ಸುಧೆವಿಷವೆತ್ತಲು ೧೫

ನಾನೇಕೆ ಅವನೇಕೆ ಇಂತು ಪುಸಿವರೆ ಅವ್ವ
ಈನುಡಿಯ ನುಡಿವರೇ ಶಿವಯೆನ್ನಿರೇ ಅವ್ವ
ಏನಘಟನವ ಪೇಳ್ದಿರೆಲೆ ತಾಯಿಗಳಿರ ಎನಲವ್ವ ಪುಸಿಯಲ್ಲ ನೋಡೆ
ನೀನಿತ್ತಲೀಕ್ಷಿಸೌ ಕೊಂಡದ ತಡಿಯೊಳಿಹನು
ಮಾನಿನಿ ಶಿರೋರನ್ನೆ ನಿನ್ನಾಣೆ ನೋಡೆನ
ಲ್ಕಾನಂದದಿಂದೆ ಬರುತಲ್ಲಿ ಕಂಡಳು ತನ್ನತಮ್ಮನಹ ವಾಗೀಶನಂ ೧೬

ಹರಹರಯೆನುತ್ತೆ ಕಣ್ಣಂ ಮುಚ್ಚಿಕೊಳುತಲ್ಲಿ
ಧರಿಸಿರಿ ವಿಭೂತಿಯಂ ಪಾತಕನ ಪಣೆಯಲ್ಲಿ
ಮರುಳನಿವನೆಂದು ಭಸಿತವನಿಡಿಸಿ ಬಳಿಕ ಕರುಣಿಸಿ ನೋಡಲವನೀಕೆಯ
ಚರಣದೊಳು ಬಿದ್ದು ಶೋಕಂಗೈದು ಎಲೆ ತಾಯೆ
ಕರುಣಿಪುದನಾಥಂಗೆ ಮರುಳಂಗೆ ಮೂರ್ಖಂಗೆ
ಕರುಣಿಪುದು ತಾಯೆ ದಯಾಪರೆ ಮದಾಂಧಂಗೆನಲ್ಕೆ ಕೈವಿಡಿದೆತ್ತುತ ೧೭

---

೧ ಯ (ಹ)

ಮನಸಿಜಾರಿ೧ಯೆ೧ ಕರುಣಿಸೆಂದೆನುತೆ ಪಿಡಿದೆತ್ತಿ
ಮನದೊಳೆನ್ನಂ ನೆನೆದು ಕೊಂಡದೊಳು ಮುಳುಗಿಸುತೆ
ಅನಘಲಿಂಗಾಲಯದೊಳುಂ ಪೊಗಿಸಿ ತಲ್ಲಿಂಗಕಿರದೆ ನಮಿಸುತ್ತ ನಿಂದು
ಅಸುವಿನಿಂ ತಿಲ್ಲಿವಲ್ಲಿಯರಿಂದೆ ಬದುಕಿದೆಂ
ಬಿಸುಗು ಕಷ್ಟವನೈದೆ ಗೆಲಿದು ನಿಮಗೊದಗಿದೆಂ
ಅನುಪಮ ದಯಾಸಿಂಧು ವಿನಮಿತ ಸುಜನಬಂಧು ಭಕ್ತಕುಲಕೈರವೇಂದು ೧೮

ಶಶಿಧರಾ ಶಂಕರಾ ಶಿವನೇ ಸದಾಶಿವಾ
ಪಶುಪತಿಯೆ ಭೂತೇಶ್ವರಾ ಭವಾನೀಧವಾ
ಅಸುರಸುರ ದೇವದೇವರ ಗಂಡ ಕರುಣಿಪುದು ಸರ್ವಾಪರಾಧಿಗೀಂದು
ವಿಶದ ನಿಂದಾನಿಧಿ ಕನಿಷ್ಠಂಗೆ ಕರುಣಿಪುದು
ಒಸೆದುಂ ನಿಜಾಂಘ್ರಿಗೆರಗದವಂಗೆ ಕರುಣಿಪುದು
ನಶಿದು ಹುಟ್ಟುವುದಕ್ಕೆ ಒಡನೆ ಲಘುವಾದಂಗೆ ಕರುಣಿಸೈ ಕರುಣಿಸಭವಾ ೧೯

ಕರುಣಿಸಲೆ ದೇವ ಮರನಾಗಿರ್ದೆನಿನ್ನೆಗಂ
ಕರುಣಿಸಲೆ ದೇವ ಕಲ್ಲಾಗಿರ್ದೆನಿನ್ನೆಗಂ
ಕರುಣಿಸಲೆ ದೇವ ಮೃತ್ಯುವಿನ ತುತ್ತಾಗಿರ್ದೆ ಮಾಯೆಗ್ಗ ತೊತ್ತಾಗಿರ್ದೆನು
ಹರನೆ ಕತ್ತಲೆಯೊಳಗೆ ಬರಡುಗರೆವುತ್ತಿರ್ದೆ
ಮರೆದು ಕಬ್ಬೆಂದು ಕಬ್ಬುನವ ಕಡಿವುತ್ತಿರ್ದೆ
ಹರವರಿಯ ಬೆಳಗಿರ್ದು ಮರ್ಬಿನೊಳು ಚರಿಸುತ್ತಲಿರ್ದೆ ನಾನಜ್ಞನಾಗಿ ೨೦

ಇನನಿರಲು ಮಿಂಚುಂಬುಳವನರಸುವನ ತೆರದಿ
ಇನಿದಿರಲು ೨[ಕಹಿ]ಗೆ ಕೈನೀಡಿ೨ ಕುದಿವನ ತೆರದಿ
ಬಿಸುಗೆನಿ೩ಪ ಚರಿಗೆ೩ಯಂ ಹೊಕ್ಕು ನೀಚರಿಗೆ ನಗೆಗೆಡೆಯಾಗಿ ನಿಂದೆ ನಾನು
ಘನವಾದ ಶಿರವಿಲ್ಲದಟ್ಟೆಯಂತಿರುತಿರ್ದೆ
ನೆನೆದರಿಯದಿಂತು ಬತ್ತಲಿಗರೊಳಗಿರುತಿರ್ದೆ
ವಿನುತರತ್ನವನೊಲ್ಲದುಳಿದು ಕಗ್ಗಲ್ಗೊಂಡ ತೆರನಾಗುತಿರುತಿರ್ದೆನು ೨೧

---

೧ ಯಯು (ಹ)   ೨ ಕೈಗೆಕಹಿನಿಡಿದು (ಹ), ಖೈಗೆಕೈನೀಡಿ (ಜ)   ೩ ಪಾಚರಣೆ (ಜ)

ತಲೆಪರಿದು ಕಣ್ಣುರಿದು ಬೇಗೆಗೊಂಡೆಂ ತಂದೆ
ನೆಲ ನೂಂಕಲುಂ ೧ಪೇ೧ಸೆ ಸುಳಿವುತಿ೩ರ್ದೆಂ೩ ತಂದೆ
ಮೊಲನ ತಲೆಯೊಳು ಕೋಡನರಸಿಕೋಟಲೆಗೊಂಬ ಗಾಂಪನಂತಿರುತಿರ್ದೆನು
ಸಲೆ ಜೀವ೪ವಿರ್ದು ಜೀವನ್ಮೃತಕ೪ನಾಗಿರ್ದೆ
ಚೆಲುವ ನಿಮ್ಮಡಿಗಳಂ ಮರೆವುತಿಂತಾಗಿರ್ದೆ
ಎಲೆ ದೇವ ಕರುಣಿಪುದು ಕಾವುದೀಕ್ಷಿಪುದು ರಕ್ಷಿಪುದೀಶನೆನುತೆರಗಿದಂ ೨೨

ಇಂತು ಸ್ತುತಿಯಿಸಲವನ ನುಡಿಗೆ ನಾನ್ನೆದೆ ಮುದ
ವಾಂತಿರಲ್ಕವನಗ್ರಜೆಗೆ ಸಂತಸಂದೋರಿ
ಅಂತಕಾಂತಕ ಸೋಮನಾಥಲಿಂಗವನರ್ಚಿಸುತ್ತಲಿಲ್ಲಿರುವುದೆಂದು
ಕಾಂತೆ ತನ್ನನುಜಂಗೆ ಪೇಳಿ ಸುಖದಿಂದಿರ
ಲ್ಕಂತೆಂದುಸುರ್ವ್ವನೆಲೆ ನಂಬಿ ಮತ್ತಾ ಜೈನ
ಸಂತಾನವೆಲ್ಲ ನಿಜಗುರು ಧರ್ಮಸೇನಪಂಡಿತರಿಲ್ಲದುದನರಿವುತೆ ೨೩

ಏನಾದರೆಂತಾದರೆತ್ತಪೋದರ್ಗುರುಗ
ಳಾನರಿಯೆ ನೀನರಿಯೆಳನೆಳನುತಿರ್ದರಾ ಶಿಷ್ಯ
ರೇನೆಂಬವ್ವೆ ಶೂಲೆಗಾರದವರುಂ ನಾಲಗೆಯ ಕಿತ್ತುಕೊಂಡಳಿದರೋ
ಹೀನ ನೋವಂ ಸೈರಿಸದೆ ವಿಷವ ಕೊಂಡರೋ
ಮಾನಕ್ಕನೂನವಾಯ್ತೆಂದಡಗಿ ಪೋದರೋ
ಭೂನುತ ಚರಿತ್ರರೆತ್ತಂ ಪೋದರೆನುತಲತ್ತಿತ್ತಲರಸುತ್ತಿರ್ದರು ೨೪

ಪುರಗಳೊಳು ವನಗಳೊಳು ಹಳ್ಳಕೊಳ್ಳಂಗಳೊಳು
ಗಿರಿಗಳೊಳು ಗುಹೆಗಳೊಳು ಬರಿಯ ದೇಗುಲಗಳೊಳು
ಕೆರೆಗಳೊಳು ನದಿಗಳೊಳು ಚರಿಗೆಯು೫ಮನೆಗಳೊಳು ಬಹುವಿಧದ ಬಸ್ತಿಗಳೊಳು
ಪರಿಪರಿಯಂ೫ಲ೫ಲ್ಲಲ್ಲಿ ಜೈನ ಜಂಗುಳಿಯೆಲ್ಲ
ನೆರೆ ನೆರೆದು ಹರಿಹರಿದು ೬ಅ೬ರಸಿ ಗುರುವಂ ಕಾಣ
ದುರೆನೊಂದು ಬರುತಲ್ಲಿ ತಿರುವರುಘೆಯೊಳು ಗುರುಗಳಿರುತಿ೭ರ್ದು೭ದಂ ಕೇಳ್ದರು ೨೫

---

೧ ಹೇ (ಹ) ೨ ರ್ದೆಂ (ಹ) ೩ ವಿರ್ದು ಜೀವನುತಕ (ಹ) ೪ ರೆ (ಹ)
೫ ರ (ಹ) ೬ ಹ (ಹ) ೭ ರ್ದು

ಗುರುಧರ್ಮಸೇನಪಂಡಿತರನ್ಯ ಸಮಯಮಂ
ಬೆರಸಿರ್ಪರೆಂಬುದೆಲ್ಲರ್ಕೇಳುತೊಂದಾಗಿ
ನೆರೆ ಚಿಂತಿಸುತ್ತಲಿನ್ನೇಂಗೈವೆವಿದಕೆಯವರಿಂತಿರ್ದಡೆಮ್ಮ ಕುಲಕೆ
ಪರಿಹಾಸ್ಯವನ್ಯಮತದವರ್ಗಿದುಂ ನಗೆಗೆಡೆಯು
ಪರಮ ರುಷಿಯರ್ಗೆಮಿಗೆ ನಿಂದೆ ಜಿನತನಿತಗೆ ಕುಂದು
ಮರೆದಿರಲ್ಬಾರದೆಮ್ಮೊಳಗೊರ್ವ ಪಿರಿಯನಂ ಕಳುಪಿ ನೋಡುವೆವೆನುತ್ತೆ ೨೩

ಚಂಡದಿಂದೊರ್ವ ರುಷಿಯುಂ ಕಳುಪಲವನೈದು
ದಂದವಿನ್ನೇನೆಂಬೆ ಮುಳಿದು ಬೆಳಗಿಗೆ ಬುದ್ಧಿ
ಯಂದೋರಬಪ್ಪ ಕತ್ತಲೆಯರಸಿನಾಳಿನಂತೈತಂದನಾ ಸವಣನು
ಬಂದು ವಾಗೀಶದೇವರನು ಕಾಣುತ್ತಲವ
ನಂದು ಮೈಯಿಕ್ಕುತ್ತ ಜಯಜಯ ಜಿನ ನಮೋಸ್ತು
ಎಂದು ಕರವಂ ಮುಗಿದು ನಿಂದಿರ್ದನಂ ಕಾಣುತೀತ ಕಿಡಿಕಿಡಿಯಾದನು ೨೭

ಶಿವಶಿವ ಶಿವದ್ರೋಹಿಯುಂ ನೋಡಲಾಗದಿವ
ನವಿಚಾರಿ ಕರ್ಮಿ ಕುಮತಂ ನುಡಿಸಲಾಗದೆಂ
ದು ವಿರುದ್ಧಭಾವದಿಂದೀತನಿರಲಾ ಜೈನ ಕಾಣುತ್ತ ತಿರುಗಿಬಂದು
ವಿವರಿಸಿದನೆಲ್ಲವಂ ಕೇಳುತ್ತ ಜಿನಕುಲಂ
ತವಕದಿಂದೆಲ್ಲರೊಂದಾಗಿ ನೀಚಾಳೋಚ
ನವೆಸಗಿ೪ದರ್ಧರ್ಮ೫ವುಂ ಮರೆದು ದುರಿತಮಂ ಕರೆದರಿನ್ನೇವೇಳ್ವೆನು ೨೮

ಅರಸು ತಾನಾನೆ ಕುದುರೆ ಪದಾತಿಯುಂ ಕೊಂಡು
ಭರದಿಂದೆ ಬಂದು ಮುತ್ತಿದನು ತಿರುವರುಘೆಯುಂ
ವರ ಶಿವಾಲಯದೊಳಿಹ ವಾಗೀಶನಂ ಪಿಡಿದು ತಂದೊಂದು ಗಜದ ಮೇಲೆ
ನೆರೆ ಕುಳ್ಳಿರಿಸುತೆ ಕಾಡಿಂಗೆ ಕಾಡ್ಗಿಚ್ಚನುಂ
ತರುವಂತೆ ತಂದರುಮ್ಮಳಹಳದಿ ತಮ್ಮಯ ಪುರದ
ಪಿರಿಯ ಬಸದಿಯೊಳು ಕುಳ್ಳಿರಿಸಲ್ಪತಂಗಗಳ ನಡು ಜ್ಯೋತಿಯಂತಿರ್ದನಸುಜ ೨೯

---

೧ ರೆ (ಹ) ೨ ರಿ (ಹ) ೩ ಧರ್ಮ (ಹ) ೪ ಯ (ಹ) ೫ ರು (ಹ)

ಇಂತಿರ್ದ ವಾಗೀಶನಂ ಕಾಣುತವರು ಮುದ
ವಾಂತು ಮಿಗಿಲೆಂಟು ಸಾವಿರ ಸವಣ ರುಷಿ ಶಿಷ್ಯ
ರಿಂತಲ್ಲದರಸು ಮೊದಲೆಲ್ಲರುಂ ಪೈಯಿಕ್ಕಿ ನಿಂದು ಕೈಗಳನೆ ಮುಗಿದು
ಇಂತನ್ಯ ಸಮಯದೊಳು ನೀವಿರ್ದಡಿನ್ನಾವು
ಎಂತಿರಲ್ಬೇಕು ಗುರುವೆ ಕರುಣಿಸೈ೧ಯಿದಂಗ
ಸಂತತಂ ಶಿಕ್ಷೆರಕ್ಷೆಗೆ ಕರ್ತೃಗಳ್ನೀವು ಪೇಳಲೆಮ್ಮಳವೆ ದೇವಾ ೩೦

ಆನೆ ಕುದುರೆಗಳೆಲ್ಲ ನಿಮ್ಮವಿರ್ದಪವು ಮು
ತ್ತಾ ನಿಖಿಲ ಭಂಡಾರ ನಿಮ್ಮದಿರ್ದವುದು ಮಿ
ಕ್ಕೀ ನೆಲದೊಡೆತನವದು ನಿಮ್ಮದೈ ದೇವ ನೀವಿಂತನಾಚಾರರಾಗೆ
ಏನೆಂಬೆವಿದಕೆ ಪರಸಮಯ ವೇಷವನುಳಿದು
ಆನಂದದಿಂದಾರುಹತ ವೇಷಮಂ ತಳೆದು
ಸಾನುರಾಗದಿ ಮುನ್ನಿನಂತೆ ನೀವಿರ್ದು ಕರುಣಿಪುದೆಂದು ನುತಿಸಲವರು ೩೧

ವಾಗೀಶದೇವರಿದನೆಲ್ಲಮುಂ ಕೇಳುತ್ತ
ಲಾಗಳು ಕಿರಳ್ದುರಿವುತೆದ್ದು ಗದ್ದುಗೆ ಹೊಯ್ದು
ತೂಗುತ್ತ ಶಿರವನೆಲೆ ಪಾಪಿಗಳಿರಾ ಮೃಡನನರಿಯದ ಜಡಾಂಧಕರಿರಾ
ಭೋಗಿಭೂಷಣನ ನುತಿಸದ ನರಕಯೋಗ್ಯರಿರ
ಆಗಮಸ್ತುತ್ಯನಂ ಕಾಣದ ಕಪಟಿಗಳಿರ
ಈಗಳುಸುರುವೆನರಿಯಿರೆಲೆ ನಿಧಾನವನರಿಯದಂತ[ಥ]೨ ನಿರ್ದೈವಗಳಿರಾ ೩೨

ಅಂಧಕಾಸುರಹರಣ ಆಶೀವಿಷಾಭರಣ
ಸಿಂಧು ಸಾರ ನಿಷಂಗ ಸಾರಸಾಸ್ತ್ರವಿಭಂಗ
ಕ್ರಂದನ ವಿನಾಶ ಕಾತ್ಯಾಯನೀ ಸುವಿಲಾಸ ಕಾಶ್ಯಪೀಭೃನ್ನಿವಾಸ
ಬಂಧುರ ಮಹಾ ಸತ್ವಶಾಲಿ ಶಿವನೆಂಬುದಂ
ಅಂದು ಮದದಿಂದೆ ಮರೆದಿರ್ದೆ೩ ಮತ್ತಿದನರಿದೆ
ಗಂಧಮುಂಟಾಗೆ ವಾಗೀಶ್ವರನ ತಲೆಯಲ್ಲಿ ಹರನ ಕರವಲ್ಲೆಂಬುದಂ ೩೩

೧ ಯೆಂದು (ಹ) ೨ ತ (ಮೂಲ) ೩ ರ್ಪೆ (ಹ)

ಇದರಿಂದೆ ನೀವಾರು ನಾವಾರು ಹೆಡ್ಡರಿರ
ಅಧಮರ್ಕೈ ನೀವು ನಿಮ್ಮಂ ಮುಟ್ಟುವುದೆ ನರಕ
ಒದಿಯದಿರಿ ಬರಿದೆ ನಿಮ್ಮಯ ದೈವದಲ್ಲಿ ಫಲವಿಲ್ಲ ಪುಸಿಯಲ್ಲ ಕೇಳಿ
೧[ಮ]೧ದದಿಂದೆ ಮುಂದುಗಾಣದೆ ಕೆಟ್ಟುಪೋಗದಿರಿ
ಮೊದಲಿನಂತರಿಯದಿರಿ ನಮ್ಮನುಂ ನುಡಿಸದಿರಿ
ಸದುಮೇಶ ಶಂಕರನ ಕಿಂಕರಂ ತಾನೆಂದವರ್ಗಳಂ ಜರಿದು ನುಡಿಯೆ ೩೪

ವಿಷದುಂಡೆ ಮೆದ್ದಂತೆ ಗಗನದಿಂ ಬಿದ್ದಂತೆ
ಕಿಸರಿನೊಳಗದ್ದಂತೆ ಕತ್ತಲೆಯೊಳಿದ್ದಂತೆ
ಪಸುಳೆಗೆ ಮರುಳ್ಗೊಂಕಿಕೊಂಡಂತೆ ಸುಮ್ಮಾನಗುಂದಿ ದುಮ್ಮಾನ ಕವಿದು
ವಿಷಮ ದುರಿತಂಗಳಿಗೆ ಮೊಟ್ಟ ಮೊದಲಿಗರಂತೆ
ಎಸೆವ ತಮ್ಮಯ ಕುಲಕೆ ಪರಶುವಂ ಕೊಂಡಂತೆ
ಪಸರಿಸಿದರೆಲ್ಲರುಂ ೨ಕೃತ್ರಿಮಂ೨ ನೆನೆದು ಧರ್ಮ್ಮಂ ಮರೆದರಾ ಸವಣರು ೩೫

ಮುನ್ನ ಜಿನದೀಕ್ಷೆಯಂ ಕೊಟ್ಟು ಗುರುವೆನಿಸಿರ್ದ
ಮನ್ನಣೆಯ ವಾಗೀಶನೆಮಗೆರೆಯನೆಂಬುವುದು
ಕುನ್ನಿ ಜೈನರ್ಕಳರಿಯದೆ ದಂಡಿಸಲು ಬಗೆದು ಕೃತಕ ಸಂಕೇತರಾಗಿ
ನನ್ನಿಯಿಂ ಕೈಮುಗಿವುತೆಲೆ ದೇವ ಶಿಕ್ಷಿಸುವ
ದಿನ್ನುಯೆಮ್ಮಳವಲ್ಲ ನಿಮ್ಮೂರ್ಗೆ ಗಮಿಸಿರೆಂ
ದೆನ್ನುತ್ತೆ ಮನದೊಳು ವಿಷಂ ವಚನದೊಳು ವಿನಯಮಂ ತಳೆವುತೆಲ್ಲರಂದು ೩೬

ಕರೆದೊರ್ವ ನೀಚನಂ ಸುವಿಧಾನಕಿರಿಸುತ್ತ
ಭರದಿಂದ ಕಳುಪಲವನಶನಿಯುಂ ಸೀಳಲ್ಕೆ
ನೆರೆಯತ್ನಮಂ ಗೈವನಂತೆ ಬಯಲಂ ಕತ್ತರಿಸಲು ತಾಂ ಬಗೆವನಂತೆ
ಪರಮವಾಗೀಶ ದೇವರನು ದಂಡಿಸಲೆಂದು
ಪುರದ ಹೊರಗಣವೊಂದು ಮನೆಯೊಳುಂ ಪೊಗಿಸುತ್ತ
ಉರೆ ಸುಣ್ಣಮಂ ಸುರಿದು ನೂರಾರು ಕೊಡವ ನೀರೆರೆದನಾ ಪಾಪಿಷ್ಠನು ೩೭

---

೧ ಮು (ಮೂಲ)  ೨ ಕೃತಕವಂ (ಜ)

ಒಳಗಿರ್ದವಾಗೀಶನಂದು ತಾಂ ಚಿಂತಿಸದೆ
ಚೆಲುವ ಗಂಗಾಧರಾ ಚಂದ್ರಶೇಖರ ಭಸ್ಮ
ವಿಳಸಿತ ನಿಜಾಂಗ ನೀಂ ರಕ್ಷಿಸಯ್ಯಾಯೆನಲ್ದಾಹಮುಂ ತವಿಸಿತಾಗೆ
ಚಳಪಳನೆ ಕುದಿವ ಸುಣ್ಣಂ ತಣ್ಣನಾಗಿರಲ್
ಸಲೆ ವಿಭೂತಿಯ ರಾಶಿಯೊಳು ಸುಖದಲಿರ್ದಂತೆ
ಬೆಳುದಿಂಗಳೊಳಗೆ ಕಳಂಕಂಳಿಸುತೊಪ್ಪುವ ಶಶಿಯೊಲೆಸೆದನಾ ವಾಗೀಶನು ೩೮

ಮರುದಿವಸ ೨ಬಿಯ್ಯ೨ಗಂಗಳೆದೀಕ್ಷಿಸಲ್ಕೊಳಗೆ
ಹರುಷದಿಂ ವಾಗೀಶನಿರುತಿರ್ಪುದಂ ಕಂಡು
ಬೆರಗಾಗುತಾ ದುರುಳ ವಿಷಮವಹ ವಿಷಧರಂಗಳನೊಳಗೆ ಪೊಗಿಸಲಾಗಿ
ಗರಳಧರ ಶೂಲಧರ ಸರ್ಪಾಭರಣ ಮೃತ್ಯು
ಹರಹರಮಹೇಶ ಕಾಲಾಗ್ನಿರುದ್ರಾಯೆಂದು
ನೆರೆಯೆನ್ನ ನಾಮಮಂ ನನೆಯುತ್ತ ನುಡಿವುತ್ತಲರ್ಥಿಯಿಂ ಪಾಡುತಿರಲು ೩೯

ಇಡಿದ ಗಾನರಸಕ್ಕೆ ನಾಗಕುಲವೆಲ್ಲಮುಂ
ಒಡನೆಮೈಮರೆದು ಮಹದಾನಂದವಾವರಿಸಿ
ಹೆಡೆಯೆತ್ತಿ ಕಿವಿಯೆ ಕಣ್ಣಾಗಿಸುತ್ತಂ ಸುತ್ತಮುತ್ತಿ ಕೇಳುತ್ತಮಿರಲು
ಬಿಡದೆ ಸರ್ಪಂಗಳಿಂದೋಲೈಸಿಕೊಳುತಿರ್ಪ
ಸಡಗರದ ಶೇಷಾಧಿಪತಿಯಂತಿರುತ್ತಿರ್ದ
ದೃಢ ಶರಣ ವಾಗೀಶನೀಶನಂ ಚಿಂತಿಸುತ ಬೆರಗುಗೊಂಡಿರುತಿರ್ದನು ೪೦

ಆವ ಕಾರಣಕನೋದಾವಮೃತಸಿದ್ಧನೊ
ದಾವ ಸಾಮರ್ಥ್ಯ ಪುರುಷನೊ ತಿಳಿಯದೆನುತವಂ
ಭೂವರಂಗುಸುರಲ್ಕೆ ತರಿಸಿದನವಂ ಮಹಾಮತ್ತಮಾತಂಗಂಗಳಂ
ಆ ವಿಗಡಗಜಗಳಿಂ ತುಳಿಸಲುಜ್ಜುಗಿಸಲ್ಕೆ
ದೇವ ದೇವೇಶ ಗಜದಾನವಮದವಿನಾಶ
ಓವುದೆನ್ನಂ ಸುಪ್ರಸನ್ನಮುಖ ಸಂಪ್ರೀತಕ್ಷನೆಂದಾತಕ್ಷನೆನ್ನನುತಿಸೆ ೪೧

---

೧ ವ (ಹ) ೨ ಬೀಯ (ಹ) ೩ X (ಹ)

ನೂಂಕುವ ಗಜಂಗಳಾರೋಹಕರನೀಡಾಡಿ
ಭೋಂಕನಲ್ಲಿರದೆ ದೆಸೆದೆಸೆಗಳ್ಗೆ ಬಿಟ್ಟೋಡೆ
ಶಂಕರ ಸದಾಶಿವ ಮಹಾದೇವನೆನುತೆ ವಾಗೀಶನಾಗಳ್ನಗುತಿರೆ
ಶಂಕಿಸುತ್ತವರುರೆ ಕನಲ್ದೊಂದು ಗೋಣಿಯೊಳ
೧ಗಂ ಕರುಣರಹಿತರೀ ವಾಗೀಶನಂ ಪೊಗಿಸಿ
ಮುಂಕೊಂಡು ಪಿಡಿದೊಂದು ಕಲ್ಲಕಂಬಕ್ಕೆ ಬಿಗಿಬಿಗಿದೊತ್ತಿ ನೇಣ್ಗಳಿಂದೆ ೪೨

ಕೊಂಡೊಯ್ದು ಶರಧಿಯೊಳು ಮುಳುಗಿಸಲ್ಕಳಯಜಿತ
ಕಾಂಡಧಿ ನಿಷಂಗ ವಿಘ್ನಾ೨ಂಭೋಧಿ ಕುಂಭಜನೆ
ಖಂಡೇಂದು ಮೌಳಿಯೇ ಕರುಣಿಸೈ ದುಷ್ಟ ನಿಗ್ರಹ ಶಿಷ್ಟಪರಿಪಾಲನ
ಚಂಡಿಕಾಧವ ರಕ್ಷಿಸೈಯೆಂದು ವಾಗೀಶ
ನಂಡಲೆದು ಕೂಗುತಿರೆ ಕಲ್ಲಕಂಬಂ ಸಹಿತ
೧ಹಿಂಡು ಜನವೀಕ್ಷಿಸುತ್ತಿರೆ ಸಿಂಧುವಿನ ಜಲದಿ ತೇಲಾಡುತಿರುತಿರ್ದನು ೪೩

ಇದನೆಲ್ಲನರಿದರಾ ಮದಮುಖರಧಮರುಗಳು
ಸದಮಳ ಚರಿತ್ರ ಸೂತ್ಯಾ೨ಭ್ಯುದಯನೀತನೊಳು
ಕದನಮಂ ಸಲ್ಲದೆನುತರಿದು ವಾಗೀಶನಂ ತೆಗೆದಾತನಂ ನುತಿಸುತ
ಪದಪದ್ಮಕೆರಗುತಾನೆಯನೇರಿಸುತ್ತ ಬಹು
ವಿಧದ ವಾದ್ಯಗಳಿಂದೆ ಸವಣರೆಲ್ಲರ್ನೆರೆದು
ಮುದದಿಂದೆ ತಿರುವರುಫೆಗೈತರಲ್ಕಾ ಪುರದ ಜನವಿದಿರ್ಗೊಂಡುದಾಗೆ ೪೪

ಅಲ್ಲಿ೩ರ್ಪ೩ ತಿ೪ಲ್ಲಿ೪ವಲ್ಲಿಯುರಮಿತ ಭಕ್ತರುಗ
ಳೆಲ್ಲಮಿರ್ದಂಬೆತ್ತು ವಾಗೀಶನಂ ತಂದು
ಸಲ್ಲಲಿತ ಲಿಂಗಾಲಯಂ ಪೊಗಿಸಲಾತನತ್ಯುತ್ಸವದೊಳಲ್ಲಿರುತ್ತೆ
ಬಲ್ಲಿದಂ ವಾಗೀಶ ಲಿಂಗಾಲಯದ ಬಾಹ್ಯ
ದಲ್ಲಿಪ್ಪ ಪುಲ್ಲನುಂ ರಜವನುಂ ತೆಗೆವುತ್ತ
ಉಲ್ಲಾಸದಿಂದೆ ಮನದಣಿಯ ಬಾಯ್ದಣಿಯದಂತೆನ್ನನುಂ ಕೀರ್ತಿಸುತಿರೆ ೪೫

---

೧ ಖಂ (ಹ) ೨ ತ್ಯ (ಹ) ೩ ಪ್ಪ (ಹ) ೪ ಲ್ಲ (ಹ)

ಇಂತು ವಾಗೀಶ್ವರಂ ಸಂತಸದಲಿರುತಿರ್ದು
ಸಂತತಂ ತಿಲ್ಲಿವಲ್ಲಿಯರಾಜ್ಞೆಯಿಂದಿರ್ದು
ಮುಂತೆ ನಾಂ ಪುಟ್ಟಿದೂರೊಳು ಭಕ್ತಿಯಂ ಪ್ರಭಾವಿಪೆನೆಂದು ಮನದಿ ನೆನೆದು
ತಾಂ ತವಕದಿಂದ ತಿರುವಾರೂರ್ಗೆ[1] ನಡೆತಂದು
ಮುಂತಿರ್ದ ಲಿಂಗಾಲಯಂ ಪೊಕ್ಕು ಎನ್ನನುಮ
ನಂತ ವಿಧದಿಂ ನುತಿಸತೊಡಗಿದನದೇನೆಂಬೆನಾಲಿಸೈ ಸೌಂದರೇಂದ್ರಾ ೪೬

ದೇವ ಶಂಕರ ಶರ್ವ ಸರ್ವಜ್ಞಮೂರ್ತಿಯೇ
ದೇವ ಚಾತುರ್ದಶಭುವನ ಚಕ್ರವರ್ತಿಯೇ
ದೇವ ವಸುಧಾಧರಕೋದಂಡ ದಂಡಧರಮದಮುದಿರ ಜಂಝಾನಿಲ
ದೇವ ದಾನವ ದಿವಿಜನುತ ಚಂದ್ರಮಾಳಿಯೇ
ದೇವ ಕಾರುಣ್ಯಾಮೃತಾಬ್ಧಿ ವೃಷಭಪಾಳಿಯೆ
ದೇವ ದಕ್ಷಾಧ್ವರ ಧ್ವಂಸ ಧೌರೇಯ ವೀರಪ್ರೀತಿಕರ ಶಂಭುವೇ ೪೭

ಹರಿಯಜರ ನಡುವೆ ಉರಿಲಿಂಗವಾದಪ್ರತಿಮ
ವರ ಶಿರೋಮಾಲೆಗಳನಿಕ್ಕಿದ ಮಹಾಮಹಿಮ
ಉರುತರ ನಿರಯ ಸಾಗರೋತ್ತರಣ ತರಣಿ ಶರಣ ಪ್ರಕರ ಸಮುದಂಚಿತ
ಗರಳಧರ ಶೂಲಧರ ನುತಭಕ್ತ ಬಂಧುವೇ
ದುರಿತಹರ ದುಷ್ಟಹರ ಸಾಮರ್ಥ್ಯ ಸಿಂಧುವೇ
ಗುರುವೆ ಸದ್ಗುರುವೆ ಮದ್ಗುರುವೆ ಮಹದಾನಂದ ಗುರುವೆ ನೀಂ ಕರುಣಿಸಯ್ಯಾ ೪೮

ಎಂದಿಂತು ಪಾಡುತ್ತ ಪೊಗಳುತ್ತ ನಡೆತಂದು
ಸಂದಣಿಪ ಪುಳಕತತಿ ಪೊಣ್ಮುತ್ತ ಬಲವಂದು
ನಿಂದು ನೋಡುತ್ತ ಕುಣಿವುತ್ತ ನಲಿವುತ್ತ ಕಣ್ದಣಿಯ ಮನದಣಿಯದಂತೆ
ಬಂಧುರದ ಭವದ ಬೇರಂ ಹರಿವ ತೆರದಿಂದ
ಲಂದು ಲಿಂಗಾಲಯದ ಹುಲ್ಲನುದ್ಧರಿಸುತಿರು[2]
ತ್ತಂದದಿಂದಡಿಗಡಿಗೆ ಶಿವ ಶಿವ ನಮಶ್ಶಿವಾಯಾಯೆನ್ನುತಿರುತಿರ್ದನು ೪೯

---

೧ ವಾ (ಹ) ೨ ರು (ಜ)

ಮುನ್ನಲುದ್ದಿದ ಹುಲ್ಲುಗಳಿಯೆ ಪೊಸ ಪುಲ್ಲೊಡನೆ
ರನ್ನಮುಂ ಕನಕಮುಂ ರಾಜಿಸುತ್ತಂ ಬೆಳೆಯು
ಲಿನ್ನು ವಾಗೀಶಂಗೆ ಹೊನ್ನುವುಂ ಮಣ್ಣನುಂ ಸರಿಯಾದುದೇನೆಂಬೆನು
ರನ್ನಮುಂ ಕಲ್ಲನುಂ ತನ್ನೊಳಗೆ ಸರಿಯಾಗೆ
ಸನ್ನಿಯಿಲ್ಲದೆ ಹೊನ್ನುರನ್ನಮಂ ರಜದೊಡನೆ
ಭಿನ್ನವಿಲ್ಲದೆ ಗೂಡೆಯೊಳಗಿಕ್ಕಿ ಹೊರಚೆಲ್ಲುತಿರ್ದನದನೇವೇಳ್ವೆನು ೫೦

ಈ ತೆರದೊಳಿರಲೊಂದು ದಿವಸಪೂರ್ವಂ ಬಂದು
ನೂತನದ ಚೆಂಗಣಗಿಲೆಗಳ ಹುವ್ವಂ ತಂದು
ಭೂತೇಶನಾದ ಎಲೆಯಾಂಡ ಲಿಂಗಕ್ಕೆ ಧರಿಸೆಂದಾತನೀತಗೀಯೆ
ಓತದಂ ಕೈಕೊಂಡು ವಾಗೀಶನಾಗಳ
ತ್ಯಾತುರದಿ ಮಿಂದು ಪೂಮಾಲೆಯಂ ಕಟ್ಟುತ್ತ
ಸಾತಿಶಯದಿಂದೆ ಲಿಂಗಕ್ಕೆ ಮಾಲೆಯನಿಕ್ಕುವನಿತರೊಳ್ನಾನಾಗಳು ೫೧

ತಲ್ಲಿಂಗದಲ್ಲಿ ಕರಮಂ ನೆಗಪಿ ಬೇಡ ಬೇ
ಡೊಲ್ಲೆನಾಂ ಪೂಮಾಲೆಯೆನ್ನ ನೀಂ ಮುಟ್ಟಿದಿರು
ಸಲ್ಲಲಿತ ಗುರುವಿನುಪದೇಶ ನಿನಗಿಲ್ಲದುದರಿಂದೆ ನೀಂ ಮುಟ್ಟಲರಿದು
ನಿಲ್ಲೆಲೈ ವಾಗೀಶಯೆನೆ ಕೆಟ್ಟೆನಕಟಕಟ
ಸಲ್ಲದಾದೆಂ ನಾನು ನಿನಗೆ ಮತ್ತೆಲೆ ದೇವ
ಎಲ್ಲಿರ್ಪೆನೆತ್ತಪೋಗಲಿ ಶಿವನೆ ಶಿವನೇಯೆನುತ್ತೆ ಪೊಗಳುತ್ತಿರ್ದನು ೫೨

ದೇವ ನೀಂಮುಟ್ಟಬೇಡೆಂದಡೆನಗೆಂತಯ್ಯ
ದೇವ ನೀನೊಲ್ಲದೊಡೆ ನಿನಗೆ ನಾನೇಕಯ್ಯ
ದೇವ ಇಂತಾದಡಾನೆಂತು ಜೀವಿಪೆನಯ್ಯ ನಾನೆಂತು ನಿಲುವೆನಯ್ಯ
ದೇವ ಕರುಣೆಗಳರಸ ನೀನಿಂತು ಗೈವರೇ
ದೇವ ದಯವಿಲ್ಲದವರಂತೆ ನೀಂ ನುಡಿವರೇ
ದೇವ ಕೇಳ್ತಾಯಿರಕ್ಕಸಿಯಾಗೆ ಶಿಶುವೆಂತು ಜೀವಿಪ್ಪುದು ಜಗದೊಳಯ್ಯ ೫೩

೧ಬೆಳಗುಕತ್ತಲೆಗರೆದಡಾನೆಂತು ಬದುಕುವೆಂ
ತಿಳಿವು ತಲೆಕೆಳಗಾದಡಾನೆಂತು ಜೀವಿಪೆಂ೧
ಚೆಲುವ ಸುರಧೇನು ಬರಡಾದಡಾನೆಂತು ನಿಲ್ಲುವೆನಯ್ಯ ವಸುಧೆಯಲ್ಲಿ
ಲಲಿತ ಸುರಕುಜ ಕೊರಡೆನಿಸಲಾನುಗೈವುದೇಂ
ಮೊಲೆವಾಲು ನಂಜಾಗಲಿತರರಿಂದಪ್ಪುದೇಂ
ಎಲೆ ದೇವ ಪರುಷವೊರೆ ಬಣ್ಣಕ್ಕೆ ಬಪ್ಪುದೇ ನೀಂ ತಿಳಿವುದಲ್ಲದುಂಟೆ ೫೪

ವಿಷವಿರ್ಪುದು ಕೊರಳೊಳದರಿಂದ ಕಷ್ಟವೇ
ವಿಷಧರಂಗಳ್ತೊಡಿಗೆಯದಕಿಂ ಕನಿಷ್ಠವೇ
ಪಶುಪತಿ ಮಹಾದೇವ ಪಾರ್ವತೀಧವ ಕಾಯ್ವುದೀಹರಣಮಂ ಶಂಕರಾ
ಅಸಮಾಕ್ಷ ನೀನೆ ಗುರು ನೀನೆಗತಿ ನೀನೆಮತಿ
ಶಶಿಮೌಳಿ ನೀನಲ್ಲದಿನ್ನುಂಟೆ ಬೇರೆ ಪತಿ
ಹಸುಳೆ ನಾಂ ಹಾಲೊಳಾದರೆಯದ್ದು ನೀರಿನೊಳಗದ್ದು ನಿನ್ನಯಧರ್ಮವು ೫೫

ಎಂದಿಂತು ನುಡಿವುತಿಹ ವಾಗೀಶನಂ ಕಾಣು
ತಂದು ನಾಂ ಸಂತಸಂದಾಳ್ದು ಕೇಳಯ್ಯ ಎಲೆ
ಕಂದ ನಿನಗೊಂದರುಪುವೆಂ ಚಿಂತಿಸಲ್ಬೇಡ ನಿನಗೆ ಗುರುವಂ ತೋರುವೆಂ
ಬಂಧುರ ಶಿವಜ್ಞಾನಿಯಲ್ಲಿಗಾಂ ಕಳುಪುವೆಂ
ಇಂದು ಈ ಪುರದೊಳಿಹ ಪಿರಿಯ ಮಾಹೇಶ್ವರರ
ಗೊಂದಣದ ಕೇರಿಯೊಳಗಾವುದಂ ಹೊದ್ದದಾನಂದಕರವೃತ್ತಿಯಲ್ಲಿ ೫೬

ನೆರೆದಿರ್ಪನಾತ ಮತ್ತಂ ಕರಿಕುಳಾಳ್ವನೆಂ
ದುರು ನಾಮದಿಂ ಕರಿಸಿಕೊಳುತಿರ್ಪನಾತನೇ
ಗುರು ನಿನಗೆ ತಾನಾಗಲೋಸುಗಂ ಪೊರಕೇರಿಯಲ್ಲಿರ್ಪನಾತಗಿಂದು
ಶರಣೆನ್ನು ಕರುಣಮಂ ಪಡೆ ನಿನಗೆ ಗುರುವಾತ
ತ್ವರಿತದಿಂ ಪೋಗೆನಲ್ಕಾಗ ವಾಗೀಶಂಗೆ
ಹರಣವಾಬಂ ಬಂದಂತೆ ರಾಗದಿಂ ಬೇಗದಿಂದೆದ್ದು ಕೈಮುಗಿದು ನಿಂದು ೫೭

---

೧ X (ಹ)

ದೇವಾ ಬಳಿಕ ನಿನ್ನನುಂ ಮುಟ್ಟಬಪ್ಪುದೇ
ದೇವಾ ಬಳಿಕ ನಿನ್ನನರ್ಚಿಸಲ್ಕಪ್ಪುದೇ
ಪಾವುದೆನ್ನಂಯೆಂದು ಬಿನ್ನೈಸಿ ಬೀಳ್ಕೊಂಡು ಮೈಯಿಕ್ಕಿ ಕೈಮುಗಿಯುತ
ಏವೇಳ್ವೆ ವಾಗೀಶನತ್ತ ಪೋಗಲ್ಕಿತ್ತ
ಊ[ವೊ]ರಗ ಕೇರಿಯೊಳಗೊಂದು ಗುಡಸಿಲೊಳಗಿದ್ದು
ಹೇವರಿಪ ವೇಷದಿಂದಿರುತಿರಲ್ಕಲ್ಲಿಗೈತಂದನಾ ವಾಗೀಶನು ೫೮

ಬಂದು ಮೈಯಿಕ್ಕಿ ಪಟ್ಟಿರ್ದು ಕರುಣಿಸು ದೇವ
ಇಂದುಧರ ಕರುಣಿಸೈ ಕರುಣಿಸೈ ಗುರುದೇವ
ಬಂಧುರ ಭವಾಬ್ಧಿಯೊಳು ಮುಳುಗಿರ್ದ ಮೂರ್ಖಂಗೆ ನಿಮ್ಮನರಿಯದ ಮೂಢಗೆ
ಮುಂದುಗೆಟ್ಟರಿವುಗೆಟ್ಟುರುಳುವ ಮದಾಂಧಂಗೆ
ಇಂದು ಮದ ಮತ್ಸರದ ಬೇಗೆಯೊಳು ಬೆಂದಂಗೆ
ಬಂದೆ ನೀಂ ಕರುಣಿಸೆನುತಾತನೆನ್ನಂ ನುತಿಸಲಾನು ಸಂತಸದಿಂದಲೀ ೫೯

ಕರದು ವಾಗೀಶನಂ ಕುಳ್ಳಿರಿಸಿ ಮೈದಡವಿ
ಪರ ಭಸಿತಮುಮನಿಟ್ಟು ಲಿಂಗದ ವಿಚಾರಮಂ
ಪರಿಶೋಭಿಪಂತೊರೆದು ಹೃದಯದೊಳಗಿಂಬಿಟ್ಟು ಮಸ್ತಕದಿ ಕರವನಿಟ್ಟು
ಕುಣಿಸುತ ಕಳುಹಲಾತಂ ಸಂತಸಂ ದಾಳ್ದು
ಪರಮ ಲಿಂಗಾಲಯಕ್ಕೈತಂದು ಪೂಜೆಯಂ
ವಿರಚಿಸುತ್ತಿರೆ ದೇವವೊದಗಿದೆಂ ನಿಮ್ಮಡಿಗೆ ಪುಣ್ಯದಿಂದಂ ಪುರಹರಾ ೬೦

ಜೀವ ಘನಂ ಮಾಡೆ ಘನವಾದೆನೀಶ್ವರಾ
ಭುವನಯುತಿಮೆಲ್ಲರಿದುದೆನ್ನನೆಲೆ ಶಶಿಧರಾ
ಆವುದಕ್ಕಂ ಕೊರತೆಯಿಲ್ಲದಂತಂ ಗೈದೆಯಿನ್ನೊಂದ ಕರುಣಿಸಯ್ಯಾ
ದೇವ ಭಕ್ತರ್ಗೇನನೀಶ್ವೆಶಿನೆಲೆ ಪಶುಪತಿಯೆ
ಜೀವಿದಂ ಕರುಣಿಸುವುದೆನಗೆ ಗಿರಿಜಾಪತಿಯೆ
ಪಾವುದೆನ್ನಂ ನೀನು ಕಾಲಪೃಷ್ಠಾರಾತಿ ಕಂಕಪತ್ರ ಪ್ರದಾತ ೬೧

---

೧ ಪು (ಹ, ಜ) ೨ ದೆ (ಹ) ೩ ವ (ಹ)

ಎಂದು ಬಿನ್ನೈಸೆ ನಾನಲ್ಲಿ ಕರುಣಿಸಿ ನೋಡು
ತಂದು ತವನಿಧಿಯನಾಂತಂಗೀಯಲದರಿಂದೆ
ಬಂದ ಭಕ್ತಾವಳಿಗಳಿಷ್ಟಾರ್ಥಮಂ ಸಲಿಸುತುರುದಾನಿಯೆಂದೆನಿಸುತೆ
ಅಂದವರು ನೆನೆದುದಂ ನೆನೆಯುದುದನೀಯಲ್ಕೆ
ಸಂದಿತ್ತು ಕೀರ್ತಿಯು ದಿಗಂತದೊಳಗನಿತರೊಳು
ಬಂದರ್ಶಿವಜ್ಞಾನರಲ್ಲಿಗಾ ವಾಗೀಶನಂ ನೋಡುವರ್ತಿಯಿಂದೇ ೬೨

ಬರೆ ಕಂಡು ವಾಗೀಶನಿದಿರೆದ್ದು ಮೈಯಿಕ್ಕಿ
ಹರಪುತ್ರನೀತನೆಂದೆನುತೆ ಸಂತಸವುಕ್ಕಿ
ಚರಣದೊಳು ಬಿದ್ದು ತರ್ಕೈಸುತ್ತೆ ತಣಿವುತ್ತೆ ಕುಣಿವುತ್ತೆ ಮಣಿವುತ್ತಲೀ
ಪರಮ ಲಿಂಗಾಲಯದೊಳಂದಾಸನವನಿತ್ತು
ಸರಸ ಶಿವಗೋಷ್ಠಿಯಂ ರಸನೆಯಿಂದಂ ಪೊತ್ತು
ಇರುತಿರಲ್ಪಿಳ್ಳೆಯರ ನಾಯನಾರೊಲವಿಂದೆ ಕೇಳ್ದರಾ ವಾಗೀಶನಂ ೬೩

ಇಂದಿಂಗೆ ಹರೆಯುವೆನಿತಿಹುದು ವಾಗೀಶರೇ
ಒಂದೆರಡು ಬರಿಸವಿರ್ದಪ್ಪುದು ಶತವರುಷದವ
ರಂದದಿಂ ತೋರುತಿದೆ ಭಕ್ತರೊಳು ಪುಸಿಒಕೃತನವಿರ್ದಪ್ಪುದೆ ಪೇಳೆನಲ್ಕೆ
ಅಂದು ಶಿವನರಿಯದ ದಿನಂ ಪೊರದಿವಸವಯ್ಯ
ಅಂದು ಶಿವಗೆರಗದ ದಿನಂ ಬಂಜೆ ದಿನವಯ್ಯ
ಅಂದು ಶಿವನಂ ನುತಿಸದರ್ಚಿಸದ ದಿವಸವೆಲ್ಲಂ ಸತ್ತದಿವಸವಯ್ಯ ೬೪

ಆ ದಿನಂ ಕೊಂಡೇನು ಫಲವಯ್ಯ ಮತ್ತೀಗ
ಮಾದೇವನಡಿಗಳಂ ಪೊಂದಿದ ದಿನವೆ ದಿನಂ
ಸಾದರದೊಳಿಂತೆನಲು ಪಿಳ್ಳೆಯರು ವಾಗೀಶನಂ ತೆಗೆದು ತರ್ಕೈಸುತೆ
ಆದೇವನುರುಕರುಣವಿಂತೊದಗಿತೇ ನಿಮಗೆ
ಮೋದವಾದುದು ನಮಗೆ ಇನ್ನಡೆಯಿರೈ ನೋಡುವೆವು
ಮೇದಿನಿಯೊಳಿಪ್ಪ ಲಿಂಗಂಗಳೆನುತೀರ್ವ್ವರುಂ ನಡೆದರತ್ಯುತ್ಸವದಲೀ ೬೫

---

೧ ಥಂ (ಹ) ೨ X (ಹ) ೩ ನು (ಹ)

ಅಲ್ಲಲ್ಲಿ ಚರಿಸಿ ಶಿವಲಿಂಗಂಗಳಂ ನೋಡುತ್ತ
ಲ್ಲಲ್ಲಿ ಪಾಡುತಿಕ್ಕಿದ ಕದವ ತೆರೆಸುತ್ತ
ಸಲ್ಲಲಿತ ಪೊನ್ನಂಬಲಂ ಮೊದಲ್ಗೊಂಡು ದಿವ್ಯಕ್ಷೇತ್ರಗಳನೀಕ್ಷಿಸಿ
ಉಲ್ಲಾಸದಿಂ ಪಾಂಡ್ಯದೇಶಕ್ಕೆ ಬರುಬರು
ತ್ತಲ್ಲಿ ಪಿಳ್ಳೆಯ ನಾಯನಾರ್ಪೊಗೆ ತಾನಿತ್ತ
ಬಲ್ಲಿದಂ ವಾಗೀಶನೆನಿಸಿ ಮಹಿಮೆಯ ನಟಿಸಿ ಕೆಲವು ದಿನವಿಂತು ಚರಿಸಿ* ೬೩

ಇನ್ನೇಶಕೇವೊಡಲ ದುರ್ಮೋಹವಿದನೊಲ್ಲೆ
ನೆನ್ನುತ್ತೆ ವಾಗೀಶದೇವ ತಿರುಪಗಲೂರ್ಗೆ
ಸನ್ನಯಿಂ ಬಂದು ಲಿಂಗಾಲಯದ ರಂಗಮಂಟಪದಿ ಕುಳ್ಳಿರ್ದು ನಲಿದು
ಎನ್ನಯ್ಯ ಎನ್ನಗುರುಯೆನ್ನ ಸುರಧೇನುವೇ
ಎನ್ನರಸಯೆನ್ನೊಡೆಯ ಎನ್ನ ಸುಜ್ಞಾನವೇ
ಎನ್ನ ಪರುಷದ ಕಣಿಯೆಯೆನ್ನ ಚಿಂತಾಮಣಿಯೆಯೆನ್ನ ರಕ್ಷಿಸುವ ಗುಣಿಯೆ ೬೭

ದೇವಾ ಹಿರಿಯತನಂ ಸಾಲ್ಗುಯಿನ್ನೆನಗಭವ
ದೇವಾ ಮಹಾಧಿಕ್ಯದಿಂದೆ ಕಂದಿದೆನಭವ
ದೇವಾ ಬರಿಯ ಸಡಗರದ ಸಂಭ್ರಮಂ ಸಾಲ್ಗು ಸಾಲ್ಗೀ ದುರಾಸೆಯಿಂದು
ದೇವಾ ಈ ದೇಹಮಂ ಮಾಣಿಸಲೆ ಶಂಕರಾ
ದೇವಾ ನಿಜಕಾಯದೊಳು ಕೂಡಿಕೊಳ್ಳಹಿಧರಾ
ದೇವ ದೇವೇಶಯೆನಲಾನು ವಾಗೀಶನಂ ತನುವೆರಸಿ ಬಾಯೆನಲ್ಕೆ ೬೮

ನರ ಚರ್ಮ ಎಲುರೋಮ ಮಾಂಸದಿಂ ಪುದಿದಿರ್ದ[1]
ಪರಿಪರಿಯ [2]ನರಕ[3] ಕ್ರಿಮಿಗಳಿಂದೆ ಪುದಿದಿರ್ದ
ಉರುತರದ ಕಾಮಾದಿ ದುಷ್ಟಷಡ್ವರ್ಗಂಗಳಿಂದೆ ಪುದಿದಿರ್ದು ಮತ್ತೆ
ಧರಣಿ ಸಲಿಲಾಗ್ನಿ ಭೂತಂಗಳಿಂ ಬೆರಸಿರ್ದ
ಶರಿರ ಸಹವೆಂತು ಪೊಗುವೆ ದೇವ ನಿಮ್ಮೊಳಗೆ
ಪರಮಾಮೃತದೊಳು ಕೆಸರಂ ಬೆರಸಲಾರ್ಪನೇ ಪುಣ್ಯತನುವೆನಗೀವುದೈ ೬೯

---

* ೬೬ನೆಯ ಪದ್ಯ 'ಹ' ಪ್ರತಿಯಲ್ಲಿಲ್ಲ. ಅದಕ್ಕಾಗಿ ಸ್ಥಳ ಖಾಲಿಬಿಟ್ಟಿದೆ.
೧ ರ್ದ (ಹ) ೨ ನಖ (ಹ) ೩ ರ್ದ (ಹ)

ಎನುತೆನುತ್ತಲ್ಲಿಯಾತನ ದೇಹಮಂ ಕರಗೆ
ಘನಲಿಂಗದಲ್ಲಿ ನಾನಲ್ಲಿಯೇ ತೊಳತೊಳಗೆ
ವಿನುತ ದಶಭುಜಗಳಿಂ ಪಂಚಮುಖದಿಂ ದಿವ್ಯ ನಿಜರೂಪದಿಂದಿರ್ದನು
ತನುವಿಲ್ಲ ವಾಗೀಶನಿರ್ದನಾ ಪ್ರೊತ್ತಿನೊಳು
ಮನವಿಲ್ಲ ನಿರವಯುವದಿಂದಿರ್ದನಾಗಳುಂ
ಇನಿತಿರ್ದ ವಾಗೀಶನಂ ಕಂಡು ನಾನಲ್ಲಿ ತಲೆದೂಗುತಿರುತಿರ್ದನು ೭೦

ಅಂದೊಂದು ನಿರ್ಮಲ ತನುವನಲ್ಲಿ ಕರುಣಿಸಲು
ಮುಂದೆ ವಾಗೀಶನಂ ಪೊಗಳುತ್ತೆ ರೂಪಿಸಲು
ಗಂಧದಿಂ ಮಘಮಘಿಪ ಪೂಮಳೆ ಸುರಿದುದಲ್ಲಿ ಮೊಳಗಿದುವು ದುಂದುಭಿಗಳು
ನಂದೀಶ ವೀರೇಶ ತಾರಕಾರಾತಿಗಣ
ವೃಂದವೆಲ್ಲ ಪುಷ್ಪಕವನೊಲಿದುಕೊಂಡುಬರೆ
ಚಂದದಿಂ ವಾಗೀಶನಂ ಪ್ರಿಯದೊಳಪ್ಪುತ್ತೆ ಪುಷ್ಪಕದಿ ಕುಳ್ಳಿರಿಸುತೆ ೭೧

ನೆರೆದ ಗಣವಿಸರದಿಂದಾನು ಕೈಲಾಸಮಂ
ಭರದಿಂದೆ ಪೊಕ್ಕು ವಾಗೀಶಂಗೆ ಗಣಪದವ
ಸರಸದಿಂದಿತ್ತೆನ್ನೆ ಸೌಂದರಾಧಿಪ ಕೇಳು ಮತ್ತೀಶರಣನಂಘ್ರಿಯಂ
ನೆರೆ ಪೊಗಳು ವಾಗೀಶನೆನ್ನಯ್ಯನೆಂದು ನುಡಿ
ಕರಕಮಳಮಂ ಮುಗಿ ಮಹಾಭಕ್ತಿಯಿಂ ಕೇಳು
ಪರಮಗಣವರರನಂತಿಂತೆಂದು ಪೇಳಲೆನ್ನಳವಲ್ಲ ಕೇಳು ನಂಬಿ ೭೨

ಅಂತು ಸಂಧಿ ೧೫ ಕ್ಕಂ ಪದಗಳು ೭೫೪ ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

# ಸಂಧಿ : ೧೬

ಸೂಚನೆ :

ಕಾರಿಕಾಲಮ್ಮೆ ಮೊನೆಯಿಡುವ ಶಿವಪದಭಕ್ತಿ
ವೀರಗಾನಂಹ ಕಳಚಂಗ ಪೇರ್ಮಾಳಿಯು ಮತ್ತಮಾ
ಸಾರಸದ್ಗುಣದ ಚಿರುತೊಣೆಯಾಂಡರಿತಿಹಾಸಮಂ ನಂಬಿ ಕೇಳ್ದನೊಲಿದು

ಧರೆಗೆಸೆವ ಚೋಳದೇಶದೊಳೊಂದು ಸುಖಕರಂ
ಕರವೊಪ್ಪಿದುದು ಕಾರಿಕಾಲೆಂಬ ಶಿವಪುರಂ
ಪರಿಶೋಭಿಸುತ್ತಿರ್ದಳಾ ಪುರದೊಳೊರ್ವಳು ಶಿವಜ್ಞಾನಸಂಪನ್ನೆಯು
ನೆರೆ ಕಾರಿಕಾಲಮ್ಮೆಯೆಂಬುವಭಿದಾನದಿಂ
ದಿರುತಿರ್ದಳಾ ನೀರೆಯೆನಗತಿಪ್ರೀತಿಕರೆ
ಪರಮ ಮಾಣಿಕಸೆಟ್ಟಿಯೆಂಬ ಧನದಂಗೆ ಸತಿಯಾಗಿ ಸಮಸುಖದೊಳಿರುತೆ ೧

---

೧ ರ (ಹ)

ಅತ್ತೆ ಮಾವಂ ಗಂಡರರಿಯರಾ ಭಕ್ತಿಯಂ
ಮತ್ತೆ ಮನೆಯೊಳಗಿರ್ದರರಿಯರಾ ಭಕ್ತಿಯು
ತತ್ತರುಣಿ ಪಾಕಮಂ ಮಾಡುವೆಡೆಯೆನ್ನರ್ಚನಸ್ಥಳಮದೇನೆಂಬೆನು
ಉತ್ತಮಾಂಗನೆಯಳ ಕರಸ್ಥಳಮದಾಸನಂ
ನಿತ್ಯದಿಂದಾಕೆ ನೆನೆವುದೆಯೆನ್ನ ಸಕಲಸು೧ತಿ
ಅತ್ಯಧಿಕಳೆನಿಸುವಾ ಸುದತಿಯಳ ಮನದ ನಿರ್ಮಳವಗ್ಗವಣೆಯುಯೆನಗೆ ೨

ಕರದ ೨ರೇಖೆಯು ಪರಿಮಳದ ಪುಷ್ಪಪೈಯೆನಗೆ
ಕರವೆಸೆವ ಸುಯಿಗುಂಪು ಧೂಪವಾಯಿತ್ತೆನಗೆ
ನೆರೆ ನೋಟವೇ ಬೆಳಗುವಾರತಿಗಳೈಯೆನಗೆ ತಾನುಂಬುದೆನ್ನೂಟವೂ
ಪರಮಪಾವನೆ ಗುಪ್ತಮಾಹೇಶ್ವರಿಯಳಿಂತು
ವರಭಕ್ತಿಯಂ ಪೆರ್ಚಿಸುತ್ತಿಹಳು ಮನದಲ್ಲಿ
ಪರರಿಂಗಿನಿತು ತೋರದಂತೆ ಜನಕಂಜುತ್ತ ಪತಿಭಕ್ತಿಯಿಂದಿರ್ದಳು ೩

ಶಿವಲೋಕವೇ ಹುಟ್ಟಿದೂರೆಂದು ಭಾವಿಪಳು
ಶಿವಶಿವೆಯರೈದೆ ಪಡೆದವರೆಂದು ಭಾವಿಪಳು
ನವವಿನುತ ಕೈಲಾಸಮಂದಿರವೆ ತನ್ನಯ ತವರ್ಮನೆಯೆನುತ್ತಿರುವಳು
ತವಕದಿಂದಾಸರಂ ಬೇಸರೆನಗರುಪುವಳು
ಜವದಿ ತನಗಾದ ಸಂಕಟವಗ೩ಜೆಗುಸುರುವ೪ಳು
ಸುವಿವೇಕದಿಂ ಗಣಪವೀರೇಶ ಗುಹರು ಸೋದರರೆನುತೆ ನೆನೆವುತಿಹಳು ೪

ಮನದೊಳಗೆ ಮನ್ನಿಸುವಳರ್ಚಿಸುವಳಾಡುವಳು
ಮನದೊಳಗೆ ನೋಡುವಳು ಮನದೊಳಗೆ ಆಹಾಳಡುವಳು
ಮನದೊಳಗೆಯೆನ್ನ ಮಹಾತ್ಮ್ಯಗಳನರಿವುತ್ತೆ ಬಿನ್ನಪಂಗೈವುತ್ತಲೀ
ಮನದೊಳಗೆ ಸಂಸಾರದಿರವಿಂಗೆ ಹೇಸುವಳು
ಅನವರತ ಪರಮ ಚಿಂತಾಮೌನಿಯೆನಿಸುವಳು
ಅನಸೂಯ ಭಕ್ತಿಯಭಿಮಾನಿ ಲಿಂಗಧ್ಯಾನಿ ವೈರಾಗ್ಯ ಸನ್ನಿಧಾನಿ ೫

---

೧ ಡಿ (ಹ) ೨ ಕಿರೆ (ಹ) ೩ ಜಿಗುಜಿಸುವ (ಹ) ೪ ಆ (ಹ)

ಇಂತು ಗುಪ್ತಾರಾಧನಾನಂದೆಯಿಪ್ಪುದಂ
ಅಂತಿಂತುಮೆಂದುವಣ್ಣಿಸಲಾರೆ ನಾನದಂ
ಎಂತಾದಡೀ ಭಕ್ತಿಯಂ ಪ್ರಕಟಿಸುವೆನೆಂದು ಸಾಧುವೇಷವನೆ ತಳೆದು
ನಾಂ ತವಕದಿಂದಕಾಲದ ಜೂತ ಫಲಗಳಂ
ಸಂತಸದಿ ಕಾಣಿಕೆಯನಿತ್ತು ಮಾಣಿಕಸೆಟ್ಟಿ
ಗಂತಾತನೀಕ್ಷಿಸುತ್ತಿಮುದಂದಾಳುತ್ತಲುಡುಗೊರೆಯನಿತ್ತನೆನಗೇ ೬

ಅತ್ತಲಾತಂ ಕಾರಿಕಾಲಮ್ಮೆಗಳ ಕೈಯೊ
ಳಿತ್ತನಾ ಫಲಗಳಂ ಬೈಚಿಡೆಂದುಸುರುತ್ತ
ಲತ್ತ ವ್ಯವಹಾರದಿಂ ಪೋಗಲಿತ್ತಂ ಅಮ್ಮೆಯನೋಡುತಾ ಫಲಗಳಂ
ಅತ್ಯಧಿಕವತ್ಯಪೂರ್ವಕಕಾಲಫಲಗಳಿವು
ಮತ್ತಾಶಿವಂಗೆ ಶಿವಭಕ್ತಂಗೆ ಯೋಗ್ಯಮಿವು
ಮತ್ತಾಧಮಾಜ್ಞಾನ ಮರ್ತ್ಯಂಗಯೋಗ್ಯಮಿವುಯೆಂದೆನುತೆ ಬೈಚಿಡುತ್ತೆ ೭

ಇರಲನಿತರೊಳಗಾನು ಮತ್ತೊಂದು ತಪಸಿಗಳ
ವರವೇಷಮಂ ತಾಳ್ದು ಪೋಗಿ ನಿಲ್ಲಲ್ಕಾಕೆ
ನೆರೆಕಂಡು ಈಯೆಡೆಗೆ ಬಂದ ಪರಿಯೆಂತಯ್ಯ ಭವಿಗಳಾಲಯವಿದಯ್ಯ
ಸರಸತವಪದಭಕ್ತರಿಲ್ಲಿಯುಂಟೇಯೆನಲು
ಪರಮ ಭಕ್ತರ್ಕಳೆಂದರಿಯೆವಾರೆಂದರಿಯೆ
ಪರಿಯುದವರಾವು ಎಲೆ ತಾಯೆ ಇನಿತೋಗರವನಿಕ್ಕಲಾಂ ಪೋಪೆನೆನಲು ೮

ಕನಿಕರಿಂ ಕಾರಿಕಾಲಮ್ಮೆ ನುಡಿದಳು ಭಕ್ತಿ
ಮನದ ಗರ್ಭಿಣಿ ಜಿಂಪ್ವೆಯಿಂದೆ ಬೆಸಲಪ್ಪಂತೆ
ತನುವಿಡಿದ ಭಕ್ತಿಯಿಂದಂಜುತ್ತಲಾವುವುಂ ಕಾಣದಾರೋಗಿಪುದೆಲ್ಲೈ
ಮನೆಯುವರ್ಕಾಣದಂತಾರೋಗಿಸ್ವೈ ದೇವ
ಜನರಿಂಗೆ ಭಕ್ತಿಯಂ ಪ್ರಕಟಿಸದಿರೆಲೆ ದೇವ
ಎನುತೆ ತನಿವಣ್ಣಿರಡರೊಳಗೊಂದನಿತ್ತಳೈಯಾರೋಗಿಸ್ವೈಯೆನುತ್ತೆ ೯

ನಲಿದಿತ್ತ ಪಣ್ಣನಾರೋಗಿಸುವ ಸಮಯದೊಳು
ಘಳಿಲನಾಕೆಯ ಗಂಡ ಬಂದನಾಹೊತ್ತಿನೊಳು
ಬಲುಬಗೆಯಲಾತನರಿಯದ ತೆರದಿ ಸಂದೇಹಿಸುವ ತೆರದಿ ನಾಂ ಪೋದೆನು
ಲಲನೆಯಾಸೆಟ್ಟಿಗೆಡೆಮಾಡುತ್ತ ನಿಂದಿರಲು
ಚಲುವ ಹಣ್ಣುಗಳವೆಲ್ಲಿಹವಿತ್ತ ತಾಯೆನಲು
ಜಲಜಾಕ್ಷಿಯಂಜುತ್ತಲುಳಿದ ಪಣ್ಣೊಂದೀಯಲಿನ್ನೊಂದು ತಾಯೆನಲ್ಕೆ ೧೦

ಹರಣಮಂ ಕೈಯೊಡನೆ ಬೆರಸಿ ಕೈಯಿಕ್ಕಿದಳು
ನೆರೆ ಪಣ್ಗಳಂ ತಾನು ಮಡಗಿರ್ದ ತಾಣದೊಳು
ಭರದಿಂದಲಂಜುತ್ತ ನಾನಲ್ಲಿಜುಮೃತ ಫಲಮನ್ನೊಲಿವುತಿರಿಸಿರ್ದೆನು
ತರುಣಿಮಣಿಯಾಪಣ್ಣನೀಕ್ಷಿಸುತ್ತೈದೆ ತಾಂ
ಪರಮ ಹರುಷಂ ತಾಳ್ದು ತಂದೀಯಲಿನಿಯಂಗೆ
ಸರಸದಿಂದಾತನಾ ಪಣ್ಣನಂ ಕೌತುಕಂಗೊಂಡು ನೋಡುತ್ತಿರ್ದನು ೧೧

ಮುಟ್ಟಲುಂ ರೋಮಾಂಚನಗಳು ಗುಡಿಗಟ್ಟುತಿರೆ
ನಿಟ್ಟಿಸಲು ಕಂಗಳಿಗೆ ಸವಿಗಳಂ ಸೂಸುತಿರೆ
ನೆಟ್ಟನೀ ಪಣ್ಣನೆಲ್ಲಿಯುದುಸುರುಗುಸುರುಗ ಮಾಜದಿರು ಮಹಾಕಾರಣಿಕಳೆ
ಥಟ್ಟನಾಂ ಪಿಡಿಯಲಂಜುವೆನಿದಂ ಶಿವನಿಂದೆ
ಪುಟ್ಟಿದ ಫಲವಿದಲ್ಲದಿಲ್ಲೀ ನೆಲದೊಳೆಂದು
ಸೆಟ್ಟಿ ತನ್ನಂಗನೆಯು ಬೆಸಗೊಳಲ್ಕಿದನುಸುರದಿರಬಾರದೆಂದರಿದಳು ೧೨

ಶಿವಭಕ್ತನೊರ್ವನಾನಂದದಿಂದಂ ಬರಲು
ತವೆ ಪಣ್ಣನೊಂದನಾನಾ ಭಕ್ತಗಿತ್ತಿರಲು
ತವಕದಿಂದಾ ಪಣ್ಣನಂ ನೀವು ತಾರೆನಲ್ಕಾಗ್ರಹರನಿತ್ತನಿದನು
ಭುವಿಗತಿ ವಿಚಿತ್ರಮೆನೆ ಶಿವನಿತ್ತ ಪಣ್ಣಿದಂ
ವಿವರಿಸುವದೇನೆನಲ್ಕೆಟ್ಟಿ ನಡನಡುಗಿದಂ
ಯುವತಿಯಂ ತನ್ನ ಸತಿಯೆಂಬ ಭಾವವನುಡುಗಿದಂ ನಂಬುಗೆಯನಾಂತನು ೧೩

೧ X (ಹ)

ಮುನ್ನವೇ ಸಂದೇಹಿಸುತ್ತಿರ್ದೆನೆಲೆ ತಾಯೆ
ಇನ್ನೆನ್ನ ಸತಿಯೆಂದು ನುಡಿಯೆಂ ಮಹಾಮಾಯೆ
ನನ್ನಿಯಿಂ ಶಿವನಿಂತು ಕರುಣಿಸಲ್ಕಿಳೆಯೊಳಗೆಯಿಂತಪ್ಪ ಸತಿಯರುಂಟೆ
ಪಣ್ಣನೀವೇ ಕೊಂಬುದೀಹಣ್ಣದೆನಗರಿದು
ಚಣ್ಣನೆನ್ನಂ ರಕ್ಷಿಸುವುದೆ ನಿನ್ನಯ ಬಿರುದು
ಎನ್ನನುಂ ಪತಿಯೆಂದು ನುಡಿಯದಿರಿ ಮನದೊಳಿನ್ನರಿಯದಿರಿ ಮರೆದಾದರು ೧೪

ಇನಿತು ದಿವಸಂ ನಿಮ್ಮನಂತಿಂತು ನುಡಿಂದುದಂಕೆ
ಇನಿತು ಕಾಲದೊಳುದಾಸೀನಮಂ ಮಾಡಿತಕೆ
ಘನವಾಗಿ ಕರುಣಿಪುದು ಕಾವುದಿಂದೆನ್ನುವಂ ಕಾರಿಕಾಲಮ್ಮೆ ನೀವು
ಎನಗಿನ್ನು ನೀವೇ ಗುರುಸ್ಥಾನವೆಲೆ ತಾಯೆ
ಎನಗಾದ ಭವಬಂಧವನ್ನುಡುಗಿಸೆಲೆ ತಾಯೆ
ಎನಗೀಗಳುಪದೇಶಮಂ ಕೊಟ್ಟು ಕಾವುದೆಂದಾತ ಮೈಯಿಕ್ಕಿರ್ದನು ೧೫

ಕಂಡು ಶಿವಭಕ್ತಿಯಭಿಮಾನಿ ನೆರೆ ಕಂದಿದಳು
ಗಂಡನಿಂತರಿದನಿನ್ನೇನೆಂದು ಕೊರಗಿದಳು
ಖಂಡೇಂದು ಮೌಳಿಯೇ ಭಕ್ತಿಯಂ ನೀನಿಂತು ಗಾರುಮಾಡುವರೆ ತಂದೆ
ಚಂಡಿಕಾಧವ ಭಕ್ತಿಯಂ ಸೂಸಿದೈತಂದೆ
ಹಿಂಡುಜನಕರರಿಶಿವ ತೆರ ಭಕ್ತಿಯಾಯಿತು ತಂದೆ
ಮಂಡಿತ ಮಹಾಮಹಿಮ ಶಿವಶಿವ ಮಹಾದೇವಯೆನುತಾಳೋಚಿಸುತ್ತೆ ೧೬

ಮಂದಿರ್ದ ಸೆಟ್ಟಿಯುಗುರ್ಪದೇಶಮಂ ಮಾಡಿ
ಅಂದು ನಾನಿತ್ತ ಪ್ರಸಾದ ಫಲಮಂ ಕೊಂಡು
ಇಂದೆನ್ನುವಂ ಜಗಕ್ಕಭವಳ[ದೋರಿದ]ಳನಿನ್ನಿರಲ್ಬಾರದೆಂದರಿವುತೆ
ಸಂದೇಹವಿನ್ನೇಕೆನುತ್ತೆ ಭಸಿತಂ ಪೂಸಿ
ಚಂದದಿಂ ರುದ್ರಾಕ್ಷೆಯಂ ತಳೆದು ವೈರಾಗ್ಯ
ಮಂ ಧರಿಸಿ ಕಲಿಯೇರಿಮೀರಿ ಕೈಲಾಸಕ್ಕೆ ನಡೆವಳತ್ಯುತ್ಸವದಲಿ ೧೭

---

೧ ಯಿತ (ಜ) ೨ ಗಿತ್ತ (ಹ) ೩ ರುಲಿ (ಹ) ೪ ದೂರಿದ (ಜ, ಹ)

ಪೊರಮಟ್ಟಳಮ್ಮಮ್ಮ ಪುರಜನಂ ನೋಡುತಿರೆ
ಪೊರಮಟ್ಟಳಲ್ಲಲ್ಲಿ ಬಂಧುಗಳ್ಮರುಗುತಿರೆ
ಪುರದ ಪರಮ ಶ್ರೀಯುವಿರದೆ ಪೊಸಮಡುವಂತೆ ಪುರದ ಪುಣ್ಯಂ ಪೋಪೊಲು
ತೆರಳಿದಳು ಬಿಸಿಲನರಿಯದ ರಮಣಿ ಮೆಲ್ಲಡಿಯ
ನೆರೆಯಿಡುತ್ತುತ್ತರದಿಶಾಭಿಮುಖಿಯಾಗುತ್ತ
ಸರಸರನೆ ಬರುತಿರ್ದಳಾ ಕಾರಿಕಾಲಮ್ಮ ಅಂದಿರ್ದನಾದಿ ಬ್ರಹ್ಮ ೧೮

ಪಾಪವುಳ್ಳರ್ಗೆ ಸಿಂಗರದಂತೆ ತೋರುತಂ
ಪಾಪವಿಲ್ಲದ ಜನಕೆ ತಾಯಂತೆ ತೋರುತಂ
ಪಾಪವೇ ರೂಪವೆಸಿಸುವ ದೇಹದಾಸೆಯಂ ತೊರೆದು ಭರದಿಂ ಬರುತಿರೆ
ದೀಪಿಸುವ ಮಲ್ಲಿಗಗೆ ಭಕ್ತಿಯೊದಗಿದತೆಱದಿ
ಆ ಪರಮ ಶಶಿಕಳೆಗೆ ನಿಷ್ಠೆಯೊದಗಿದತೆರದಿ
ರೂಪವತಿಯುಹಕಾರಿಕಾಲಮ್ಮ ಬರುತಿರ್ದಳೇನೆಂಬೆನೆಲೆ ಸೌಂದರ ೧೯

ಎಳೆಯಶೋಕೆಯ ತಳಿರನುಗುಳ್ವ ಪದತಳದೊಳಗೆ
ಬೆಳೆದು ಪ್ರದಕ್ಷಿಣಂ ನಳನಳಿಸಿ ತೊಳತೊಳಗೆ
ಚೆಲುವ ಕಾವನ ಡೊಣೆಗೆ ತೊಣೆ ಜಂಗೆಯವು ರಜತಗಿರಿಗೊಯ್ವ ನೆರವಿಗಳೆನೆ
ಲಲಿತ ಕದಳಿಯನೇಳಿಸಿಪ್ಪೂರುದಂಡಮುಂ
ಬಿಲವಾಸಭೂಷನ ನಮಸ್ಕಾರ ದಂಡವನೆ
ವಿಳಸಿತ ನಗೋಪಮ ನಿತಂಬ ವೃತ್ತಮದಾಸನಸ್ಥಳ ವೃತ್ತಮೆನಲು ೨೦

ಸರಸಿಯಂ ಪಳಿಕೈವ ನಾಭೀವಲಯವಲ್ಲಿ
ಹರಭಕ್ತಿರಸದ ಮಡುವಿನ ತೆರದೊಳಿರಲಲ್ಲಿ
ನೆರೆಮುಗಿಡ ಸರಸಿಜಕೆ ಸರಿಯಹ ಪಯೋಧರಂ ಭಕ್ತಿರಸಕಲಶದೊಳಿರೆ
ಸ್ಮರನ ಸರಳಂ ಪಳಿವ ನುಣ್ಬೆರಳ ವಿಸ್ತರಂ
ಹರನ ಪರಿಚಾರಕರ ತೆರದೊಳೊಪ್ಪಿರೆ ಕರಂ
ಸರಸ ಮುಕುರವೆನಿಪ್ಪ ಕದಪು ಶರ್ವಂ ನೋಳ್ಪ ದರ್ಪಣಮಿದೆಂಬೊಲೆಸೆಯೆ ೨೧

ಚೆಲುವಿಂಗೆ ಕಣ್ಮೊಡಿದಂತೆ ಕಣ್ಣುಗಳೆಸೆಯೆ
ಒಲವು ಮಿಗೆ ಭಕ್ತಿ ಕಣ್ದೆರೆದಂತೆ ಮತ್ತೆಸೆಯೆ
ಅಳಿಯ ಬಣ್ಣಂ ನಾಂಚಿಸುವ ನವಿರು ತಲೆಯೂರಿ ನಡೆವಲ್ಲಿಗಾಧಾರಮುಂ
ಲಲನೆಯಳ ಸೌಂದರ್ಯಮುಂ ಪಾವನತ್ವಮುಂ
ಸಲೆಂಯಿೀಂವುದೀಕೆ ಶಿವಶರಣೆಯೆನುತಂ ಸಂತ
ರೊಲಿದು ಕೊಂಡಾಡುತಿರ್ದರು ಕೈಗಳಂ ಮುಗಿವುತಿರ್ದರಾಕೆಯನೀಕ್ಷಿಸಿ ೨೨

ಕಾರಿಕಾಲಮ್ಮೆಯರ ರೂಪಿಂಗೆ ಬಹುಜನಂ
ಸಾರುತ್ತ ಬೆಂಬಿಡದೆ ಬರೆ ಕಷ್ಟತರ ಜನಂ
ದೂರದಿಂ ಕಂಡಲ್ಲಿ ಕಾರಿಕಾಲಮ್ಮೆಗಳು ಮನದೊಳುಂ ನೊಂದು ಬೆಂದು
ಕ್ರೂರವಹ ಕಂಡದಿಂಡಿಗೆ ಮರುಳ್ಗೊಂಡರವಿ
ಚಾರದಿಂ ರಮಣೀಯ ತನುವೆಂದರಿದಿರಾ ೨ವಿ೩
ಚಾರವೆಳ್ಳನಿತಿಲ್ಲ ನಿಮಗಕ್ಕಟಾ ತಿಳಿಯಲಿನ್ನೆಂತು ಪೇಳ್ವೆ ನಾನು ೨೩

ಒಳಗು ಹೊರಗಾಗಿ ನೋಡಿರಿಯೆನ್ನ ದೇಹಮಂ
ಬಳಿಕ ಹೇಸಲುವೇಳ್ಕು೩ಅರಿಯಿರೀ ಚೋಹ೩ಮಂ
ನೆಲೆಯಾಯ್ತು ಪಂಚಭೂತಂಗಳಿಂದೀ ಕಾಯರೂಪವೆಲ್ಲಂ ಜಿಗುಪ್ಸೆ
ಚೆಲುವಲ್ಲ ನಿಮಗಿದಂ ಪೋಗಿರೈಯೆಂದೆನಲು
ಒಲವಿಂದೆ ಮೂರ್ಖಜನರೊಡನೊಡನೆ ಬರುತಿರಲು
ಲಲನೆಯಹ ಕಾರಿಕಾಲಮ್ಮೆಗಳು ಬೆಂಬಿಡದೆ ಬಹು ಜನಕೆ ಪೇಳಿಪೇಳಿ ೨೪

ಬೇಸತ್ತು ಪುರಹರಾ ಮಾಯಾತಮೋಹರಾ
ವೇಷವೆನ್ನಂ ಕೊಂದಪುದು ಪಂಚಶರಹರಾ
ಈಶನೀಂ ರಕ್ಷಿಸೈಯೆಂದು ಮೊರೆಯಿಡೆ ನಾನು ಶಕ್ತಿಯಂ ಕೊಡಲಲ್ಲಿಯು
ಆ ಸಖಿಯು ನಿಶ್ಚಲಿಸಿದಳು ದೇಹಮಂ ಬಿಡಲು
ಹೇಸದಲೆ ಬೆಂಬತ್ತುವಜ್ಞರಂ ನೋಡಿದಳು
ಭಾಸುರದ ವೈರಾಗ್ಯಶಸ್ತ್ರದಿಂದಿಕ್ಕಿದಳು ತನುವನುಂ ತನುಗುಣಗಳಂ ೨೫

---

೧ ಯಿರು (ಹ)   ೨ ವಾ (ಹ)   ೩ ಅರಿಯಿರ್ರು ಚೋದ್ಯ (ಹ)

ಕಾಮಮಂ ಕ್ರೋಧಮಂ ಲೋಭಮಂ ಬಿದಿರ್ವಂತೆ
ಪ್ರೇಮಮಂ ಮದಮತ್ಸರಂಗಳಂ ಬಿದರ್ವಂತೆ
ತಾಮಸವೆನಿಪ್ಪ ಮಾಯಾಶಕ್ತಿಯಂ ಬಿದಿರ್ವಂತೆ ತದ್ಗುಣವನೊಗೆದು
ರಾಮಣೀಯಕವಾದ ಸ್ಥೂಲತನುವಂವೊಗೆದು
ಪ್ರೇಮವಹ ಸೂಕ್ಷ್ಮತನುವಂ ಧರಿಸಿ ನಿಂದಿರ್ದ
ಳಾಮಹಿಮ ಭೃಂಗೀಶನನುಜೆಯೆಂಬಂದದಿಂದಾ ಕಾರಿಕಾಲಮ್ಮೆಯು ೨೬

ಕಣ್ಣುಳಿಯೆ ಮೈಯೆಲ್ಲ ಎಲುವಾಗಿ ನಿಲಲಲ್ಲಿ
ಬಣ್ಣವಳಿದಿರವೊಡಿತೆಲ್ಲಾ ಜನಗಳಲ್ಲಿ
ಅಣ್ಣಗಳಿರಾ ಇದು ಪಿಶಾಚವಿದನಂ ನೋಡದಿರಿ ನಿಲ್ಲದಿರಿ ಬನ್ನಿರಯ್ಯ
ಹೆಣ್ಣಲ್ಲವಿದು ಶಿವಶಿವಾ ಸತ್ತೈವೈಯೆಂದು
ಕಣ್ಣಟ್ಟು ಮರಳಿನೋಡಲ್ಕಮ್ಮದೋಡಿತ್ತು
ಇನ್ನೇನುಸುರ್ವೆನೆಲ್ಲಾ ಜನಂ ಪರಿಯಿತ್ತು ಕಂಡ ಕಡೆಗಂಡಲಿವುತೆ ೨೭

ಇಂತು ಮೈಯ್ಯಂ ಬಿದಿರ್ದು ತಾನೊರ್ಬಳೇ ನಿಂದು
ಸಂತ ಸುಖದಿಂದೆನ್ನನ್ನುಂ ನೆನೆವುತಂ ಬಂದು
ಸಂತಸದಿ ತಲೆಯುಳಿಯೆ ಮೈಯೆಲ್ಲ ಎಲುಪೊಳೆಯೆ ಪುಣ್ಯದೊಬ್ಬುಳಿಯಂತಿರೆ
ಕಾಂತೆ ನಡೆತಂದಳಪ್ರತಿಮ ವೈರಾಗ್ಯಯುತೆ
ಅಂತಕಾಂತಕಯೆಂದು ಹಾಡುತ್ತೆ ಹಿಗ್ಗುತ್ತೆ
ಮುಂತೆ ಬರೆ ಕಂಚಿಗೆ ಬಡಗಲಿಪ್ಪ ಕಾನನದಿ ಲಿಂಗವಿರೆ ಕಾಣುತ್ತಲಿ ೨೮

ಶಿವನೆ ನಿನ್ನಯ ನಾಟ್ಯವಂ ತೋರು ತೋರೆನಗೆ
ಶಿವನೆ ಮಹಾ ನಾಟ್ಯವಂ ಕರುಣಿಸುವುದೆನಗೆ
ಶಿವನೆ ಮಹಾದೇವ ಘನತಾಂಡವಾಡಂಬರವನೆನಗೆ ತೋರಿಸಯ್ಯ
ಅವಯವಂಗಳಿವೆಲ್ಲ ಕಣ್ಣಾಗಿ ನೋಡುವೆಂ
ಸವೆಯದಾನಂದಮುಮನಾವರಿಸಿ ನೋಡುವೆಂ
ತವೆ ನಿನ್ನ ಸಂತಸಂ ಬೀರೆನಲು ತಾಂಡವಂ ತೋರಲುದ್ಯೋಗಿಸಿದೆನು ೨೯

ಒಡಲು ನೋಡಲು ಮೇಲೆ ಗಗನಮಂ ಮೀರುತಿರೆ
ಜಡೆ ನಭವನೆಡೆಗೊಂಡುವುಬ್ಬಿ ಪಲ್ಲವಿಸುತಿರೆ
ಹೆಡೆಗಳಂ ಬಿಚ್ಚಿ ಉರಗಂಗಳಂಜುತ್ತಮಿರೆ ಹಸ್ತಂಗಳೆಣ್ದೆಸೆಯೊಳು
ಬಿಡದೆ ನಟನವನಂದು ನಲಿವುತ್ತಂಲೋಲವುತಿರೆ
ಒಡನಾನೆ ಸಮ್ಮರ್ಝಂಪಿಸಿತಿರಝಾಡಿತಿ ಮಾಡುತಿರೆ
ಒಡಿದ ತಿಸುಳಂ ದಿಶಾಮೂಲದಿಂದತ್ತತ್ತ ಬೀಸುತ್ತಲೈತರುತಿರೆ ೩೦

ಢಮರುಗದ ನಾದಮುಂ ಧಣಧಣವೆನುತ್ತಿರಲು
ಅಮಮ ಘಂಟಾನಾದ ಢಣಢಣಮೆನುತ್ತಿರಲು
ವಿಮಲವಾದಂದುಗೆಯ ದನಿ ಘುಲುಘುಲುಕ್ಕೆನಲು ಕೈಯ ಶಿರಮರರೆಯೆನಲು
ತಮತಮಗೆ ತಲೆಮಾಲೆ ಹಿಂಡುಗಳ್ಕುಬುಬೆನಲು
ಕಮಲಭವ ಕಮಲಾಕ್ಷ ಸುರರು ಜಯಜಯವೆನಲು
ರಮಣೀಯವೆನಿಸಿರ್ದ ಬ್ರಹ್ಮಾಂಡ ಭಾಂಡವಾ ತಾಂಡವಕೆ ಬಿರಿವುತಿರಲು ೩೧

ನಾನಾಡಲುಮೆಯೊಡೆ ಹರಿಯಜಸುರರಾಡೆ
ನಾನಾಡೆ ಜಗವಾಡೆ ಜೀವರಾಶಿಗಳಾಡೆ
ನಾನಾಡುತಿರುತಿರ್ದನಾ ಕಾರಿಕಾಲಮ್ಮ ನೋಡುತ್ತಲಿರುತಿರ್ದಳು
ಮಾನಿನಿಶಿರೋರನ್ನೆ ನೋಡುತ್ತ ಸಾಕು ಸಾ
ನಂದಮೂರ್ತಿಯೇ ತಾಂಡವಂ ಸಾಕೆನಲು
ಸಾನುರಾಗದಿ ನಾನದಂ ಮಾಣ್ದು ಕಂಡಿರೇ ನಮ್ಮಯೀ ನಟನವೆನಲು ೩೨

ಗುರುದೇವ ಕಂಡೆನಾಂ ಕಂಡೆನಾಂ ಬದುಕಿದೆಂ
ಹರನೆ ತೋರಿದೆ ದಯಾಪರತೆಯಿಂ ಬದುಕಿದೆಂ
ಹರಿಯಜ ಸುರಾಸುರರ್ಕಾಣ್ಬರೇ ನಾಟ್ಯಮಂ ವೇದಂಗಳರಿಯುವಕಟಾ
ಪುರಹರಾಯೆನ್ನ ಪುಣ್ಯದ ಫಲಕೆ ಸರಿಯುಂಟೆ
ಸ್ಮರಹರಾ ನಿಮ್ಮ ನಾಟ್ಯಕ್ಕಿನ್ನು ಯೆಣೆಯುಂಟೆ
ಕರುಣಾಶರಧಿಯೆಂದು ಕುಣಿದಾಡುತಿಪ್ಪಮ್ಮೆಯರನಂದು ನಾನೀಕ್ಷಿಸಿ ೩೩

---

೧ ಮೊ (ಹ) ೨ ರೂಢಿ (ಹ)

ನಡೆತಾಯೆ ಕೈಲಾಸಪುರಕೆನುತ್ತಂ ಪೇಳ್ದು
ಒಡನಲ್ಲಿ ಲಿಂಗದೊಳು ಪೊಕ್ಕೆಸೊಲವಂ ತಾಳ್ದು
ಮಡದಿಯಿತ್ತಂ ಕಾರಿಕಾಲಮ್ಮೆಗಳು ಕೌತುಕಂಗೊಂಡರೇವೇಳ್ವೆನು
ದೃಢ ಶರಣರುಗಳು ನಡೆವಡಿ ಪಜ್ಜೆಯುಂ ಕಂಡು
ಕಡುಮೋಹದಿಂದಲಾಹಾ ಗಣಾಧಿಪರೆಲ್ಲ
ನಡೆದ ಹಾದಿಯ ಹೆಜ್ಜೆಯುಂ ನೋಡಿಯೊಲವಿಂದೆ ನಡೆದ ಹೊಸಹಜ್ಜೆಗಳಿವು ೩೪

ಇಂತಿವೆನ್ನಯ ಶಿರದ ಮೇಲಿರಲಿಬೇಕೆಂದು
ಚಿಂತಿಸಿದಳೊಂದು ತೆರನಂ ಚಿತ್ತದೊಳಗಂದು
ಪಿಂತೆಯುವರೆಲ್ಲ ನಡೆದೊಲ್ನಡೆಯಬಲ್ಲೆನೇ ನಾನವರ ಸತ್ವಕೆಣೆಯೆ
ಎಂತಾದಡೆನ್ನ ಕೈ ಕಾಲಾಗಿ ನಡೆವೆ ನಾ
ನಿಂತಿಲ್ಲಿಯೆನ್ನ ತಲೆಯಡಿಯಾಗಿ ನಡೆದು ತೋ
ರ್ಪೆಂ ತವಕದಿಂದೆಲೆಲೆ ಶರಣರಡಿ ಹಜ್ಜೆಗಳಿರಾ ಶಿವಪುರಿಗೆ ಕಳುಹಿರೈ ೩೫

ಎಂದು ಶರಣರ ಹಜ್ಜೆಯುಂ ನಂಬಿ ತಲೆಯಿಟ್ಟು
ಬಂದಳೋದೊಂದು ಘಳಿಗೆಗೆವೊಂದಡಿಯನಿಟ್ಟು
ಅಂದಾಕೆ ಬರುತಿರಲು ಶಿವನಿಷ್ಠೆ ಸೊಕ್ಕಿ ತಲೆಯೂರಿತೆಂಬಂದದಿಂದೆ
ಚಂದದಿಂ ಬರುತಿರಲ್ಮನದ ಕೈಯಂ ನೀಡು
ತಂದಾಕೆಯಂ ನಾನು ಸೆಳೆಯಲ್ಕೆ ತಳುಹದಲೆ
ಬಂದಳತ್ಯುತ್ಸವದೊಳಾ ಕಾರಿಕಾಲಮ್ಮೆಯೇವೇಳ್ವೆನೈ ಸೌಂದರಾ ೩೬

ವರ ರಜತಗಿರಿಯ ಸೋಪಾನವೇರುತ್ತಲ್ಲಿ
ಕರುಣಾಂಬುನಿಧಿ ಕರುಣಿಸೈಯೆನುತ್ತುರದಲ್ಲಿ
ಹರವರಿಯ ಸಂತಸದ ಶರಧಿಯೊಳಗೋಲಾಡುತೊನದಾಡುತೀ ತೆರದೊಳು
ತ್ವರಿತದಿಂ ನಡೆತಂದಳಪ್ರತಿಮ ಮದ್ಭಕ್ತಿ
ಪರಮ ನಂದೀಶ್ವರನ ಬಾಗಿಲಿಗೆ ಸದ್ಭಕ್ತಿ
ಬರೆ ನಂದಿ ಕೈಮುಗಿಯಲೆನ್ನ ಸಭೆಯವರ್ಕೈದೆ ಕಾಣುತ್ತ ಬೆರಗಾದರು ೩೭

೧ ಗೊಂ (ಹ)

ಅಲ್ಲಿ ಮೈಯೆಲ್ಲ ಎಲುವಾಗಿ ತಲೆಯೂರಿ ಬರೆ
ಅಲ್ಲಿ ಪಾರ್ವತಿ ನೋಡಿ ನಡನಡನೆ ನಡುಗುತಿರೆ
ವಲ್ಲಭಾಯೇನಿದೊಂದಂ ಪಿಶಾಚಂ ಬಂದುದಾನಂಜಿದಪೆನು ದೇವಾ
ಇಲ್ಲಿರಲ್ಕೊಲ್ಲೆನೆಂದೆನ್ನ ಹಿಂದಂ ಪೊಕ್ಕು
ನಿಲ್ಲದತಿ ಭಯದಿಂದಲೆನ್ನನುಂ ಬಿಗಿಯಪ್ಪ
ಲಲ್ಲಲ್ಲ ಗಿರಿಜೆ ಕೇಳ್ಕಾರಿಕಾಮ್ಮೆಯರು ನಿಮ್ಮತ್ತೆ ನಮ್ಮಮ್ಮೆಯರ್ ೩೮

ಎನ್ನಯ ಜನನಿಯೆನಗೆ ಹಣ್ಣಿತ್ತ ಹಿತವೆಯರು
ಎನ್ನವ್ವೆಯೆನ್ನಮ್ಮ ಕಾರಿಕಾಲಮ್ಮೆಯರು
ಇನ್ನಿವರನರಿಯದೇ ಮರುಳೆಂಬರೇ ಮರುಳ ನುಡಿಯಿಂದಲೆಲೆ ಶಾಂಕರಿ
ಸನ್ನಿಯಿಂ ಪೊಡಮಡುವುದೆನೆ ಕೇಳುತಾ ಶರಣೆ
ತನ್ನ ಮನದೊಳು ನೊಂದು ಇಂತೆಂಬರೇ ದೇವ
ಎನ್ನನುಂ ಪಡೆದವರ್ನೀವಿರ್ವ್ವರಲ್ಲವೇ ನಿಮಗೆ ನಾಂ ಮಗುವಲ್ಲವೇ ೩೯

ಎನುತೆನ್ನ ಚರಣದೊಳು ಬೀಳಲ್ಕೆ ಶರಣೆಯುಂ
ಅನುನಯದೊಳೆತ್ತುತ್ತೆ ಮಗುಳೆ ನಾಂ ನುತಿಸುತ್ತೆ
ಅನಘರಹಗಣತತಿಗೆ ತೋರುತ್ತ ಬೀರುತ್ತಲಾಕೆಯುಂ ಮನ್ನಿಸುತ್ತ
ವಿನುತ ಗಣವರರ ಸನ್ನಿಧಿಯು ಪದವಿಯನಿತ್ತೆ
ತನಯನೇ ಕೇಳು ಮತ್ತೀ ಕಾರಿಕಾಲಮ್ಮ
ಯನು ನುತಿಸು ಪೊಗಳು ಕೊಂಡಾಡು ಬೇಸರಗೊಳ್ಳದಂತಾಲಿಸೈ ಸೌಂದರಾ ೪೦

ಒಸೆದಾಲಿಸೈ ನಂಬಿ ಮತ್ತೊರೆವೆನಿನ್ನೊರ್ವ
ಅಸಮಭಕ್ತನ ಚರಿತೆಯಂ ಚೋಳದೇಶದೊಳ
ಗೆ ಸೆವುತ್ತಲಿರುತಿರ್ದುದತುಲವಹ ಶಿವಪುರಂ ಕಾವೇರಿಯಿಂದಾಪುರಂ
ಸಸಿನೆಯಿಂ ಲಕ್ಷ್ಮಿಗಾವಾಸವೆಂದೆನಿಸಿರ್ದು
ಮಿಸುಪ ಘನಪುಷ್ಪವಾಟಿಕೆಗಳಿಂದೊಪ್ಪಿರ್ದು
ವಸುಮತಿಗಧಿಕವೆನಿಸುತಿರಲಾ ಪುರದೊಳೊರ್ವ ಮದ್ಭಕ್ತನಿರುತಿರ್ದನು ೪೧

---

೧ ರೇಂದ್ರಾ (ಹ)

ಆ ಶರಣನಾ ಪುರದಿ ಶೂದ್ರಕುಲದೊಳು ಪುಟ್ಟಿ
ಭಾಸುರತೆಯಂ ತಾಳ್ದು ಮೊನೆಯಿಡುವರೆಂದೆನಿಸಿ
ಲೇಸಾದ ವೈರಾಗ್ಯದಿಂ ಕಾಮಮಂ ಕೊಲ್ಲಿ ಕ್ರೋಧಮಂ ಶಾಂತಿಯಿಂದೆ
ನಾಶಮಂಗೈದು ಲೋಭವನುದಾರತ್ವದಿಂ
೧ಗಾಸಿಯೆನಲೆಸಗಿ ಸುಜ್ಞಾನದಿಂ ಮೋಹಮಂ
ದೂಷಿಸುತ್ತೊಗೆದು ಮದಮಂ ಮಮಾರ್ಜನದಿಂದಲಿಕ್ಕಿ ಮಾತ್ಸರ್ಯಮುಮನು ೪೨

ಸಮಭಾವದಿಂ ನೂಂಕುತರಿವರ್ಗಮಂ ಕೂಡೆ
ಅಮಿತಭವ ಸಂಗರಂಗಳನೈದೆಗೆಲ್ದು ಮು
ತ್ತಮಲ ಶರಣರ ಪಾದಭಕ್ತಿಯೇ ಭುಜಬಲಂ ಧರ್ಮಮೇ ಭೂಮಿಯು ಬಲಂ
ರಮಣೀಯಮೆನಿಸುವಾದಯಮೆ ಯೋಗದ ಬಲವು
ಮಮ ಕರ್ಮ ನಿರ್ಮೂಲಮಬ್ಜ ತಾರಾಲಬಂ
ಸಮನಿಸುತ್ತೀತೆರದಿ ಗುಂಭದಿಂದಿರ್ದು ಜನರಿಗೆ ಧೂರ್ತನಂತಿರ್ದನು ೪೩

ಪಗೆಗಾರದವರೆನ್ನ ವೈರಿಯಂ ಕೊಲ್ಲೆಂದು
ಮಿಗೆ ಧನವನೀಯಲದನಂ ಕೊಂಡು ತದ್ರಿಪುವ
ನೊಗೆದೊತ್ತಿ ಕೊಲ್ಲುತ್ತ ಪರಿಬದೊಳು ಕಲಿಯೆನಿಸುತಂಕದೊಳು ಬಲಿಯೆನಿಸುತೆ
ಸೊಗಸಿನಿಂದವರಿತ್ತ ವಿತ್ತದಿಂದತ್ತ ತಾಂ
ಬಗೆಬಗೆಯ ಹರ್ಷದಿಂ ಭಕ್ತರಂ ತಣಿಪುತ್ತೆ
ಜಗದೊಳಿಂತೊಪ್ಪುತಿರಲಾತನಂ ನೋಳ್ಪೆನೆಂದೆಂಬ ಮನವೆನಗಾದುದು ೪೪

ತ್ವರಿತದಿಂದಾನೊರ್ವ ಮಾಸಾಳ ವೇಷದಿಂ
ನೆರೆ ಬರುತ್ತಲ್ಲಿರ್ಪ ಭಟರನತಿ ರೋಷದಿಂ
ಜರಿವುತ್ತೆ ಮೇದಿನಿಯ ಮೀಸೆಯುರ ಗಂಡ ನಾನೆಂದು ಬೊಬ್ಬೆಯನಿಕ್ಕುತೆ
ಧುರವನೆಸಗುವರ ಕಣ್ಗೆಳ್ವ ವೀರಂ ನಾನು
ನೆರೆ ಖಡ್ಗಮಂ ಪಿಡಿದ ಭಟರುಗಳರಸ ನಾನು
ಧರೆಯಲ್ಲಿ ಸಮವಪ್ಪ ವೀರರೆನಗಿಲ್ಲೆಂದು ಭುಜವನಪ್ಪಳಿಸುತ್ತಲೀ ೪೫

---

೧ ಘಾಸೆ (ಹ)

ಮುಂದೆ ಬಿರುದಿನ ಕಹಳೆಗಳ್ಮೊರೆಯೆ ಹಿಗ್ಗುತಂ
ನಿಂದುಭಯ ಪಕ್ಷಮಂ ನೋಡುತ್ತೆ ತೊನೆವುತಂ
ಚಂದದಿಂ ಮೀಸೆಯಂ ತಿದ್ದುತ್ತೆ ವೀರನಾದಂಗಳಿಂದಡಿಯಿಡುತ್ತೆ
ವಂದಿಗಳ್ಪೊಗಳಲ್ಕೆ ನಗುತವರ್ಗೀವುತ್ತೆ
ಬಂದೀಕ್ಷಿಪರ್ಗೆಯಭ್ಯಾಸಮಂ ತೋರುತ್ತೆ
ಬಂಧುರವೆನಿಪ್ಪಂಕಕಾರ ಚಿಹ್ನಂಗಳಂ ಬೀರುತ್ತಲೈತರುತಿರೆ ೪೭

ಕಂಡವರ್ನುಡಿಸಲರಿದೆನುತವರು ನಡುಗುತಿರೆ
ಕಂಡು ಕಾಣದ ತೆರದೊಳರಿಭಟರ್ಸರಿವುತಿರೆ
ಚಂಡಪ್ರತಾಪವೀರರ್ಕಳೆಲ್ಲರ್ಕೂಡಿ ಬಹಳ ಧನಮಂ ಕೂಡಿಸಿ
ಪುಂಡನಹ ಮೊನೆಯಿಡುವನಂ ಕಾಣುತಿದನುಸುರಿ
ದಂಡಿಸುವದಂಕಕಾರನನೆಂದು ಧನವೀಯೆ
ಮಂಡಿತ ಮಹಾಶರಣನೀವಾರ್ತೆಯಂ ಕೇಳುತಾತ ಸಂತಸವಾಂತನು ೪೭

ಕಾಳೆಗದಲಾಭಕ್ಕೆ ಹಿಗ್ಗಿ ಹೊರೆಯೇರುತಂ
ಮೇಲಾದ ತನ್ನ ಬಿರುದಗಳೆಲ್ಲ ಬೀರುತಂ
ಆಳುಗಳನಟ್ಟಿ ಕರಿಸಿದನಲ್ಲಿ ಎನ್ನುವಂ ಸಂಗರಕ್ಕಂಗೈಸುತೆ
ತೋಳ ಪೊಯ್ವುತ್ತೆ ಕುಬುಬೆಂದು ಬೊಬ್ಬೆಯನಿಡುತೆ
ಫಾಳೇಕ್ಷಣನೆ ಜಯುವೆನುತ್ತೆನ್ನ ನೆನೆವುತ್ತೆ
ಲೀಲೆಯಿಂದಾತನಿರಲಾನು ಕಾಪಟ್ಯದಿಂ ಭಕ್ತವೇಷವನಾಂತೆನು ೪೮

ಎನ್ನಂಗದೊಳು ಪೊಳೆವ ಭಸಿತವಮಂ ಕಾಣುತ್ತೆ
ಎನ್ನ ತನುವಿನೊಳಿಡಿದ ರುದ್ರಾಕ್ಷೆಯಂ ಕಾಣು
ತೆನ್ನವಂ ನಡನಡುಗುತೀತ ಶಿವಭಕ್ತನೀತನೊಳಂಕವೆನಗಪ್ಪುದೆ
ಇನ್ನಿದಂ ಉಚಿತವಲ್ಲೆನ್ನ ಕಾರ್ಯವಿದಲ್ಲ
ಸನ್ನಿಯಿಂದೀ ಧನಂ ಸಲಲಿ ಮತ್ತೀತಂಗೆ
ಮುನ್ನವೇ ನಾನಳಿವುದೇ ಲೇಸೆನುತ್ತವಂ ತನ್ನತಾನಿರಿದುಕೊಳಲು ೪೯

ಎಲೆಲೆ ಬೇಡ್ವೈ ಮಗನೆ ನಿಲ್ಲೆನುತವನ ಕರವ
ನೊಲವಿನಿಂ ಪಿಡಿವುತ್ತೆ ನಿಜರೂಪದಿಂದಿರುತೆ
ಘಳಿಲನಾಂತನ ನಾನು ತೆಗೆದಪ್ಪಲೆನ್ನ ದಶಭುಜ ಪಂಚಮುಖವೀಕ್ಷಿಸಿ
ಸಲೆಭಕ್ತಿಯಿಂದೆರಗಲಾತನಂ ಕೈಲಾಸ
ನಿಲಯಕ್ಕೆ ಕೊಂಡೊಯ್ದು ಗಣಪದವನಿತ್ತೆನೈ
ಇಳೆಯಾಣ್ಮ ನಂಬಿಯೆ ಕೇಳು ಮತ್ತೀ ವೊನೆಯಿಡುವರಂಘ್ರಿಯಂ ನುತಿಸೆಲೈ ೫೦

ಕೇಳಯ್ಯ ನಂಬಿ ಮತ್ತೊರ್ವ ಶರಣನ ಕಥೆಯು
ಪೇಳುವೆನು ಮನವನಿಟ್ಟೊಲಿದಾಲಿಸೈ ನೀನು
ಚೋಳದೇಶದೊಳೆಸೆವುತಿರ್ದುದು ಮುಡುಂಗೊಂಡಪೆಂಬ ಪುರವಾ ಪುರಕ್ಕೆ
ಲೀಲೆಯಿಂ ಕಳಜಂಗ ಪೇರುಮಳೆಯೆಂಬ ಭೂ
ಪಾಲನೊಪ್ಪಿರುತಿರ್ದನೇನೆಂಬೆನವನ ಸುವಿ
ಶಾಲತೆಯ ಭಕ್ತಿಯಂ ವಾಚಾಮಗೋಚರಮದಾದಡಂ ಬಣ್ಣಿಸುವೆನು ೫೧

ಒಸೆದೆನ್ನನಲ್ಲದಿತರರನವಂ ಲೆಕ್ಕಿಸಂ
ಮಿಸುಪ ಲಿಂಗಂಗಳಿಲ್ಲದ ಪುರಂ ಪಾಲಿಸಂ
ಭಸಿತವಿಟ್ಟವರನೇ ಶಿವನೆಂದು ಭಾವಿಪಂ ಭಸಿತವಿಡದಧಮರುಗಳಂ
ನುಸಿಗಳೆಂದರಿವನುನ್ನತ ಶರಣರೈತರ
ಲ್ಕಸಮ ಪೀಠವನಿತ್ತು ಚರಣಮಂ ತೊಳೆವುತ್ತ
ಹಸಿತಮುಖನಾಗುತ್ತಲವರಿಷ್ಟಮಂ ಸಲಿಸುತಿಂತಿರುತಿರ್ದನಾ ಭೂಪನು ೫೨

ಇರಲೊಂದು ದಿನವು ತಿರುವಾರೂರ ತಿರುನಾಳ
ಪರಮ ಪರ್ವಕ್ಕೆಂದು ಚೊಲ್ಲಡಿಯ ನಾಚಿಯೆಂ
ಬರಸಿಯಂ ಕೂಡಿಕೊಂಡಮಿತ ಕರಿತುರಗಗಳ ಸಂದಣಿಯ ವಿಭವದಿಂದೆ
ಬರುತಿರುಲ್ತಿರುನಾಳ ಲಿಂಗಾಲಯಾಗ್ರದೊಳಳು
ಮೆರೆವ ವೃಷಭಧ್ವಜಂಗಳನೈದೆ ಕಾಣುತ್ತ
ಕರಿಯುನಿಳಿದಲ್ಲಿ ಮೈಯ್ಯಿಕ್ಕುತ್ತ ಜಿತುಜಿತಿಸುತ್ತ ಕಾಲ್ನಡೆಯಲೈತಂದನು ೫೩

---

೧ ಲಾ (ಹ) ೨ X (ಹ) ೩ X (ಹ) ೪ ಯಗಳೊ (ಹ) ೫ ಸ್ತು (ಹ)

ಸಾನುರಾಗದಲಿ ಲಿಂಗಾಲಯಕ್ಕೈತಂದು
ತಾನುವುಂ ಚೊಲ್ಲಡಿಯ ನಾಚಿಯುಂ ಪೊಗುತಂದು
ಆನಂದ ಜಲಪೊಸರೆ ನಡೆ ನೋಡುತಂ ಪ್ರದಕ್ಷಣವ್ಗೈದೆ ಬರುತಿರಲ್ಕೆ
ಭೂನಾಥಸಂಗಸೆಯು ದಿವ್ಯ ಸಂತಸದಿಂದೆ
ಮಾನಿನಿಯರುಗಳ ಗಡಣದಲಿ ಮೆಲ್ನುಡಿಯಿಂದೆ
ಶಾನಲ್ಲಿ ತೊಲಗೆಂಬ ೧ವೇೞತ್ರ ಹಸ್ತೆಯರ ಕಳಕಳದಿಂದಲೈತರುತಿರೆ ೫೪

ಭರದಿಂದೆ ಮುಂದೊಂದು ತಾಣದೊಳು ತಲ್ಲಿಂಗ
ಕಿರದೆ ನವಪರಿಮಳಂ ಸುರಿವ ಕುಸುಮಂಗಳಂ
ಸರಸದಿಂ ವಲಯಮಂ ಕಟ್ಟುತಿರೆ ಚೊಲ್ಲಡಿಯ ನಾಚಿಯನ್ರೋಡುತಲ್ಲಿ
ನೆರೆ ಮೀಸಲಭಿಮಾನಕುರುಪರಶುವಾಂತಂತೆ
ವರ ನಾಶಿಕಾಗ್ರಕ್ಕೆ ಮೃತ್ಯುವಂ ಪಿಡಿವಂತೆ
ತರುಣಿಯಳು ಪೂವೊಂದನೆತ್ತಿ ವಾಸಿಸಿದಳದನರಿಯದಜ್ಞಾನದಿಂದೆ ೫೫

ಕಾಣುತ್ತೆ ತೊಣೆಯಾಂಡಿ ಕೋಪದಿಂದೆಲೆ ಪಾಪಿ
ಮಾನಿನಿಯೆ ಶರ್ವಂಗೆ ಸಾರಸರ್ವಜ್ಞಂಗೆ
ಆನಂದ ವಿಗ್ರಹಂಗಭವಂಗೆ ಪರಮಂಗೆ ದೇವದೇವೇಶ್ವರಂಗೆ
ಭೂನುತಚರಿತ್ರನಹ ಶಂಕರನ ಜಡೆಮುಡಿಗೆ
ನಾನಾ ನವೀನ ಕುಸುಮಂಗಳಂ ಕಟ್ಟುತಿರೆ
ನೀನರಿಯದೀಗ ವಾಸಿಸಿದೆಯಾ ಮರುಳೆನುತ್ತವನಾಗಳುರಿದೆದ್ದನು ೫೬

ಘರಿಲನರಿದಂ ಮೂಗನಾಹ ಮೊನೆತೊಣೆಯಾಂಡಿ
ಹರಹರಯೆನುತ್ತಾಕೆ ಶಶಿಬಿಂಬ೨ಮಂ೨ ಬಿಂದು
ವಿರದಾಂತ ತೆರದಿಂದೆ ನಿಂಗಿರಲ್ ನಾಂದಿರಲ್ ಸರ್ವಾಂಗಮುಂ ರಕ್ತದಿಂ
ನೆರೆದ ಕೆಳದಿಯರಲ್ಲಿ ಬಸುರಂ ಹೊಸೆದುಕೊಳುತ
ಕರಗಳಿಂ ಬಾಯನುಂ ಹೊಡೆಹೊಡೆದುಕೊಂಡಳುತ
ಧರಣಿಪಂಗುಸುರಲೀವಾರ್ತೆಯುಂ ಕೇಳುತ್ತಲಾತನುಂ ನಸುನಗುತ್ತೆ ೫೭

೧ ನೇ (ಹ) ೨ ಮುಂ (ಜ)

ಚಿತ್ತದೊಳಗೆರಡಿಲ್ಲದಂತಂ ವಿಚಾರಿಸುತೆ
ಇತ್ತ ಬಾ ತೊಣೆಯಾಂಡಿಯೆನುತವನ ಮನ್ನಿಸುತೆ
ಮತ್ತೀ ಶಿವದ್ರೋಹಿಯಂ ಮುಟ್ಟಿದೈತಂದೆ ಶಿಕ್ಷಿಸುವೊಡರಿಯದಾದೆ
ಎತ್ತಿಕೊಟ್ಟುದನುಳುಹಿ ವಾಸಿಸಿದನಿಳುಹಿದಿರೆ
ಎತ್ತಿಕೊಟ್ಟುದು ಹಸ್ತವೇಬುದಂ ಮರೆದಿರೇ
ಬಿತ್ತರಿಸಿ ನೋಡಿದಡೆ ಹಸ್ತವೆ ಮೊದಲ್ದ್ರೋಹಿ ಘ್ರಾಣವೆರಡನೆಯ ದೋಷಿ ೫೮

ಇದಕೆ ತಕ್ಕುದ ಮಾಳ್ಪೆ ನಾನೆಂದು ಪರಿತಂದು
ಸುದತಿಯಳ ಬಲದ ಕೈಯಂ ಕಡಿಯಲವನಂದು
ಮುದದಿಂದೆ ನಾನಲ್ಲಿ ಗಣನಿಕರವೆರಸುತ್ತ ನಿಜರೂಪದಿಂದಿರ್ದೆನು
ಚದುರೆಗೆ ಕರಂ ನಾಶಿಕವನಿತ್ತು ಪುಷ್ಪಕದಿ
ಸದಯ ದಂಪತಿಗಳಂ ಕುಳ್ಳಿರಿಸಿ ಮಮ ಪುರಿಗೆ
ಪದುಳದಿಂ ಪೋಗುತೀರ್ವರ್ಗೆ ಗಣಪದವನಿತ್ತೆನೀತನಂ ತುತಿಸು ನಂಬೀ ೫೯

ಒರವೆನಾಲಿಸು ನಂಬಿ ಚೋಳಮಂಡಲದಲ್ಲಿ
ಪರಿಶೋಭಿಸಿತ್ತು ತಂಜಾಪುರವೆನಿಸುತಲ್ಲಿ
ನೆರೆಶೂದ್ರ ಕುಲದಲ್ಲಿ ಪುಟ್ಟುತ್ತೆ ಮದ್ಭಕ್ತರೊಳಗಧಿಕನೆನಿಸುತ್ತಲೀ
ಚಿರುತೊಣೆಯರೆಂದೆಂಬ ಪೆಸರಿನಿಂದೊಪ್ಪುತ್ತೆ
ಪರಮ ತಿರುವಾರೂರ ಪತಿಯನುಂ ನೆನೆವುತ್ತೆ
ನಿರುತ ತಿರುವಾರೂರ್ಗೆ ನಡೆತಂದು ಲಿಂಗಮಂ ನೋಡುತ್ತೆ ಪೊಡಮಡುತ್ತೆ ೬೦

ಒಂದುವುಂ ಬೇಡನವ ಬಯಸನವ ನಿತ್ಯಮುಂ
ಬಂದು ಲಿಂಗಂ ಕಂಡು ನುತಿಪುದೇ ವ್ರತಮದುಂ
ಚಂದದಿಂದೀ ತೆರದಿ ಕಾಲ ಕಾಲದಿ ನುತಿಸಿ ಕಾಲನಂ ಗೆಲ್ದಿರುತಿರೆ
ಅಂದು ಲಿಂಗಾಲಯದೊಳೀತನಿಹ ಸಮಯದೊಳು
ಬಂದಳಾ ಸಿಂಹನೃಪನರಸಿ ಸಖಿಯರ ನಿವಹ
ದಿಂದಿಂದುಧರನ ಪೂಜಾರತಿಗೆನುತ್ತಾಕೆ ಸಂತಸದೊಳಿಂತಲ್ಲಿಗೆ ೬೧

---

೧ ಲ್ದ್ರೋಹಿ ೨ ಯ (ಹ)

ಬರುತಲ್ಲಿ ಮಂಟಪದೊಳೆಡೆಯಾಡಿ ನೋಡುತ್ತೆ
ಭರದಿ ಪುಷ್ಪದ ಮಂಟಪಂಪೊಕ್ಕು ಬರುಬರುತೆ
ಸರಸವಹ ಪೂವೊಂದನಲ್ಲಿ ಬಿದ್ದಿರಲೀಕೆ ಕಾಣುತ್ತೆ ಕೈಕೊಳುತ್ತೆ
ನೆರೆ ವಾಸಿಸಲ್ಕೆ ಚಿರುತೊಣೆಯಾಂಡನೀಕ್ಷಿಸು
ತ್ತುರುಕೋಪಮಂ ತಾಳಿ ಎಲೆ ಪಾಪಿಯೆಂದವಳ
ವರ ನಾಶಿಕವನರಿಯೆ ನಾನಲ್ಲಿ ನಿಜರೂಪದಿಂದೆ ಮೆರೆವುತ್ತಿರ್ದೆನು ೬೨

ತರುಣಿಯಳಿಗೈದೆ ನಾಂ ಕರುಣಿಸುತ್ತಿತ್ತು ಪುರ
ಹರ ಹರ ಮಹಾದೇವ ದೇವ ದೇವರಗಂಡ
ಕರುಣಿಸೆಂದೆನುತ ನಿಂದಿರ್ದ ಚಿರುತೊಣೆಯನಂ ಪುಷ್ಪಕವನೇರಿಸುತ್ತೆ
ಭರದಿಂದೆ ರಜತಾಚಳಂ ಪೊಕ್ಕು ಶರಣಂಗೆ
ಪರಮಗಣಪದವಿತ್ತೆನದರಿಂದೆ ಕೇಳು ಸೌಂ
ದರ ನೀನು ಚಪಲಮಾನಸನಾಗದಂತೆ ಚಿರುತೊಣೆಯಾಂಡರಂ ನೆನೆಯಲೈ ೬೩

ಅಂತು ಸಂಧಿ ೧೬ ಕ್ಕಂ ಪದಗಳು ೮೧೭ ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

## ಸಂಧಿ : ೧೭

**ಸೂಚನೆ :**

ಸಾರ ಸದ್ಭಕ್ತ ಕೊಲ್ಪುಲಿಯ ಪೂಸಲನಾಯ
ನಾರ ನೈಸರ ಭಕ್ತ ಕಳಚಂಗ ಚನ್ನಯ್ಯ
ಚಾರು ಮಹಿಮಾ ಪುಂಜರೀ ಪುರಾತನರ ಕಥೆಯಂ ಕೇಳ್ದನಾ ಸೌಂದರಂ

ಕೇಳವನಿಪತಿ ಸೌಂದರೇಂದ್ರ ಮತ್ತೂರೆವೆನ್ನೈ
ಚೋಳದೇಶದೊಳೊಂದು ನಾಟ್ಯಪುರವೆಂದಿರಲು
ಆ ಲಲಿತ ಪುರದಲ್ಲಿ ಕೊಲ್ಪುಲಿಯರೆಂದೆಂಬ ಮದ್ಭಕ್ತನಿರುತಿರ್ದನು
ಮೇಲೆನಿಪ ಚೋಳನಾ ಸೇನಾಧಿಪತಿಯೆನಿಸಿ
ಕಾಲಕಾಲಕ್ಕರಿಕುಲದ ರಾಜರಂ ಜೈಸಿ
ಪೇಳಲರಿದಾದ ಸಂಪದದ ಪೆಂಪಿಂದರಸಿಗತಿಹಿತಂ ತಾನೆಯೆನಿಸಿ೧ ೧

೧ ನಿಸುತೆ (ಹ)

ಸಲ್ಲಲಿತ ಶಿವನ ನೈವೇದ್ಯದೋಗರಕೆನುತೆ
ನೆಲ್ಲ ರಾಸಿಗಳನೊಟ್ಟೆಸುತೆ ಲಿಂಗಾಲಯಗ
ಳಲ್ಲಿ ತಲ್ಲಿಂಗದರ್ಚನೆಯನತಿವಿಭವದಿಂಗೈಸುತ್ತೆ ಭಕ್ತಿಯಿಂದೆ
ಅಲ್ಲಿ ನಿಜಧನವೆಲ್ಲ ಲಿಂಗಕ್ಕೆ ಸಲಿಸುತಂ
ಬಲ್ಲಿದರ್ಭಕ್ತರೆಂದವರ್ಗೆ ತಾನೀವುತಂ
ಉಲ್ಲಾಸದಿಂದೆ ಭಕ್ತರೊಳಧಿಕನೆನಿಸಿ ಕೊಲ್ಲಪಲಿಯಾಂಡನಿಂತಿರುತಿರೆ ೨

ಧರಣಿಪತಿಯೊಂದು ದಿನ ಕೊಲ್ಲಪಲಿಯನಂ ಕರೆವು
ತರಿರಾಯರುಗಳ ವಿಜಯಾರ್ಥಕ್ಕೆ ಪೋಗೆಂದು
ಪರಮಾಜ್ಞೆಯಂ ಕೊಡಲ್ಕೀತನಂತಾಗಲೆಂದಿರದೆ ಪೋಗುವ ಸಮಯದೊಳ್[೧]
ನೆರೆ ಬಂಧುಗಳನೆಲ್ಲ ಕರೆಸಿ ಬೆಸಸಿದನಲ್ಲಿ
ಕರೆಕಂಠನುಣಿಸಿಂಗೆ ನೆಲ್ಲ ರಾಸಿಗಳೆಲ್ಲ
ನೆರವಿಹವು ನೀವವಂ ಮುಟ್ಟದಿರಿ ಕೊಂಡರೊಳಿತಾಗಲಿಕ್ಕಿಲ್ಲ ಮುಂದೆ ೩

ಎಂದವರಿಗಾಜ್ಞಾಪಿಸುತ್ತಾತ ಪೋಗಲ್ಕೆ
ಚಂದದಿಂದಿತ್ತ ಬರುವೆಡೆಯಾತ ತಡೆಯಲ್ಕೆ
ಅಂದು ಮೊದಲಾಗಿತ್ತ ಮಳೆಯಿಲ್ಲದಿರಲತಿ ಕ್ಷಾಮದಿಂ ಕಂದಿ ಕುಂದಿ
ಮುಂದಾವಗತಿಯೆನುತ್ತರಿದು ಕೊಲ್ಲಪಲಿಯನಾ
ಬಂಧುಗಳ್ನೆರೆದು ಸುಮ್ಮನೆ ಸಾಯಲೇಕೀಗ
ಇಂದುಧರನೋಗರದ ನೆಲ್ಲಗಳಿಹವಿದರಿಂದೆ ಬದುಕಿ ಮುಂದೀವೆವೆನುತೆ ೪

ಎಲ್ಲರೀಯಾಳೋಚನಂಗೈದು ನಿಜವೆಂದು
ನೆಲ್ಲ ರಾಶಿಯನೆಲ್ಲ ಸರಿಮಾಡಿ ಕೊಂಡೊಯ್ದು
ಅಲ್ಲಲ್ಲಿ ಬಂಧುಗಳ್ಬದುಕಿದರ್ಬರವೆಲ್ಲ ಪೋಗಲಾ ಕೊಲ್ಲಪಲಿಯನು
ಬಲ್ಲಿದರಿಗಳನಿಕ್ಕಿ ಬರುತಲೀವಾರ್ತೆಯುಮಂ
ನೆಲ್ಲಮುಂ ದೂತರಿಂದರಿದು ಪುರಕೈದು ಭೂ
ವಲ್ಲಭನೆನಿಪ್ಪ ಚೋಳನ ಕಾಣುತಂದು ತನ್ನಿಂದಾದ ಕಾರ್ಯಮೊರೆದು ೫

---

೧ ದೊಳಗೆ (ಹ)

ಅವನಿಪತಿಯಿಂದೆ ಕೊಂಡಾಡಿಸಿಕೊಳುತ್ತ ನಿಜ
ಭವನಕೈತಂದು ಕರಸಿದನಖಿಳ ಬಂಧುಗಳ
ನಿವಹಮಂವೊರ್ವರುಳಿಯದ ತೆರದಿ ಬರಲಾತನೀಕ್ಷಿಸುತ್ತತಿ ಖಾತಿಯಿಂ
ಶಿವಶಿವ ಶಿವದ್ರೋಹಿಗಳು ನೀವು ಶಿವನೋಗ
ರವನುಂಡಿರಾ ಮುಟ್ಟದಿರಿ ಎಂದು ಪೇಳ್ದುದಂ
ತವೆ ಮರೆದಿರಾ ನಿಮ್ಮನುಂ ಕೊಲುವೆನೆಂದಾತನೆಲ್ಲರಂ ಬಂಧಿಸುತ್ತೆ ೬

ತಂದೆಯುಂ ತಾಯಿಯುಂ ಅಣ್ಣತಮ್ಮಂದಿರಂ
ಸಂದ ನಾನಾ ಬಂಧುಗಳ್ಪಿರಿಯ ಕಿರಿಯರಂ
ಅಂದೆಲ್ಲರಂ ಕಡಿದು ಕಡಿದೊಟ್ಟುತಿರೆ ನಿನ್ನ ಹೆಸರಿನವನೀ ಬಾಲಕಂ
ಇಂದು ಮೊಲೆಯುಣ್ಣುತಿಹ ಕೊಲ್ಲು ಮೇಣ್ ಕಾಯೆಂದು
ಕಂದನಂ ತಂದೊರ್ವ ಸುದತಿ ಕೈಯೊಳ್ಕೊಡಲು
ನಂದನಂ ದೈನ್ಯದಿಂ ಮೊಗವನೀಕ್ಷಿಸುತಲಾತನನಪ್ಪಿಕೊಳುತಿರಲ್ಕೆ ೭

ಹರನೋಗರವನುಂಡು ಹರಣವಿಡಿದಿಹುದಿದಂ
ದುರುಳ ಶಿಶುವೆಂದು ಚಿಣ್ಣನ ಶಿರವನರಿಯಲ್ಕೆ
ನೆರೆ ಪಂಚಮುಖ ದಶಭುಜಂಗಳಿಂದಾನೊಪ್ಪಿ ನಿಜರೂಪಮಂ ತೋರುತೆ
ತರುಣಿ ಮೊದಲಾಗಿ ಮಡಿದರ್ಗಸುವ ನೀವುತ್ತೆ
ವರರಜತಗಿರಿಗೆಲ್ಲರಂ ಕೊಂಡುಪೋಗುತ್ತೆ
ಪರಮಗಣಪದವನೊಲಿದಿತ್ತನೈ ನಂಬಿ ಕೊಲ್ಪುಲಿಯಾಂಡರಂ ನೆನೆ ಕಣಾ ೮

ಒಸೆದಾಲಿಸೈ ನಂಬಿ ಮತ್ತೊರೆವೆನಾ ಚೋಳ
ವಸುಮತಿಯೊಳಿಪ್ಪುದಲ್ಲಿ ಸ್ಥಿರಗ್ರಾಮವೆಂ
ದೆಸೆದಿಪ್ಪುದಾ ಪುರದೊಳಿರುತಿರ್ದನೊರ್ವ ಮದ್ಭಕ್ತ ಪೂಸಲರೆಂಬುವಾ
ಪೆಸರಿನಿಂದಿರುತಿರ್ದನೇವೇಳ್ವೆನಾತನ ಸು
ಜಸವ ಕುಲಶೀಲ ವಿದ್ಯಾದಿ ವಿಭವಂಗಳಿಂ
ದಸಮನಾದಾನು ದಯಾಪರತ್ವ ನಿಯಮಂಗಳಿಂದೊಪ್ಪಿರ್ದನಾ ಪಾರ್ವನು ೯

---

೧ ಮಾನ (ಹ)

ಪುರದ ಪಾರ್ವರಿಗೆಯುಂಮುಪಾಧ್ಯನುಂ ತಾನಾಗಿ
ವರವೇದದರ್ಥಂಗಳಂ ತಿಳುಪುವವನಾಗಿ
ನಿರುತದಿಂ ಮಮ ಸಪರ್ಯಾಸಕ್ತ ಸುಖಿಯಾಗಿ ಭಕ್ತರೆನ್ನಾಳ್ದರೆನುತೆ
ಶರಣರಂ ಕಂಡರೆನ್ನಂತರಿದು ಪೂಜಿಸುತೆ
ಕರೆದವರ್ಗೀವುತ್ತೆ ಸಂತಸಂ ಬಡಿಸುತ್ತೆ
ನೆರೆ ಸರ್ವರಿಂದೆ ಸಜ್ಜನರೆಂದೆನಿಸಿಕೊಳುತಹಂಕಾರಮುಳಿದಿರುತ್ತೆ ೧೦

ದೇವಂಗೆ ಯೋಗ್ಯಮಾದಾಲಯುವನೊಡರಿಸಲು
ಭಾವದಿಂ ನೆನೆವುತ್ತೆ ನಿಜಧನಮದಿಲ್ಲದಿರ
ಲಾಪೂರನಾಪೂರನೆಲ್ಲವಂ ತಿರುಗೆ ವಿತ್ತಂ ದೊರೆಯದಂತಾಗಲು
ಏವೇಳ್ವಿನಾತನಲ್ಲಿಂದೊಂದುಪಾಯುಮಂ
ಭಾವಿಸಿದನತುಲ ಲಿಂಗಾಲಯುಂ ಮಾಳ್ಪುದಕೆ
ಪಾವನತರವೆನಿಪ್ಪ ಭಾವದಿಂ ರಚಿಸಲುದ್ಯೋಗಿಸಿದನಾ ಭಕ್ತನು ೧೧

ಭಾವದಿಂ ಶಿಲ್ಪಜ್ಞರಂ ಕರೆಸಿ ಶಿಲೆಗಳಂ
ಭಾವದಿಂ ವಿಸ್ತರಿಸಿ ಗೋಪುರಂ ಮಂಟಪಂ
ಭಾವದಿಂ ರಚಿಸಿ ಸುಪ್ರಾಕಾರಮಂಗೈಸಿ ಸೋಪಾನ ಕೂಪಂಗಳಂ
ಭಾವದಿಂದೆಸಗಿ ವೃಷಭಧ್ವಜಂ ಚಿತ್ರಮಂ
ಭಾವದಿಂ ನಿರ್ಮಿಸಿ ತದಾಲಯುವನಿಂತೆಸಗಿ
ಭಾವದೊಳು ಲಿಂಗಪ್ರತಿಷ್ಠೆಗೆ ಮುಹೂರ್ತಮಂ ಸಾಧಿಸುತ್ತಿರುತಿರ್ದನು ೧೨

ಇಂತೀತನಿರುತಿರಲ್ಕತ್ತ ೧ಕಾಂಚಿಯೊಳು ಭೂ
ಕಾಂತನುನ್ನತದ ಲಿಂಗಾಲಯುಂಗೈಸುತ್ತೆ
ಸಂತಸದಿ ಲಿಂಗಪ್ರತಿಷ್ಠೆಗೆನ್ನಂ ೨ನೆನೆವುತಾತನುಂ೨ ಪಟ್ಟಿರಲ್ಕೆ
ಚಿಂತಿಸದಿರೆಲೆಭೂಪ ಸ್ಥಿರವೆಂಬ ಪುರದಲ್ಲಿ
ಮುಂತೊರ್ವ ವಿಪ್ರಪತಿ ಪೂಸಲನೆನಿಪ್ಪನ
ತ್ಯಂತ ವಿಭವದಿ ಭಾವದಾಲಯುಂ ರಚಿಸಿಹಂ ಲಿಂಗಪ್ರತಿಷ್ಠೆಗಾಗಿ ೧೩

---

೧ ಕಂ (ಹ) ೨ ಗೆನುತಾತನಂ (ಹ)

ನೆರೆ ಸನ್ಮುಹೂರ್ತಮುಮನೀಕ್ಷಿಸುತ್ತಿರುತಿರ್ಪ
ಭರದಿಂದೆ ನಾಂಡೊ ಲಿಂಗಸ್ಥಾಪನಂ ಮಾಳ್ಪ
ನಿರದೆ ನೀಂ ಪೋಗುತಾತಂ ಪೇಳ್ದ ತೆರದಿಂದೆ ರಚಿಸೆನುತ್ತಂ ಸ್ವಪ್ನದಿ
ಒರೆದೆ ನಾ ಭೂಪಂಗೆಯದನರಿವುತವನಿಪಂ
ಸ್ಥಿರಪುರಕ್ಕೈತಂದು ಪೂಸಲರು ರಚಿಸಿರ್ದ
ವರ ಶಿವಾಲಯವೆಲ್ಲಿಹುದು ತೋರಿರೆನಲೆಲ್ಲರಾವರಿಯೆವೆನುತಿರ್ದರು ೧೪

ಮತ್ತವನಿಪತಿಯಾ ಪುರದೊಳಿಪ್ಪ ಭೂಸುರರ
ಮೊತ್ತಮಂ ಕರೆಸಲ್ಕೆ ಬಂದೆಲ್ಲರೋಲೈಸೆ
ಅತ್ಯಂತ ವಿನಯದಿಂ ಬೆಸಗೊಂಡನಿವರೊಳಗೆ ಪೂಸಲರೆನಿಪ್ಪರಾರು
ಸತ್ಯ ಸನ್ಮಹಾತ್ಮರಂ ತೋರಿಸೈಯೆನಲು
ಉತ್ತಮೋತ್ತಮ ಭಕ್ತರಿವರೆಂದು ತೋರಿಸಲು
ಚಿತ್ತದೊಳಗತಿ ಭಕ್ತಿವೆರಸಿ ಪೂಸಲರಡಿಗೆ ಪೊಡಮಡುತ್ತಾ ಪೊಡವಿಪಂ ೧೫

ನುಡಿದನೆಲೆ ಶರಣರೇ ಶಿವಭವನ ನೀವಿಲ್ಲಿ
ಪೊಡವಿಯೊಳು ರಚಿಸಿರ್ದುದಾವುದಿರ್ದುದದೆಲ್ಲಿ
ಮೃಡಮೂರ್ತಿ ಬೆಸಸಲ್ಕೆ ಬಂದೆ ನಾಂ ನೋಳ್ಪೆನದನೆಂತಿರ್ದುದಂ ತೋರಿರೈ
ಒಡೆಯರೇ ಪೂಸಲರೆ ಕರುಣಿಸುವುದೆನುತಲಡಿ
ವಿಡಿದು ಕೊಂಡಾಡುತಿರ್ಪವನಿಪತಿಯಂ ಕಂಡು
ನುಡಿದನಾ ಪೂಸಲಂ ನಿಮಗಿದಂ ಪೇಳಿದಾತನೆ ಬಲ್ಲನಾ ಶಂಕರಂ ೧೬

ನಾನರಿಯೆನೀಮಾತನೇನೆಂದುಸುರ್ದಪೆನು
ಭೂನಾಥ ಕೇಳೆಲೈ ಶಿವನಿಳಯಮಂ ಮಾಡು
ವಾನಂದಪೆನಗಿರ್ದು ವಿತ್ತವಿಲ್ಲದೊಲಾಗೆ ನಿಜಭಾವದೊಳು ಭಕ್ತಿಯಿಂ
ನಾನಾ ನವೀನವೆನೆ ಲಿಂಗಾಲಯಂಗೈದು
ದೇನೆಂದು ತೋರ್ಪೆನೆನೆ ಮತ್ತದಂ ತೋರ್ಪುದೆನೆ
ಸಾನುರಾಗದಿ ಪೂಸಲಂ ತನ್ನ ಹೃದಯಮಂ ಬಗೆದು ತೋರುತ್ತಿರ್ದನು ೧೭

---

೧ ಚೆ (ಹ)

ತೋರಲೊಡನಲ್ಲಿ ಲಿಂಗಾಲಯಂ ಒಳಗಿರಲ್
ಸಾರತರ ಶಿವಲಿಂಗಮೂರ್ತಿಯುದರೊಳಗಿರಲ್
ಪೌರಜನವೆಲ್ಲ ಕಾಣುತ್ತುಚ್ಚರಿಯನಾಂತು ಶರಣೆನುತ್ತಿರುತಿರ್ದುದು
ಧಾರುಣೀಶ್ವರ ಕೈಗಳಂ ಮುಗಿದು ನಿಂದಿರಲ್
ಚಾರು ನಿಜರೂಪದಿಂದಲ್ಲಿ ನಾಂ ಶೋಭಿಸಲು
ಭೂರಿ ವಾದ್ಯಧ್ವನಿಗಳಂಬರದೊಳಾಗೆ ಪೂಮಳೆಗರೆದುದಾಕ್ಷಣದೊಳು ೧೮

ಸಲ್ಲಲಿತ ನಂದೀಶ ಪುಷ್ಪಕವನುಂ ಕೊಂದು
ನಿಲ್ಲದೈತರಲು ಪೂಸಲರನಾನಪ್ಪುತ್ತ
ಲಲ್ಲಿ ಪುಷ್ಪಕದಿ ಕುಳ್ಳಿರಿಸುತ್ತೆ ರಜತಗಿರಿಯಂ ಪೊಗುತ್ತೊಲವಿನಿಂದೆ
ಎಲ್ಲಾ ಗಣಾಧಿಪರ್ಗೀತನಂ ತೋರಿಸುತೆ
ಬಲ್ಲಿದನೆನುತ್ತವಗೆ ರುದ್ರಪದವಿಯನಿತ್ತು
ಉಲ್ಲಾಸದಿಂದಿರ್ದೆನೆಲೆನಂಬಿ ನೀನು ಪೂಸಲರಡಿಗಳಂ ಚಾನಿಸೈ ೧೯

ಕೇಳಯ್ಯ ನಂಬಿ ಭಾಗೀರಥೀತೀರದೊಳು
ಮೇಲೆನಿಪ ಪುಣ್ಯಫಲದೊಬ್ಬುಳಿಯೊಲೆಸೆದುದು ವಿ
ಶಾಲವಹ ಕಾಂಚಿಬಿಳಿಯೆನಿಪ್ಪ ಪುರವಲ್ಲಿರ್ದನೊರ್ವ ಭಕ್ತಾಗ್ರೇಸರಂ
ಲೀಲೆಯಿಂ ಚಾಡಕುಲದೊಳು ಪುಟ್ಟಿ ತತ್ಕುಲದ
ಶೀಲದಿಂ ವಸನಂಗಳಂ ನೆಯ್ದು ಭಕ್ತಪ್ರ
ಜಾಲಮಂ ತುಷ್ಟಿವಡಿಸುತ್ತ ನೈಸರನೆಂಬ ಪೆಸರಿನಿಂದೊಪ್ಪಿರುತ್ತೆ ೨೦

ಘನವೆನಿಸುವೆನ್ನ ಮಹಾತ್ಮ್ಯಕ್ಕೆ ತಲೆದೂಗಿ
ಮನದೊಳಗೆ ಬೇರಿಲ್ಲದರ್ಚಿಸುತೆ ಸುಖಿಯಾಗಿ
ನೆನಹಿನಿಂದೆನ್ನ ರೂಹಂ ಕಾಣುತೊಳಗೊಳಗೆ ಹಿಗ್ಗುತ್ತೆ ಹಾರೈಸುತೆ
ಮನಸಿಜಾಂತಕ ರೂಪ ಜಂಗಮವೆನುತ್ತರಿವು
ತನುವಿನಿಂದವರ್ಗೆ ವಸ್ತ್ರಾಳಿಗಳನೀವುತ್ತ
ಲನುದಿನದೊಳಿಂತಿರಲ್ಕಾತನ ಮನಂ ನೋಳ್ಪೆನೆಂದಾನು ಯೋಚಿಸುತ್ತೆ ೨೧

---

೧ ರ್ವ (ಹ) ೨ ಬ (ಹ) ೩ ಬ (ಹ)

ಗಿರಿಜೆಯುಂ ನಾನುಮೀರ್ವರು ವೃದ್ಧ ವೇಷಮಂ
ಧರಿಸುತ್ತೆ ಭಕ್ತರಂತಿರ್ದು ನೈಸರನ ಮಂ
ದಿರದ ಮುಂದಂ ನಿಂದು ಶೀತದಿಂ ನಡುಗುತ್ತ ಪಲ್ಗಳಿಂ ಗುರುಗುಟ್ಟುತಾ
ಹರಭಕ್ತ ಕೇಳೆಮಗೆ ಹೊದೆಯಲೊಂದರಿವಿಲ್ಲ
ನೆರೆಯೆನ್ನ ಸತಿಯ ಚಳಿಯಿನಿತು ತಡೆಯುವಳಲ್ಲ
ಭರದಿಂದಲರಿವೆಯಂ ಕೊಟ್ಟಂಡಾಂವೀರ್ವ್ವರುಳಿವೆವು ಕರುಣಸೈ ನೈಸರ ೨೨

ಎನಲವಂ ಕೇಳುತ್ತಲೆಲೆ ದೇವ ನೈದಿತ್ತ
ಪೆನು ಸೈರಿಸುವದೆನಲು ಬೇಡೀಗಳೀವುದೆನೆ
ವನಿತೆಯುಂ ನಾನೀರ್ವ್ವರುಟ್ಟುದಲ್ಲದೆ ಮನೆಯೊಳಿನಿತಾದರರಿವೆಯಿಲ್ಲ
ಕ್ಷಣವು ಸೈರಿಸಿದಡಿತ್ತಪೆನೆನಲು ಬೇಡಿದಾ
ಕ್ಷಣವೀಯದಿರಲದೇಂ ಫಲವೆನಲ್ಕೇಳುತ್ತೆ
ಘನ ಭಕ್ತಿಯಿಂದೆ ಲಜ್ಜಾಭಾವಮಂ ತೊರೆದು ತಾನುಟ್ಟುದಿತ್ತನೆಂದು ೨೩

ಶರಣನಿತ್ತನುಪಮದ ಭಕ್ತಿಗಾಂ ಮೆಚ್ಚುತ್ತೆ
ನೆರೆಯೆನ್ನ ನಿಜರೂಪಮಲ್ಲಿ ವಿಸ್ತರಿಸುತ್ತೆ
ಪರಮ ಸದ್ಭಕ್ತನಂ ಸಂತಸದಲಪ್ಪುತ್ತೆ ಪುಷ್ಪಕವನೇರಿಸುತ್ತೆ
ವರರಜತಗಿರಿಗೆ ಕೊಂಡೊಯ್ದು ಗಣಪದವಿಯಂ
ಸರಸದಿಂದಿತ್ತೆ¹ನಿದರಿಂದೆ ನೀನೀಗ ನೈ
ಸರನ ಪದಪದ್ಮಗಳನೈದೆ ನೆನೆಯುತ್ತ ಕೊಂಡಾಡುತಿರು ಸೌಂದರೇಂದ್ರಾ ೨೪

ಮತ್ತೊರ್ವ ಶರಣನಿತಿಹಾಸಮಂ ಪೇಳ್ವೆ² ನಾಂ
ಚಿತ್ತವಿಟ್ಟಾಲಿಸೈ ನಂಬಿ ಚೋಳಾವನಿಯೊ
ಳತ್ಯಂತ ಪುಣ್ಯಪ್ರಭಾಲಹರಿಯಿಂದೆ ಕಾವೇರಿಯೆಂದೆಂಬ ನದಿಯು
ಉತ್ತಮೋತ್ತಮವೆನಿಸಿಸಲ್ಕದರ ತೀರದೊಳು
ಬಿತ್ತರದೊಳೆಸೆದಿರೆ ಮಹೋ³ದ್ಯಾನಮಲ್ಲಿಯಾ
ಚಿತ್ತಮೆನಲೊಪ್ಪಿತ್ತು ಚಂದ್ರ ಪುಷ್ಕರಣೆಯೆಂದೆಂಬ ನಿರ್ಮಲ ತೀರ್ಥವು ೨೫

---

೧ ಡೆ (ಹ) ೨ ನ (ಹ) ೩ ಧ್ಯಾ (ಹ)

ಅಲ್ಲಿ ಕೇಳ್ಮತ್ತಾವಗಂ ಪರೀಕ್ಷಿಸಲು ಮಿಗೆ
ಪಲ್ಲವಗಳಿಂ ಪುಷ್ಪ ಫಲಹಾರದಿಂದೊಂದು
ಸಲ್ಲಲಿತ ಶ್ವೇತ ಜಂಬೂವೃಕ್ಷವಿರಲದರ ಮೂಲದೊಳಗಧಿಕವಾದ
ಉಲ್ಲಾಸಕರವೆನಿಪ ಲಿಂಗವಿರಲಾ ತಾಣ
ದಲ್ಲೊಂದು ಶುಭ್ರಮಾತಂಗವೀಲಿಂಗಕ್ಕೆ
ಮೆಲ್ಲನಾ ಸೊಂಡಿಲಿಂದುದಕಮಂ ತಂದು ತಲ್ಲಿಂಗಕಭಿಷೇಕವೆರದು ೨೬

ನವ ಸುರಭಿ ಪುಷ್ಪಂಗಳಿಂ ಪೂಜೆಗೈವುತ್ತ
ಸುವಿಲಾಸದಿಂದಿರ್ದ ಕಾಂಲಂದಿ ತದ್ವನಕೆ
ಭುವಿಯೊಳು ಗಜಾರಣ್ಯಮೆಂಬ ಪೆಸರಾಗಿರಲ್ಮತ್ತಮಾ ತಾಣದಲ್ಲಿ
ಶಿವಭಕ್ತಿಯುಕ್ತಮಪ್ಪೊಂದು ಕೀಟಕವಲ್ಲಿ
ಶಿವಲಿಂಗಮೂರ್ತಿಯಂ ಕಾಣುತ್ತ ತಾನಲ್ಲಿ
ಭವಹರನ ಮೇಲೆ ಮೇಲ್ಕಟ್ಟಿನಂದದೊಳಿನ್ನ ನೂಲ್ಗಳಿಂ ನೆಯ್ವೆನೆಂದು ೨೭

ಮನದೊಳರಿದಾತ್ಮ ಜಠರದೊಳಿರ್ದ ತಂತುಗಳ
ನನುವಿನಿಂ ವನಜ ತಂತುಗಳಿಗತಿ ಸೂಕ್ಷ್ಮವೆಂ
ದೆನಿಸಿ ಚಾ೨ತು೨ರ್ಯಮಯವೆನಿಸಿ ಕಾಲಾಂತಕಗೆ ಮರೆಯೆನಿಸುವಂತೆ ನೆಯ್ದು
ಘನಲಿಂಗ ಮೂರ್ತಿಯಂ ಸೇವಿಸುತೆ ತಾನಲ್ಲಿ
ಗುಣಗರ್ಭವಿಂತಿರಲ್ಕೊಂದಿನಂದದೊಳು ಗಜ
ವನಘಲಿಂಗವನರ್ಚಿಪಾಸಕ್ತಿಯಿಂದಲೈತಂದುದತಿ ಭರದಿಂದಲಿ ೨೮

ಬಂದಲ್ಲಿ ಮೇಲಿದ್ದ ಮೇಲ್ಕಟ್ಟನೀಕ್ಷಿಸು
೩ತ್ತಂ೩ದು ಕರದಿಂದದಂ ಪರಿದು ಪೂಜೆಯನೆಸಗ
೪ಲುಂ೪ ದುಗುಡದಿಂ ಕೀಟಕಂ ಕಂಡು ಸೋಜಿಗಂಬಡುತೆ ಕೋಪವನಾನುತೆ
ಇಂದಿದಕ್ಕಾವ ಗತಿ ಲಿಂಗದುರು ಮಸ್ತಕದಿ
ಚಂದದಿಂ ತರಗೆಲೆಗಳೆರಗುವವೆನುತ್ತಿಲ್ಲಿ
ಬಂಧುರದ ಮೇಲ್ಕಟ್ಟೆನಿಸಿ ನೆಯ್ದುದನೆಲ್ಲ ಪರಿದಿಕ್ಕಿತೀ ಕರಿವರಂ ೨೯

೧ ಠ (ಹ) ೨ ತೂ (ಹ) ೩ ತ್ತೊಂ (ಹ) ೪ ಲಂ (ಹ)

ಈಡಲ್ಲ ಯುದ್ಧಮಂ ಪೂಕ್ಷ್ಪಡಿದರೊಡನೆನಗೆ
ನಾಡೆ ನಾಂ ಸುಮ್ಮನಿರ್ದಡೆ ಪಾಪವಿಂದೆನಗೆ
ನೋಡಲಾರದೆ ಸತ್ತಡಾತ್ಮಘಾತುಕವಿಲ್ಲಿ ಬೇಡೊಂದಡಿದು ಕೇಳದು
ಗಾಢದಿಂ ಸಿಂಗಮಿದನೇಕೆ ಕೊಲ್ಲದು ದೇವ
ಕಾಡಿನೊಳಗಿದನಾರು ಕೊಂಡೊಯ್ಯರೇ ದೇವ
ರೂಢಿಯೊಳು ಮತ್ತೊಂದು ವನವಿಲ್ಲವೇನಿದಕೆ ರೋಗಮಿದಕೇಕುದಿಸದು ೩೦

ಎಂದಿಂತು ಪರಿಯಿಂದೆ ಚಿಂತಿಸುತ ನೇಯುತಿರೆ
ಬಂದು ಗಜವಿದು ರಚಿಸಿದುದನೆಲ್ಲ ಕೆಡಿಸುತಿರೆ
ಸಂದವೀ ತೆರದಿಂದೆ ಕೆಲವು ದಿನ ಕೀಟಕಂ ಚಿಂತಿಸುತ್ತಾಳೋಚಿಸಿ
[1]ಒಂದುಪಾಯಂ ಕಂಡು ಲಿಂಗದ ಪರದಿ ಶಾಂತ
ದಿಂದಡಗಿ ನೋಡುತ್ತಲಲ್ಲಿರಲ್ಕನಿತರೊಳು
ಸಿಂಧೂರವೈತಂದು ತಂತುವಂ ಪರಿದಿಕ್ಕಿ ಮಜ್ಜನಕ್ಕೆರೆದು ಮುದದಿ ೩೧

ಕುಸುಮಂಗಳಂ ಧರಿಸುತಿರ್ಪ ಸಮಯದೊಳಲ್ಲಿ
ಪಸರಿಸಿದ ಶುಂಡಾಲದೊಳು ಪೊಕ್ಕು ಕೀಟಕಂ
ನಿಶಿತ ಕೋಪದೊಳಂತರಾಳದ ಕಪೋಲ ಸೂಕ್ಷ್ಮಸ್ಥಾನದೊಳಗೂರಲು
ಕಸವಿಸಿಗೊಳುತ್ತ ಕೋಟಲೆಯಗೊಳುತ್ತಿ[2]ಭಪತಿಯು
ಅಸುವಿಗುಬ್ಬಸಮಾಗೆ ಫೂತ್ಕಾರವಾತದಿಂ
ದೆಸೆ ದೆಸೆಯ ಸುತ್ತಿ ಬಿದ್ದಳಿದುದಾ ಭದ್ರೇಭವೊಳಗಿರ್ದ ಕೀಟವಳಿಯೆ ೩೨

ನಾನಲ್ಲಿ ನಿಜರೂಪದಿಂದಿರ್ದು ಕರಿವರಗ
ನೂನವರವಿತ್ತು ತತ್ಕೀಟಮಂ ನೋಡುತ್ತೆ
ಸಾನುರಾಗದೊಳದಕಸುವನಿತ್ತು ನುಡಿಸುತ್ತೆ ಮತ್ತದಕ್ಕಾಜ್ಞೆಯಿತ್ತೆ
ಭೂನಾಥನಹ ಚೋಳನಂಗನೆಯು ಕಮಲವತಿ
ಮಾನಿತಳೆನಿಸಿ ಭಕ್ತಿಯುತಳೆನಿಸಿ ಮೆರೆಯುತಿಹ
[3]ಳಾ ನಾರಿ ಸುತರಿಲ್ಲವೆಂದು ತಿರುವಾಲೂರ ಲಿಂಗಮಂ ಪೂಜಿಸಲ್ಕೆ ೩೩

---

೧ X (ಹ) ೨ ಭೃತಿ (ಹ) ೩ ತ (ಜ)

೨೩೧

ಆ ಸಖಿಯ ಭಾವಕ್ಕೆ ಮಚ್ಚುತ್ತಲೆಲೆ ಮಗಳೆ
ಭಾಸುರವೆನಿಪ್ಪ ಸುತನಂ ಕೊಡುವೆ ಪೋಗೆಂದು
ಲೇಸಾಗಿ ನುಡಿದಿಹೆಂ ನಾನು ತತ್ಕಾರ್ಯಾರ್ಥಮಾಗಿಯಾ ಕಮಲವತಿಗೆ
ಕೂಸಾಗಿ ಪುಟ್ಟಿ ಲೋಕದಿ ಭಕ್ತಿಯಂ ರಚಿಸಿ
ಯೋಸರಿಸದಂತಖಿಳ ಭೋಗಂಗಳಿಂ ಸುಖಿಸಿ
ಆ ಸುರುಚಿರತ್ವದಿಂದೆನ್ನನುಂ ಕಂಡು ಗಣಸಂತತಿಯೊಳಿರುವುನೆಂದು ೩೪

ಒರೆದು ನಾನಂದು ಮರೆಯಾಗಲಾ ಕೀಟನುಂ
ಭರದಿಂದೆ ತಜ್ಜನ್ಮಮಂ ತೊರೆದು ಚೋಳ ಭೂ
ವರನಂಗನೆಯ ಗರ್ಭದೊಳು ಪುಟ್ಟಿ ಕಳಚಂಗರೆಂಬ ನಾಮವನೆ ತಳೆದು
ಸರಸದಿಂ ಬೆಳೆಯಲಾತಂಗೆ ಪಟ್ಟವ ಕಟ್ಟಿ
ವರ ತಪಶ್ಚರ್ಯದಿಂ ಪಿತನತ್ತ ಪೋಗಲ್ಕೆ
ಪರಮಭಕ್ತಿಜ್ಞಾನನಿಧಿಯೆನಿಸಿ ಕಳಚಂಗ ರಾಜ್ಯಮಂ ಪಾಲಿಸುತ್ತ ೩೫

ಸಂತಸದೊಳಿರುತಿರ್ದು ಮೊದಲೊಳಾತ್ಮಜ್ಞಾನ .
ಮಂ ತೋರಿದನನರಿದು ಶ್ರೀಗಜಾರಣ್ಯಕ್ಕೆ
ತಾಂ ತಳರ್ದಲ್ಲಿರ್ಪ ಶ್ವೇತಜಂಬೂವೃಕ್ಷಮೂಲದೊಳು ರಾರಾಜಿಪ
ಅಂತಕಾಂತಕ ಲಿಂಗಮೂರ್ತಿಗಾಲಯುವನ
ತ್ಯಂತ ವಿಭವದೊಳೆಸಗಿಸುತ್ತ ಮತ್ತಿತ್ತತ್ತ
ಸಂತಸದಿ ಲಿಂಗಾಲಯಂಗಳಂ ಮಾಡಿಸುತೆ ಭಕ್ತರ್ಗೆ ಧನವೀವುತೆ ೩೬

ಘನವೆನಿಸುತಿರ್ಪ ತಿರುವಾರೂರ್ಗೆ ನಡೆತಂದು
ಮಿನುಗುತಿಹ ಲಿಂಗಮೂರ್ತಿಗೆ ಪೊಡಮಡುತ್ತಂದು
ವಿನಯದಿಂ ಸರ್ವೋಪಚಾರಂಗಳಿಂದಲರ್ಚಿಸಿ ನುತಿಸಿ ಪುರದೊಳಿರ್ಪ
ಅನಘರೆಂದೆನಿಸಿ ಮೆರೆವುತ್ತಿರ್ಪ ಭಕ್ತರಿಗೆ
ವಿನುತವೇದವ್ರತಾಚಾರ ಸಂಪನ್ನರಿಗೆ
ಅನಿತಿನಿತುಮೆಂದು ಪೇಳಲ್ಕರಿದೆನಿಸುವಂತೆ ಮತ್ತವರ್ಗೆ ವಿತ್ತವಿತ್ತಂ ೩೭

---

೧ ರ್ಗೆ (ಹ) ೨ ರ್ಗೆ (ಹ) ೩ ವೆಂ (ಹ)

ಎಲ್ಲರಂ ತುಷ್ಟಿವಡಿಸಲ್ಕವಂಗಾಂ ಮೆಚ್ಚಿ
ಸಲ್ಲಲಿತ ಪುಷ್ಪಕವನುಂ ಕಳುಹಿಸಲ್ಕಾತ
ನುಲ್ಲಾಸದಿಂದೆ ತತ್ಪುಷ್ಪಕದಿ ಮೆರೆವುತ್ತಲೆನ್ನ ರಜತಾಚಳಕ್ಕೆ
ನಿಲ್ಲದೈತರಲವಂಗತುಲ ಗಣಪದವಿಯುಮಂ
ನಲ್ಲಿ ನಾನಿತ್ತೆನೈ ಸೌಂದರಾಧಿಪ ಕೇಳು
ಲಲ್ಲೆ ನುಡಿಯಿಂದೆ ಕಳಚಂಗರಡಿದಾವರೆಗಳಂ ಬಿಡದೆ ಮಿಗೆ ಪೊಗಳೆಲೈ ೩೮

ಒರವೆನಾಲಿಸು ನಂಬಿ ಮತ್ತೊರ್ವ ಶರಣನ ಸು
ಚರಿತೆಯಂ ಚೋಳಾವನೀತಳಕ್ಕರಸೆನಿಸಿ
ಪರಿಶೋಭಿಸುತ್ತಿರ್ದನಖಿಲ ಸದ್ಭಕ್ತರೊಳು ಮೇಲೆನಿಸಿ ಲೀಲೆಯಿಂದೆ
ಕರಿಕಾಲಚೋಳನೆಂದೆಂಬ ಭೂಧವನಿರು
ತ್ತಿರಲವನ ರಾಜಧಾನಿಯೊಳಶ್ವರಕ್ಷಣದ
ನೆರೆ ಕಾಯಕಂ ತಾಳುತಂಲ್ಲಿರ್ದನೆನ್ನವಂ ಮಾದಾರ ಚೆನ್ನನೆಂಬ ೩೯

ಲಿಂಗಾನುಭಾವಿ ಲಿಂಗಪ್ರಾಣಿ ಶಾಶ್ವತಂ
ಮಾಂಗಲ್ಯಕಾಯನತಿಗುಪ್ತ ಮಾಹೇಶ್ವರಂ
ಸಂಗಡಿಸಿದುರು ಮುಗಿಲ ಮರೆಯಿಂದುವಿನ ತೆರದಿ ಕಾಷ್ಠದ ಮರೆಯ ಕಿಚ್ಚಿನೊಲ್
ರಂಗಿಸುವ ತಿಲದ ಮಱರೆಯಣ ತೈಲದಂತೆ ಮ
ತ್ತಂ ಗಂಹರದ ಮರೆಯೊಳಿಹ ನಿಃಧಾನಃದೊಲಿಂತು
ಕಂಗೊಳಿಸುತಿರುತಿರ್ದನಿತರರರಿಯದ ತೆರದಿ ಲಿಂಗಾರ್ಚನೆಯ ಭಕ್ತಿಯಿಂ ೪೦

ಉದಯ ಸಮಯದೊಳೆದ್ದು ಕಾನನಕೆ ನಡೆತರುತೆ
ಪದಪಿಂದೆ ತಾಂಪಿಡಿದ ಕಾಯಕಮನೆಡೆಗೊಳುತೆ
ವಿಽದಿಽತ ನಿರ್ಮಳ ನದೀತೀರದೊಳು ಮಘಮಘಿಪ ಮಲ್ಲಿಗೆಯ ಮಂಟಪದೊಳು
ಚದುರವಹ ತಳಿರ ಹಸೆಯಂ ಹಾಸಿ ಬಾರಯ್ಯ
ಸದಮಳವೆನಿಪ್ಪ ಲಿಂಗವೆಯೆಂದು ಕರೆವುತ್ತ ೪೧
ಮುದದಿಂದೆ ಸಜ್ಜೆಯೊಳಗಿಪ್ಪ ಲಿಂಗವನು ಸಿಂಹಾಸನದ ಮೇಲಿರಿಸುತೆ

---

೧ ಲಿ (ಜ) ೨ ನೆ (ಹ) ೩ ನಾದ (ಹ) ೪ ಧ (ಹ)

ಸರಸತರ ನೇಹದಿಂ ಪೂರೈಸಿ ಹಾರೈಸಿ
ಪರಿಮಳದ ತಿರುಳೆನಿಪ ಮೊಲ್ಲೆ ಮಲ್ಲಿಗೆಗಳಿಂ
ಹರವರಿಯ ಕಂಪಿಡುವ ಸಂಪಗೆಯರಳ್ಗಳಿಂ ಲಿಂಗಮಂ ಪೂಜಿಸುತ್ತೆ
ಪರಮ ಪರಿತೋಷದಿಂ ೧ಹಾಂಡುತ್ತೆ ನೋಡುತ್ತೆ
ವರ ಚೂತಫಲವನಾರೋಗಿಸಲ್ಕೀವುತ್ತೆ
ಕರುಣ ಪ್ರಸಾದಮಂ ಕೈಕೊಂಡು ತೃಣಜಾಲಮಂ ಕೊಯ್ದು ತಂದು ನೃಪನ ೪೨

ತುರಗ ನಿಳಯದೊಳಿಕ್ಕುತೊಡನೆ ತನ್ನಾಲಯಕೆ
ಭರದಿಂದೆ ಬರಲು ತಮ್ಮರಸಿಯರು ಮುದದಿಂದೆ
ಸರಸದಂಬಲಿಯನಿಕ್ಕಲು ಲಿಂಗಮೂರ್ತಿಗೀವುತ್ತದಂ ತಾಂ ಸವಿವುತೆ
ನಿರುತದಿಂದೀ ತೆರದೊಳಿರುವತ್ತು ವತ್ಸರಂ
ಸರೆ ಸಂದವಾ ಚೆನ್ನನಂ ಧರೆಗೆ ಪೊಸತೆನಿಸಿ
ಮೆರೆಯಿಸುವನೆಂಬೆಣಿಕೆಯಿಂದಿರಲ್ಕೊಂದು ದಿನ ಚೆನ್ನನೊಡನಾನುಣುತಿರೆ ೪೩

೨ಳು ಸವಿಯನೇನೆಂಬೆನೆಲೆ ನಂಬಿ ನಾನುಂಡು
ಸೂಸುವಾನಂದದಿಂದಿರುತಿರಲ್ ಚೋಳನೃಪ
ನಾ ಸಮಯದೊಳು ನಿತ್ಯ ನೇಮಾರ್ಚನಕ್ಕೆ ಲಿಂಗಾಲಯಕ್ಕೈತರುತ್ತೆ
ಭಾಸುರದ ಲಿಂಗಮಂ ಕಾಣುತ್ತ ಕೈಮುಗಿದು
ಈಶನೆ ಜಯಜಯವೆನುತ್ತಲ್ಲಿ ಕುಳ್ಳಿರ್ದು
ಆ ಸುಶೀಲತ್ವದಿಂ ಭಸ್ಮ ರುದ್ರಾಕ್ಷಿಯಂ ತಳೆವುತ್ತ ತನ್ನಂಗದಿ ೪೪

ತಲ್ಲಿಂಗ ಮೂರ್ತಿಗಾನಂದದಿಂ ಪೂಜಿಸುತೆ
ನಿಲ್ಲದೆ ಪ್ರದಕ್ಷಣಂಗೈದು ತಾಂ ನಮಿಸುತ್ತ
ಲಲ್ಲಿರಲ್ಕನಿತಕ್ಕೆ ನಡೆತಂದುದ್ದೈ ಬೋನವೇನೆಂಬೆನಾ ಸಡಗರಂ
ಸಲ್ಲಲಿತ ದೇವಾನ್ನ ದಿವ್ಯಾನ್ನವಮೃತಾನ್ನ
ವೆಲ್ಲಮುಂ ಮುನ್ನೂರು ಹೊನ್ನ ಹರಿವಾಣಂಗ
ಳಲ್ಲಿ ತಂದಿಕ್ಕುತ್ತ ಶಾಖಪತ್ರಂಗಳ್ಗೆ ಕೆಲವು ಬಟ್ಟಲಿಲ್ಲಡುತ ೪೫

---

೧ ದಾ (ಹ) ೨ ಹೇ (ಹ)

ಹಪ್ಪಳಂ ವ್ಯಂಜನಾದಿಗಳು ಕೆಲವಲ್ಲಲ್ಲಿ
ತುಪ್ಪವುಂ ಕೆನೆಮೊಸರು ಸಕ್ಕರಿಯುದಲ್ಲಲ್ಲಿ
ಒಪ್ಪುವ ಪಲವು ಭಕ್ಷ ಪಾಯಸಂಗಳನ್ನೈದೆ ಬಿಡಬಿಡದಲೆಡೆಮಾಡುತೆ
ಉಪ್ಪುಗಾಯುಂ ಕೆಲದೊಳೊಪ್ಪೆ ಬಡಿಸುತ್ತುಮಿರೆ
ತಪ್ಪದಂತಲ್ಲಲ್ಲಿ ಷಡ್ರಸವನಿರಿಸುತಿರೆ
ಅಪ್ಪ ಸದ್ಗುರುಲಿಂಗಮೂರ್ತಿ ನೀನುಣ್ಣೆಂದು ನಮಿಸಿ ಜವನಿಕೆಯನಿಳುಹಿ ೪೬

ಜವನಿಕೆಗೆ ಕಿವಿಯೊಡ್ಡಿ ನೃಪನಾಲಿಸುತ್ತುಮಿರೆ
ಸವಿವ ೧ದೂನಿಗಳನೆಂದಿನಂತೆ ಹಾರೈಸುತಿರೆ
ಎವೆದೆರೆದು ನೋಡದಾರೈಸದಾಸಿಸದೆ ಮುಟ್ಟದೆ ಸುಮ್ಮನಾನಿರಲ್ಕೆ
ತವಕದಿಂದಾ ಚೋಳ ಜವನಿಕೆಯನೋಸರಿಸಿ
ವಿವಿಧಾನ್ನವೆಲ್ಲವಿದ್ದಂತಿದ್ದುದಂ ಕಂಡು
ಶಿವಶಿವ ಶಿವಂ ಸವಿಯು೨ದಾದು೨ ನಾಂ ಕೆಟ್ಟೆನೆನುತಾ ರಾಜನುರವಣಿಸುತೆ ೪೭

ಕಿತ್ತಲಗನೆತ್ತಿಕೊಂಡಾ ಭೂಪ ಕೊರಳಲ್ಲಿ
ಒತ್ತಿ ಹೂಡುತ್ತುಮಿರೆ ಕಾಣುತ್ತ ನಾನಲ್ಲಿ
ತತ್ತರಿಸುತೋಹೋ ವಿಚಾರವಿಲ್ಲದೆಯಿಂತು ಮಾಳ್ಪರೇನಯ್ಯ ಚೋಳ
ಆತ್ಮಧಿಕದರಸುತನವೆಮ್ಮೊಡನೆ ತೋರ್ಪರೇ
ಮತ್ತೆ ನಿಮ್ಮಯ ಸತ್ವವೆಮ್ಮಲ್ಲಿ ಮಾಳ್ಪರೇ
ಚಿತ್ತದೊಳಗಿನಿತು ಸೈರಣೆಯಿಲ್ಲವೈ ನಿನಗೆ ಹಸಿವಿಲ್ಲವಿಂದುಯೆನಗೆ ೪೮

ಓತು ಮಾದರ ಚೆನ್ನನೊಡನುಂಡೆನೆಲೆ ೩ಚೋಳ೩
ಕೂತು ಮಾದರ ಚೆನ್ನನೊಡನುಂಡೆನೆಲೆ ಚೋಳ
ಚಾತುರ್ಯವೆನಿಪಂಬ೪ಕಳದ ಸವಿಯಂ ಏನದೆಂದೂಹಿಸುವೆ ಭೂವರ
ನೂತನವೆನಿಪ್ಪ ಪಕ್ವಾನ್ನಂಗಳದಕಲ್ಲ
ಸಾತಿಶಯ ದೇವಾನ್ನವಮೃತಾನ್ನವೆಣೆಯಲ್ಲ
ಚೂತಫಲ ದ್ರಾಕ್ಷಾಫಳಂಗಳಿನಿದಾ ಚೆನ್ನನಂಬಲಿಗೆ ಸರಿಯದಲ್ಲ ೪೯

---

೧ ಧ್ವ (ಹ) ೨ ಧೋದದ (ಹ) ೩ X (ಹ) ೪ + ಲಿ (ಹ)

ಎಂದು ನುಡಿದಾ ಲಿಂಗದೊಳು ಪೊಗಲು ಕಾಣುತಂ
ನಿಂದು ಚೋಳಂ ಕೌತುಕಂ ಮಿಕ್ಕು ನೋಡುತಂ
ನೊಂದು ಬೆರಗಾಗಿ ಬೆಂಡಾಗಿ ತನ್ನುರದೊಳಾ ಚೆನ್ನನಂ ಚಿಂತಿಸುತ್ತೆ
ಮುಂದಣಡಿಯಿಡುತಲಾ ಚೆನ್ನನಂ ನೆನೆವುತ್ತೆ
ಇಂದುಧರ ರೂಪವೋ ಚೆನ್ನಯ್ಯನೆಂದೆನುತೆ
ಮಂದೃಪ ಜನದ ಸಂದಣೆಯೊಡನೆ ಚೆನ್ನ ಚೆನ್ನಾಯೆನುತ್ತಾತ್ಮಲ್ಪರಿವುತೆ ೫೦

ಪರಮಂಗೆ ಉಣಲಿತ್ತ ಶರಣನಂ ನೋಡುವೆಂ
ಹರುಷದಿಂ ನಾನವರ ಕ [illegible] ಮಂ ಸೂಡುವೆಂ
ಸರಸರನೆ ನಡೆಯೆನುತ ಪೊರಮಟ್ಟನಾ ಚೋಳ ನಡೆದರಿಯದಚ್ಚ ಸುಖಿಯು
ನೆರೆದರುಂ ನಿಂದರಂ ಚೆನ್ನನಂ ಕೇಳುತಂ
ಭರದಿಂದೆ ಬರುವರಂ ಚೆನ್ನನಂ ಕೇಳುತಂ
ಸರಸಗುಣಶರಧಿ ಚೆನ್ನಯ್ಯನಂ ಕಾಣರೇ ಎನ್ನಯ್ಯನಂ ಕಾಣರೇ ೫೧

ಎನ್ನ ಗುರುಯೆನ್ನರಸ ಚೆನ್ನನಂ ತೋರಿರೇ
ಎನ್ನ ಗತಿಯೆನ್ನಮತಿ ಚೆನ್ನನಂ ತೋರಿರೇ
ಎನ್ನ ನಿಧಿಯೆನ್ನ ಸುಧೆಯೆನ್ನಣ್ಣನೆನಿಪ ಚೆನ್ನಣ್ಣನಂ ತೋರಿರಯ್ಯಾ
ಎನ್ನ ಶಿವನೊಡನುಂಡ ಚೆನ್ನನಂ ತೋರಿರೈ
ಎನ್ನ ಮೃಡನೊಡನಿರ್ದ ಚೆನ್ನನಂ ತೋರಿರೈ
ಎನ್ನ ಚಿನ್ನಂ ರನ್ನ ಚೆನ್ನನಂ ತೋರಿಯೆನ್ನಂ ಕಾಡು ಕೊಳ್ಳಿರಯ್ಯಾ[1] ೫೨

ಅಯ್ಯೋ ಶಿವಾ ಚೆನ್ನನಾವತಾಣದೊಳಿರ್ಪ
ನಯ್ಯೋ ಭವಾ ಚೆನ್ನನಾಲಯವದೆಲ್ಲಿರ್ಪ[2]
ದಯ್ಯೋ ಮೃಡಾ ಚೆನ್ನನಾವ ಸೌಂದರ್ಯ ರೂಪಿನೊಳಿರ್ಪನಯ್ಯೋ ಹರಾ
ಅಯ್ಯೋ ಮಹಾದೇವ ಆಪೊತ್ತು ಕಾಣ್ಬೆನೋ
ಅಯ್ಯೋ ಪದದ್ವಯವನೆಂತಪ್ಪಿಕೊಂಬೆನೋ
ಅಯ್ಯೋ ಸದಾಶಿವ ಶಿವಾಧವಯೆನುತ್ತಾತನಡಿಗಳಂ ಜಾನಿಸುತ್ತೆ ೫೩

---

೧ ರೈ (ಹ) ೨ ಯೌವನದಲ್ಲಿರ್ದು (ಹ)

ಅಂದಲ್ಲಿ ದೆಸೆದೆಸೆಗೆ ಚಾರರಂ ಕಳುಪಲ್ಕೆ
ಸಂದಣಿಸಿ ಪಡಿಹಾರರರಸುತ್ತಲೈಂದು
ಮುಂದಿರ್ದ ಪಿರಿಯ ಕೇರಿಯನುರವಣಿಸಿ ಪೊಕ್ಕು ಚೆನ್ನನಂ ಹುಡುಕುತ್ತಲೀ
ನಿಂದು ಚೆನ್ನನ ನಿಳಯವಾವುದೆಂದರಸುತಿರೆ
ಬಂದು ಚೆನ್ನನ ಗುಡಿಲಿದೇ೧ಯೆಂ೧ದು ತೋರುತಿರ
ಲಿಂದು ಡೆನ್ನಯ್ಯನೊಳಗಿಹನೆಂದು ಪೇಳಲವನೊಳಗರಿದು ಕಂದಿ ಕುಂದಿ ೫೪

ಅರಮನೆಯ ಚಾರರೇಕಾನೇಕೆ ಶಂಕರಾ
ಅರಸೇಕೆಯೆನ್ನ ಮನೆಯೇಕೆ ಶಶಿಶೇಖರಾ
ಹರಭಕ್ತನೆಂದರಿಯದಿರ್ದಡಾಂ ಬದುಕುವೆಂ ಭಕ್ತನೆಂದರಿದ ಬಳಿಕ
ಧರೆಯೊಳಾನೆಂತು ಬದುಕುವೆನೈಮಹಾದೇವ
ಕರುಣಿಸೈ ಕರುಣಾನಿಧಿಶ್ರೀಮಹಾದೇವ
ಹರಹರಯೆನುತ್ತವನಿರಲ್ಕವನ ಗುಡಿ೨ಲೆ೨ಯಂ ಮುತ್ತಿತೆಲ್ಲಾ ಪುರಜನಂ ೫೫

ವರಚೋಳರಾಜನತಿಭಕ್ತಿಯಿಂ ಬರುತಿರ್ದ
ಅರರೆ ದಿವ್ಯಜ್ಞಾನಿ ಸತ್ಯನಿಧಿ ಬರುತಿರ್ದ
ತರತರದೊಳುಗ್ಘಡಿಪ ರಾಜಪುತ್ರರ ನಡುವೆ ನಡೆತಂದು ಸಡಗರದೊಳು
ಶರಣಕುಲಸಿಂಧುಶಶಿ ಚನ್ನಯ್ಯನಂ ಕಂಡು
೩ಪರಮಭಕ್ತಾಧೀಶನಹ ಚನ್ನನಂ ಕಂಡು೩
ನೆರೆ ಪುಳಕಿಸುತ್ತೆ ಪುಟವೇಳುತುರ್ಬುತೆ ಕೊರ್ಬುತಿಳಿವಶ್ರುಜಲದಿ ಮುಳುಗಿ ೫೬

ಇಳಿಪಿದಂ ಸರ್ವಾಂಗಮಂ ಚೆನ್ನನಂಘ್ರಿಯೊಳು
ತೊಳಪ ಮಣಿಮಯ ಮಕುಟ ಕಾಂತಿಪದ ಭೂಮಿಯೊಳು
ಲಲಿತ ಪದರಜವನುಂ ಕಂಗಳೊಳಗೊತ್ತಿ ತತ್ಪದವ ಬಿಡೆನೆಂದು ಪಿಡಿಯೆ
ಎಲೆ ಚೋಳಯೇನಯ್ಯ ನೀನಿಂತು ಬಪ್ಪರೇ
ಇಳೆಯಾಣ್ಮರೊಳಗಧಿಕ ನೀನಿಂತು ಮಾಳ್ಪರೇ ೫೭
ಕುಲಹೀನ ನಾನೆನ್ನ ಜಾತ್ಯಂತರವನರಿಯದಡಿವಿಡಿವರೇ ಬಲ್ಪಿನಿಂ

---

೧ ನೆಂ (ಹ) ೨ ವೆ (ಹ) ೩ X (ಹ)

ಎನುತೆ ಗದ್ಗದಿಸಿ ಕಂಪಿಸಿ ಚೋಳ ಬಿಡುಚೋಳ
ನಿನಗೆ ಎನ್ನಾಣೆ ನಿನ್ನಾಣೆ ಬಿಡುಬಿಡು ಚೋಳ
ಜನದೊಳಪಹಾಸ್ಯಂಮೊಸಗದಿರೆನ್ನ ರಚ್ಚೆಗಿಡದಿರು ಕರುಣಿಸರಸಯೆನಲು
ಕನಕಾದ್ರಿವಾಸನೊಲಿದನ ಕುಲವೆ ಸತ್ಕುಲಂ
ಘನಮಹಿಮನೊಲಿದ ಜಾತಿಯೆ ಜಾತಿ ನಿರ್ಮಳಂ
ಅನಘನೊಡನುಂಡ ನಿಮ್ಮಯ ಜಾತಿಗಾಂ ಸರಿಯೆ ಸರ್ವಜ್ಞ ಸರ್ವೇಶ್ವರ ೫೮

ಮೃಡಮೂರ್ತಿ ನಿಮ್ಮ ಕೀರ್ತಿಗೆನ್ನ ಶಿರವೆಣೆಯೆ
ಬಿಡೆನಯ್ಯ ನಿಮ್ಮ ಪದವಂ ಬಿಟ್ಟು ಬಾಳ್ವೆನೆ
ದೃಢವಾದ ನಿಮ್ಮಡಿಗಳಾನಗಲಿ ನರಕದೊಳಗಾಳ್ವನೆಂತಯ್ಯ ಪೇಳು
ತಡವೇಕೆ ದೇವ ಶಿವನಲ್ಲಿಗೈತನ್ನಿರೇ
ಜಡವಾದ ಕುಲದಿರವನಭವನೊಳು ಪೇಳಿರೇ
ನಡೆಯಿಳಮೆಂಳದಲ್ಲಿ ಗಜಮಸ್ತಕವನೇರಿಸುತೆ ಮೃಡನಿಳಯಕೈತರುತ್ತೆ ೫೯

ಆನೆಯಿಂದಿಳಿಸಿ ಮೆಲ್ಲನೆ ಬಂದು ಕೈಗೊಟ್ಟು
ಮಾನನಿಧಿ ಚೆನ್ನನಂ ಹರುಷದಿಂ ಮುಂದಿಟ್ಟು
ಭೂನಾಥನೊಡಗೊಂಡು ಬಂದೊಳಗೆ ಶಿವಲಿಂಗಮೂರ್ತಿಯಂ ತೋರಿಸಲ್ಕೆ
ಏನೆಂಬೆನಾ ಚೆನ್ನನೆನ್ನೊಳುಂ ಮುಳಿವುತಂ
ಏನಯ್ಯ ಇಂತು ತೋರುವರೆ ನಿನ್ನುನ್ನತಂ
ಹೀನ ಕುಲದವರಾವೆನುತ್ತೋರ್ವ್ವರರಿಯದಂತಿರ್ದಡೀಪರಿಗೈವರೆ ೬೦

ಅರಸಿನಿಂ ಪಿಡಿದು ತರಿಸಿದೆ ತಪ್ಪು ಮಾಡಿದೆನೆ
ಒರೆಯಯ್ಯ ನಿನ್ನಲ್ಲಿ ಪದವಿಯಂ ಬೇಡಿದೆನೆ
ಅರಿಯದಂಬಲಿಯನರ್ಪಿಸಿದಡಿಂತಿರಿವರೇ ಕರುಣವಿನಿತಿಲ್ಲ ನಿನಗೆ
ಧರೆಯೊಳಗೆ ಬೀದಿಗರಿವಾಯಿತೆನ್ನಯ ಭಕ್ತಿ
ನರರರಿವವೊಲ್ ಹರಲೆಯಾಯಿತೆನ್ನಯ ಭಕ್ತಿ
ಇರೆನಿರೆನಿಳಾತಳದೊಳಿನ್ನೇನೆನುತ್ತಾ ಚೆನ್ನನಲಗೆತ್ತಿ ಕೊರಳಿಗಿಕ್ಕೆ ೬೧

---

೧ ಲೆ (ಹ) ೨ ರ್ವಿಂ (ಹ) ೩ ರಂ (ಹ)

ಶಿವಲಿಂಗದಿಂದೆ ನಾನ್ಯೆತಂದು ನೆರೆಪಿಡಿದು
ಅವಿಚಾರದಿಂದಿಂತು ಮಾಳ್ಪರೇ ನೀನರಿದು
ಸುವಿವೇಕವಿನಿತಿಲ್ಲವೈ ನಿನಗೆ ಮರೆದರಸಿಗೊರೆದಡಿನಿತೇಕೆ ಕೋಪ
ತವಕಮಂ ಗೈಯದಿರ್ನಾವರಿಯದುಸುರಿದೆವು
ಪ್ರವಿಮಳ ಗುಣಾಭರಣ ಚೆನ್ನಯ್ಯನೇಯೆನುತ
ಜವದಿಂದಲಾತನಂ ತೆಗೆದಪ್ಪಿ ಬಿಗಿದಪ್ಪಿ ಕೊಂಡಾಡುತಿರುತಿರ್ದನು ೬೨

ಅನಿತರೊಳು ಪೂಮಳೆಯುಗರೆದುದಲ್ಲಿ ನಂದೀಶ
ವಿನುತ ಪುಷ್ಪಕವನುಂ ಕೊಂಡು ಬರೆ ಚೆನ್ನನಂ
ಅನುಪಮ ವಿಮಾನದೊಳು ಕುಳ್ಳಿರಿಸಿ ಚೋಳಂಗೆ ಬೀಳ್ಕೊಟ್ಟು ಸಂತಸದೊಳು
ಘನವೆನಿಪ ರಜತಾಚಳಕ್ಕೆ ನಾನ್ಯೆತಂದು
ಅನಘರಹ ಗಣವರರ ಪದವಿ ಚೆನ್ನಂಗಿತ್ತು
ಅನುವಿನಿಂ ಮನ್ನಿಸಿದೆನದರಿಂದೆ ಚೆನ್ನನಡಿಗಳನ್ನೈದೆ ಪೊಗಳು ನಂಬಿ ೬೩

ಅಂತು ಸಂಧಿ ೧೭ ಕ್ಕಂ ಪದಗಳು ೮೮೦ ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

## ಸಂಧಿ : ೧೮

ಸೂಚನೆ :

ಎಡೆಗಳೆಯ ಕಡವೂರ ವಾಯಿಲಾಗರುಂ೧ ಮತ್ತೆ
ದೃಢ ಭಕ್ತ ಸಾಂಖ್ಯಗುಣಿನಾಥ ಅತಿಭಕ್ತಯ್ಯ
ಮೃಡ ಶರಣನಹ ಉದ್ಭಟಂ ಹಲಾಯುಧರ ಕಥೆಯಂ ಕೇಳ್ದನಾ ಸೌಂದರಂ

ಒಸೆದಾಲಿಸೈ ನಂಬಿ ಮತ್ತೊರೆವೆ ತಚ್ಚೋಳ
ವಸುಮತಿಯೊಳಿರ್ದುದು ಕುಳಂಬಳಾಪುರವೆಂಬ
ಪೆಸರಿನಿಂದಿರಲಾ ಪುರಕ್ಕಧಿಪ ಎಡೆಗಳೆಯಪೇರುಮಳೆಯೆನಿಪಾತನು
ಕುಶಲನೆಂದೆನಿಸಿ ಪರರಾಜರ ಸಮರದಲ್ಲಿ
ಯುಸಮನೆಂದೆನಿಸಿ ಚಾತುರ್ದಿಶಾ ಸತ್ಕೀರ್ತಿ
ವಿಶದನೆಂದೆನಿಸಿ ಮದ್ಭಕ್ತರೊಳಧಿಕನೆನಿಸಿ ಕೆಲವಬ್ದ ವಿಂತಿರಲ್ಕೆ ೧

---

೧ ರೈರಂ (ಹು)    ೨ ಡ (ಹ)

ತನ್ನರಸುತನವೆಲ್ಲ ಮಂತ್ರಿಗಳೊಳೊಪ್ಪುಗೊ
ಟ್ಟುನ್ನತದ ದಾಸ ಭಾವವನ್ನೆದೆ ಕೈಕೊಂಡು
ಸನ್ನುತದ ಲಿಂಗಂಗಳಂ ಪೂಜಿಸುತ್ತೆ ಪಗಲಿರುಳಿನ್ನದಲ್ಲಿರುತ್ತೆ
ನನ್ನಿಯಿಂದಾ ಭೂಪನಿಂತಿರಲ್ಕಾ ಪುರದೊ
ಳಿನ್ನ ಮೋಹದ ಭಕ್ತನೊರ್ವನೊಪ್ಪಿರುತಿರ್ದ
ಚನ್ನೆಸೆವ ಎಡೆಗಳೆಯಪೇರುಮಳೆಯೆನಿಪ ಪೆಸರಿಂದಾತನಿರುತಿರಲ್ಕೆ ೨

ಬಂದ ಭಕ್ತರ್ಗನ್ನವೀವ ವಸ್ತ್ರವನೀವ
ಸಂದೇಹಿಸದೆ ವಿತ್ತವೀವ ಮತ್ತಿಷ್ಟವೇ
ನೆಂದು ಮುದದಿಂ ಕೇಳ್ವ ಕೇಳಿದುದನೊಲಿದೀವಂನಿಲ್ಲೆನದಲೀ ತೆರದೊಳು
ಕುಂದದಂತಾ ಭಕ್ತ ಕೆಲವಬ್ದವೀಯಲ್ಕೆ
ಮಂದಿರಂವೊಂದುಳಿದುಳಿದದನು ವಿಕ್ರಯಿಸಿ ಗಣ
ವೃಂದಮಂ ತುಷ್ಟಿವಡಿಸಲ್ಕೆ ಮತ್ತೇನಿಲ್ಲದಂತಾಗಲತಿದುಗುಡದಿ ೩

ಮರುಗುತ್ತ ಕೊರಗುತ್ತಲೆನ್ನನುಂ ನೆನೆಯುತ್ತ
ಪರಿಪರಿಯ ಚಿಂತಿಸುತ್ತಿರುತಿರಲ್ಕಿರುಳಾಗೆ
ತ್ವರಿತದಿಂ ನಿಶ್ಚೈಸಿದಂ ತನ್ನ ಮನದೊಳಗುಪಾಯವೊಂದಂ ಮುದದೊಳು
ಧರಣಿಪನ ಮನೆಗೆ ಕನ್ನವನಿಕ್ಕಿ ವಿತ್ತಮಂ
ನೆರೆತಂದು ಗಣವಿತತಿಗೀವೆನೆನುತುಬ್ಬೇರಿ
ಸರಸದಿಂ ಚೋರವೃತ್ತಿಯನವಂ ಕೈಕೊಂಡನೇನೆಂಬೆನೈ ಸೌಂದರಾ ೪

ನೀಲಪಟದಿಂದಿರ್ಪ ಚಲ್ಲಣವಳನುಟ್ಟಲ್ಲಿ
ಲೀಲೆಯಿಂ ಕೇಶಮಂ ಪಿಣಿಲಿರಿದುಕೊಂಡಲ್ಲಿ
ಮೇಲೆನಿಪ ಕನ್ನಗತ್ತಿಯನೊಪ್ಪದಿಂ ಪಿಡಿದು ಇಡುಗುಂಡು ಕೊರಸಿಗಳಂ
ಕೀಳೆನಿಪ ಕುನ್ನಿಗಳ ಬಾಯ್ಕಟ್ಟುಗಳನಾಂತು
ಶೂಲಧರ ಕರುಣಿಸೈಯೆನುತಲತಿ ಧೈರ್ಯದಿಂ
ಆ ಲಲಿತ ರಾಜಾಲಯಕ್ಕೆ ನಡೆದಂ ಸುತ್ತಿ ಮುತ್ತಿರ್ದ ಕತ್ತಲೆಯೊಳು ೫

---

೧ ಧಿ (ಹ) ೨ ಯ (ಹ) ೩ ನಿ (ಹ)

ಪರಮಯೋಗಿಯ ತೆರದೊಳುಂ ನಿದ್ರೆಯಂ ತೊರೆದು
ಉರುತರ ಪ್ರತಿಯಂತೆ ದೇಹದಂಡನೆಗೊಲಿದು
ಸರಸ ಸುಜ್ಞಾನಿಯಂದದೊಳಖಿಳದರಿವು ಮರೆವುಗಳಿರವಲಾರ್ಶೈವುತ
ವರಧ್ಯಾನಿಯಂದದಿಂ ಮೌನದೊಳು ತಾಂ ನೆರೆದು
ನೆರೆ ಮರುಳನಂತಲ್ಲಿ ನಡೆವುತ್ತ ನಿಲ್ಲುತ್ತ
ಒರಿಯ ಮಂತ್ರಿಯ ತೆರದೊಳತ್ಯಧಿಕವೆನಿಪ ಕಾರ್ಯಾಲೋಚನವ ಕಾಣುತ ೬

ಇಂತು ಕತ್ತಲೆಯೊಳಾ ನೃಪನಿಳಯಕೈತಂದು
ಪಂಥದಿಂ ಭಿತ್ತಿಯಂ ಭೇಧಿಸುತ್ತೊಳಪೊಗ
ಲ್ಕಂತಲ್ಲಿ ನೆಲ್ಲರಾಶಿಗಳಿರಲ್ಕಾಣುತ್ತ ಸಂತಸಂದಳೆವುತ್ತಲೀ
ತಾಂ ತವಕದಿಂ ನೆಲ್ಲ ಮೊಟ್ಟೆಯಂಗಟ್ಟಿ ಪೊ
ತ್ತಂ ತರುತ್ತಿರೆ ಭಕ್ತನಂ ಮರೆಯಲೆಂದಾನು
ಮುಂತಿರ್ದ ನೆಲ್ಲ ಕಾಯ್ಪಿನ ಚರರನೆಚ್ಚರಿಸಲವರೀತನಂ ಪಿಡಿದರು ೭

ಅದಿನಿರುಳಾತನಂ ಕಾಯ್ದುದಯದೊಳು ನೃಪನ
ಮುಂದವನ ನಿಲ್ಲಿಸಲ್ಕಾತ ಕಾಣುತ್ತಿದೇ
ನೆಂದು ಕೇಳಲ್ಭಕ್ತ ಮಾಜದುಸುರುತ್ತಿರ್ದನೇನೆಂಬೆನಾ ರಾಜನೊಳ್
ಕುದುಗೊರಳನ ಭಕ್ತರಂ ತುಷ್ಟಿವಡಿಸಲಾ
ನಿಂದು ಚೋರತ್ವಮಂ ಗೈದೆನೆನೆ ಭೂಪನಾ
ನಂದದಿಂ ಭಕ್ತನಂ ಮನ್ನಿಸುತ ತನ್ನ ಭಂಡಾರದವನಂ ಕರೆಸಿದಂ ೮

ತನ್ನರಮನೆಯೊಳಿರ್ದ ಧಾನ್ಯಂಗಳೆಲ್ಲಮುಂ
ಹೊನ್ನು ರನ್ನಂಗಳುಂ ವಿವಿಧ ವಸ್ತ್ರಂಗಳಂ
ಚೆನ್ನಾಗಿ ಭಕ್ತಂಗೆ ಕೊಡವೇಳ್ದು ಕಳುಪಲಾಭಕ್ತನತಿ ದಾನಿಯೆನಿಸಿ
ಇನ್ನಿವಂಗೆಣೆಯಿಲ್ಲ ಲೋಕದೊಳಗೆಂದೆನಿಸಿ
ನನ್ನಿಯಿಂ ಬಂದ ಭಕ್ತರ ವಾಂಛಿತವ ಸಲಿಸಿ
ಮನ್ನಣೆಯೊಳಿರಲವಂಗಾನು ನಿಜರೂಪಮಂದೋರಲಾಗಸದಿಂದಲೀ ೯

---

೧ ಯ (ಜ)

ಭರದಿ ಪೂಮಳೆಗರೆದುದತುಳ ದುಂದುಭಿರವಂ
ನೆರೆ ಪೊಣ್ಮಿದುದು ಗಣಾಧಿಪರನೊಡಗೊಂಡಲ್ಲಿ
ಪರಮ ನಂದೀಶನೈತರಲು ಪುಷ್ಪಕದೊಳಾ ಭಕ್ತನಂ ಕುಳ್ಳಿರಿಸುತೆ
ಉರುತರವೆನಿಪ್ಪ ಕೈಲಾಸಪುರಮಂ ಪೊಕ್ಕು
ವರ ಗಣೇಶ್ವರರ ಪದವಿಯನಿತ್ತನದರಿಂದೆ
ಸರಸ ನುಡಿಯಿಂ ನೀನು ಎಡೆಗಳೆಯು ಪೇರುಮಳೆಯಡಿಗಳಂ ನುತಿಸು ನಂಬಿ ೧೦

ಪೊಡವಿಪತಿ ಸೌಂದರಾಧಿಪ ಕೇಳು ಮತ್ತೊರೆವೆ
ಕಡವೂರ ಕಾರಿಯೆನಿಸುವ ಶಿವ ಬ್ರಾಹ್ಮಣಂ
ಸಡಗರದಲೊಪ್ಪುತಿಹ ಕಟಕಪುರದೊಳಗಿರುತ್ತಿರ್ದನತ್ಯಾನಂದದೀ
ಕಡು ಸೊಗಸಿನಿಂದೆ ಕವಿತೆಯನೆಸಗುತವನಿಪರ
ಗಡಣಮಂ ಮೆಚ್ಚಿಸುತೆ ಚಿನ್ನ ರನ್ನಂಗಳಂ
ಒಡನೆ ತರುತ್ತಿತ್ತ ಭಕ್ತಾವಳಿಯ ತಣಿಪುತ್ತಲತಿ ದಾನಿಯೆಂದೆನಿಸುತೆ ೧೧

ಇನಿತು ಕವಿತೆಯನೆಸಗಲೆನ್ನ ಕೀರ್ತನವಲ್ಲ
ದಿನಿತಾದರುಂ ನರಸ್ತುತಿಯಿಲ್ಲಯಾಚನದೊ
ಳಿನಿತಾದರುಂ ಚೋಳ ಪಾಂಡ್ಯಾದಿ ಭಕ್ತರೊಳಗಲ್ಲದನ್ಯರೊಳಗದಿಲ್ಲ
ಇನಿತು ಪ್ರಕಾರದಾಚಾರದಿಂದಿರುತಿರುತೆ
ಘನವೆನಿಪ ನಗೆಯ ಪ್ರಬಂಧಮಂ ನೆಗಳುತ್ತೆ
ಜನರುಗಳನೆಲ್ಲ ನಗಿಸುತ್ತಲತಿಹಾಸ್ಯರಸದಿಂದಲೊಪ್ಪಿರುತಿರ್ದನು ೧೨

ಇರಲವನ ಚತುರತೆಯನರಿವೆನೆನುತಾನು ಶಂ
ಕರಿಯನೊಡಗೊಂಡು ನಗಲೊಲ್ಲೆನೆಂದೆಂಬುಂವಾಗ
ಉರುಮನಂ ದೃಢಗೊಂಡು ಭಕ್ತವೇಷವನಾನುತೀರ್ವರುಂ ಪೋಗಿ ನಿಲಲು
ಭರದಿಂದಲವನೆಮ್ಮನೀರ್ವರಂ ಕಾಣುತ್ತ
ಪರಿಹಾಸ್ಯದಿಂದಲೆಲೆ ಜೀಯಯೀಯವ್ವೆಗಳು
ನೆರೆ ನಿನ್ನ ಪಡೆದವ್ವೆಯೇ ಎಂದು ಕೇಳಲಾಂ ನಗೆಗಡಲೊಳಾಳ್ದೆನಂದು ೧೩

---

೧ ವ (ಹ)

ಗಿರಿಜೆ ನಗುತಿರಲು ನಾನಲ್ಲಿ ನಿಜರೂಪಮಂ
ನೆರೆ ತೋರಿ ಭಕ್ತನಂ ಬಿಗಿದಪ್ಪಿ ಸಂತಸಂ
ವೆರಸಿರುತ್ತಿರೆ ನಂದಿ ಪುಷ್ಪಕಂ ಕೊಂಡು ಬರಲಾತನಂ ಕುಳ್ಳಿರಿಸುತ
ವರರಜತಗಿರಿಗೆ ತೆರಳುತ್ತಲ್ಲಿ ಗಣಪದವ
ಸರಸದಿಂದಿತ್ತೆ೧ನಾ೧ ಕಡವೂರ ಕಾರಿಯಂ
ಪರಮ ಪರಿತೋಷದಿಂ ನುತಿಸು ಮತ್ತಂನುತಿಸು ನುತಿಸಿ ಸುಖಿಯಾಗು ನಂಬಿ ೧೪

ಮತ್ತೊರೆವೆನಾಲಿಸು ಮಯೂರಾಖ್ಯಪುರದೊಳಗೆ
ಉತ್ತಮೋತ್ತಮವಾಯಿಲಾರೆಂಬ ಮದ್ಭಕ್ತ
ಸತ್ಯಗುಣಯೆಂದೆನಿಸಿ ಶೂದ್ರಕುಲದೊಳು ಜನಿಸಿ ಭಕ್ತಾಗ್ರಗಣ್ಯನೆನಿಸಿ
ಬಿತ್ತರದ ಬ್ರಹ್ಮಾಂಡವಂಗದೊಳು ನೆಲೆಗೊಳಿಸಿ
ಅತ್ತಿತ್ತಲೆಂಬ ದುರ್ವಿಷಯಂಗಳಂ ನಿಲಿಸಿ
ಚಿತ್ತ ಶುದ್ಧಿಯೊಳಿರುತ್ತಿರ್ದನಾತನ ಚರಿತ್ರವನೇನ ಬಣ್ಣಿಸುವೆನು ೧೫

ತನ್ನ ದೇಹವೆ ಶಿವನ ದೇಹವೆಂದರಿವುತ್ತ
ಎನ್ನನುಂ ತನ್ನುರದಿ ಧ್ಯಾನದಿಂ ನಿಲಿಸುತ್ತ
ಸನ್ನಯಿಂ ಸುವಿವೇಕದಿಂದರ್ಚಿಸುತ್ತೆ ಸದ್ಭಾವದೋಗರವಿಕ್ಕುತೆ
ಚೆನ್ನೆಸೆವ ಸುಜ್ಞಾನ೨ದಿಂದ೨ಲಾನಂದಿಸುತೆ
ಭಿನ್ನಿಸದ ಸುಖದಿಂದಿರಲ್ಕವಂಗಾನೊಲಿದು
ಮನ್ನಣೆಯ ಗಣಪದವನಿತ್ತೆನದರಿಂ ವಾಯಿಲಾರಡಿಗಳಂ ನುತಿಸೆಲೈ ೧೬

ಒರೆವೆನಾಲಿಸು ನಂಬಿ ಕಾಂಚೀನಗರದಲ್ಲಿ
ಮೆರೆದಿಪ್ಪ ಸಾಂಖ್ಯತೊಂಡನೆನಿಪ್ಪ ಸದ್ಭಕ್ತ
ನುರುತರ ಜಿತೇಂದ್ರಿಯಂ ಪರಮಯೋಗಾಧಿಪಂ ಜೈನಕುಲಸಂಭೂತನು
ಸರಸದಿಂದೆನ್ನನರ್ಚಿಪ ಭಕ್ತಿ ಭಾವಮಂ
ನೆರ ಬಲಿದು ಲಿಂಗಾಲಯಂ ಪೊಕ್ಕು ಶಿಲೆಯಿಂದೆ
ಭರದಿ ಪೊಯ್ವುತ್ತಿರ್ದ ವ್ರತವ ನಿಶ್ಚೈಸಿದಂ ಲಿಂಗಾರ್ಚನವಿದೆನ್ನುತ ೧೭

---

೧ ನಾ (ಜ) ೨ X (ಹ) ೨ X (ಹ)

ನಿಚ್ಚನೀತೆರದಿ ಪೂಜಿಸುತೋಗರವ ಕೊಂಬ
ಸಚ್ಚರಿತ ಸಾಂಖ್ಯನಾಟಕ್ಕೆನ್ನ ಸಂಪ್ರೀತಿ
ಬೆಚ್ಚಂತಿರುತ್ತಿರ್ದುದೇನೆಂಬೆ ನಂ೧ಬಿ೧ ನಂಬುಗೆಯೆನಗೆ ಕಾರಣವೆಲ್ಲೈ
ಅಚ್ಚರಿಯದಾಗಿತ್ತು ಸಕಲ ಸುರವೃಂದಕ್ಕೆ
ಹುಚ್ಚನೆನಿಸಿರುತಿರ್ದ ನಿಖಿಲಗಣನಿಕರಕ್ಕೆ
ಅಚ್ಚ ಸುಖಿಯಾಗಿರ್ದನೆನಗೆ ಕೇಳೆನ್ನವರ ಚರಿತೆಯಂ ಸೌಂದರೇಂದ್ರಾ ೧೮

ಈ ತೆರದೊಳಿರುತಿರಲೊಂದು ದಿನ ಮರೆದುಣುತ್ತಿರಲು
ತಾ ತವಕದಿಂದೆ ಮತ್ತರಿದು ಭರದಿಂ ಬಂದು
ಸಾತಿಶಯದಿಂದೆ ಪೆರ್ಗುಂಡನೆತ್ತುತ್ತ ಲಿಂಗದ ಮೇಲೆ ಪೊಯ್ವನಿತರೊಳ್
ಓತಿರದೆ ನಾನಲ್ಲಿ ನಿಜರೂಪಮಂ ದೋರಿ
ಖ್ಯಾತನಹ ಸಾಂಖ್ಯನಿಗೆ ಗಣಪದವನಿತ್ತೆನೈ
ಚಾತುರ್ಯದಿಂ ಸಾಂಖ್ಯತೊಂಡನ ಪದಾಬ್ಜಮಂ ನೀ ಶೀಘ್ರ ನುತಿಸು ನಂಬೀ ೧೯

ಮತ್ತಾಲಿಸೆಲೆ ನಂಬಿ ಚಂಪಾಪುರದೊಳೊರ್ವ
ನತ್ಯಧಿಕ ಸದ್ಭಕ್ತಗಣನಾಥನಾಮದಿಂ
ದುತ್ತಮೋತ್ತಮ ಭಕ್ತಿಭಾವದಿಂದಿರುತಿರ್ದ ಜ್ಞಾನ ಸಂಬಂಧನೆಂಬಾ
ನಿತ್ಯನಹ ಗುರುವಿಂಗೆ ಶಿಷ್ಯನೆಂದೆನಿಸಿ ೨
ಚಿತ್ಯಕರ್ಮಾಭಿರತಿಯೆನಿಸಿ ಮಮಪದಕಮಲ
ಭೃತ್ಯನೆಂದೆನಿಸಿ ಭಕ್ತಾವಳಿ ವಿನೋದಿಯೆಂದೆನಿಸುತ್ತಲೊಪ್ಪಿರ್ದನು ೨೦

ಕೆಲವು ಜನರುಗಳನು ಧ್ಯಾನಕರ್ಮದೊಳಿರಿಸಿ
ಕೆಲರನುರು ಪುಷ್ಪೋಪಚಯದೊಳಂತಾಗಿರಿಸಿ
ಕೆಲರನೊಲವಿಂದಿಂಡೆದಂಡೆಗಳ ಕಟ್ಟಲೋಸುಗವಿರಿಸುತಲ್ಲಲ್ಲಿಯು
ಕೆಲರನಾ ಮಜ್ಜನೋದಕವ ತರಲೊಲಿದಿರಿಸಿ
ಕೆಲರನಾ ಸಮ್ಮಾರ್ಜನಾ ವಿಧಿಗೆ ನೆಲೆಗೊಳಿಸಿ
ಕೆಲಕೆಲರ ದೀಪಂಗಳಂ ಪೊತ್ತಿಸಲ್ಕೆವಾಗಮಪನೋದುವದಕಿರಿಸಿ ೨೧

---

೧ ಬು (ಹ) ೨ ಲಂ (ಜ)

ಈ ತೆರದಿ ನಿಚ್ಚ ಶಿವಲಿಂಗಮಂ ಪೂಜಿಸುತ
ಲೀತೆರದಿ ನಿಚ್ಚ ಸದ್ಭಕ್ತರಂ ಪೂಜಿಸುತ
ಲೋತು ಮತ್ಪದ ದಾಸನೆನಿಸುತ್ತಲಾ ನಿಜಗುರುಜ್ಞಾನ ಸಂಬಂಧರುಗಳಾ
ಪ್ರೀತಿಯಿಂ ಪಡೆದೆಲ್ಲ ಭಕ್ತರಂ ಕೂಡಿಕೊಂ
ಡಾತುರದಿ ಕೈಲಾಸಕೈತರಲ್ಕಾತಂಗೆ
ನೂತನದ ಗಣಪದವನಿತ್ತೆನದರಿಂದೆ ಗಣನಾಥನಂಪೊಗಳು ನಂಬೀ ೨೨

ಲೀಲೆಯಿಂದಾಲಿಸೈ ನಂಬಿ ಮತ್ತಾನೊರೆವೆ
ಚೋಳಮಂಡಲದೊಳತಿಭಕ್ತನೆಂದೆನಿಸುವಾ
ಜಾಲಗಾರಂ ಮಹಾ ಭಕ್ತಿಯಿಂದಿರುತಿರ್ದ ಶಿವನೆನ್ನ ದೈವವೆನುತೆ
ಕಾಲಕಾಲದಿ ಮೀನ್ಗಳಂ ತಂದು ಮಾರುತ್ತೆ
ಮೇಲಾದ ಸಂಪದವನದರಿಂದೆ ಪಡೆವುತ್ತ
ಪೇಳಲರಿದಾದ ಸುಜನತ್ವದಿಂ ಸತಿಪುತ್ರರಿಂದೆ ಸೌಖ್ಯದೊಳಿರ್ದನು ೨೩

ಮುಂಬಿರ್ದಮೀನವೊಂದೆನಿತೆ ಲೇಸಾಗಿರಲ್
ಸಾಂಬನಿಗಿದರ್ಪಣವೆನುತ್ತ ನೀರೊಳ್ಬಿಡುವ
ಹಂಬಲಿಸುತೊಗೆದೆರಡನೆಯ ಜಾಲದೊಳ್ಬಿದ್ದಿರ್ದ ಮೀನ್ಗಳಂ ವಿಕ್ರಯಿಸುತೆ
ಇಂಬಿನಿಂದುಂಡುಟ್ಟು ಸುಖದಿಂದಿರುತ್ತಿರ್ದ
ಕುಂಭಿನಿಯೊಳೀತೆರದಿ ಕೆಲವು ಕಾಲಂ ನಡೆಯ
ಲಾಂ ಭಕ್ತನುರು ಭಕ್ತಿಯಂ ಪರೀಕ್ಷಿಪೆನೆನ್ನುತಾಳೋಚನಯನೆಸಗಿದೆಂ ೨೪

ಮುಂತೆ ಬಲೆಯೊಳು ಬಿದ್ದ ಮೀನವೊಂದಂ ಕಾಯ
ಜಾಂತಕನಿಗರ್ಪಿತವೆನುತ್ತದಂ ಬಿಟ್ಟೊಡನೆ
ಪಿಂತೆ ಬಲೆಯಂ ಬಿಡಲು ಮೀನವೊಂದಾದರುಂ ಬೀಳದಂತಾಗಿರ್ದುದು
ತಾಂ ತವಕದಿಂದಸ್ತಮಯಕಾಲ ಪರ್ಯಂತ
ಭ್ರಾಂತಿಯಿಂ ಬಲೆಯನೊಗದೊಗೆದು ಬೇಸರವಾಗ
ದಿಂತು ಪರಿಯಿಂ ಕೆಲವು ದಿನವಾಗಲವನಿಗಡಸಿತ್ತು ಬಡತನವೆಂಬುದು ೨೫

---

೧ ಉಂ (ಹ) ೨ X (ಹ)

ಒಂದೆರಡುವುಪವಾಸವಾಗಲವನೆಳ್ಳನಿತು
ಕಂದಿಕುಂದದೆ ನಿಜವ್ರತಕ್ಕೆ ಭಂಗಂಗೊಳದೆ
ಚಂದದಿಂದಿರುತೊಂದು ದಿನಸುದಯದೊಳಗೆದ್ದು ಪೊಳೆಗೈತರುತ್ತ ನಿಂದು
ಬಂಧುರದ ಬಡಿಶಮಂ ಜಲದೊಳು ವಿಸರ್ಜಿಸಲು
ಸುಂದರವೆನಿಪ್ಪ ಸುವರ್ಣದಾಭರಣವೆನಿಪ್ಪ
ಮಂದರಾದ್ರಿಯ ಪೋಲ್ವ ಮೀನವೊಂದುಂ ಬಿರ್ದುದಾಗಳೆನ್ನಾಜ್ಞೆಯಿಂದಾ ೨೬

ಜನರಚ್ಚರಿಯನಾಂತರಾಗಳದನೀಕ್ಷಿಸುತ
ತನಗಾದ ಬಡತನದ ಭಂಗವ ನಿರೀಕ್ಷಿಸದೆ
ಎನಗೊಡೆಯನಾದ ಶಿವಗರ್ಪಿತವಿದೆನ್ನುತ್ತ ಬಿಡಲು ನಾನತಿ ಮೆಚ್ಚುತೆ
ಅನುಪಮದ ನಿಜರೂಪಮಂ ತೋರಿ ಶರಣನಂ
ಕನಕಾಚಳಕ್ಕೆ ಕೊಂಡೊಯ್ದು ಗಣಪದವಿತ್ತೆ
ಇನಿತಿನಿತುಮೆನ್ನದಲೆ ಭಕ್ತನಡಿಗಳನೈದೆ ಮನವೊಸೆದು ಪೊಗಳು ನಂಬಿ ೨೭

ಎಲೆ ಸೌಂದರೇಂದ್ರ ಕೇಳುದ್ಭಟಯ್ಯನೆನಿಪ್ಪ
ಇಳೆಯಾಣ್ಮನೆಂದೊಪ್ಪಿರುತ್ತಿರ್ದನಾತಂಗೆ
ಕಳೆವೆತ್ತ ಕೋಮಲಾಂಗದ ಸತಿಯಳಿರುತಿರ್ದಳನುಪಮ ಗುಣಾಢ್ಯಳೆನಿಸಿ
ಒಲವಿನಿಂ ಪತಿಯ ಮತಿಗವಯವಂ ತಾನೆನಿಸಿ
ಲಲಿತವಹ ತನುವೆರಡು ಜೀವವೊಂದೇ ಎನಿಸಿ
ಸಲೆ ಸೊಗಸಿನಿಂದೆ ಸತಿಪತಿಗಳೊಂದಾಗಿ ಸದ್ಭಕ್ತಿಯಿಂದಿರುತಿರ್ದರು ೨೮

ಆತನುರುಹರಣಮುಂ ಶಿವಲಿಂಗ ತಾನಾಗಿ
ಆತನ ಹೃದಯ ಸರೋಜಂ ಸಜ್ಜೆಯೆನಲಾಗಿ
ಆತನ ಸುದಿವ್ಯ ಕರಣಂಗಳೆನ್ನ ಸಪರ್ಯದುಪಕರಣ ನಿಕರವಾಗಿ
ಆತನಿಂದ್ರಿಯವರ್ಗ ಪರಿಚಾರರೆನಲಾಗಿ
ಆತನ ವಿಮಳ ಮನವೆ ಕುಸುಮವೆಂದೆನಲಾಗಿ
ಆತನ ಸುಪರಿಣಾಮುವಮೃತಾನ್ನವೆನಲಾಗುತಿಂತೆನ್ನ ಪೂಜಿಸುತ್ತೆ ೨೯

ಇರುತಿರಲ್ಕೊಂದು ದಿನ ದಂಪತಿಗಳೀರ್ವರುಂ
ಸರಸದಿಂ ಪಗಡೆಯಾಡುತ್ತಿರ್ದ ಸಮಯದೊಳು
ಭರದಿಂದಲಾಗಸವ ನೋಡುತುದ್ಭಟ ಹಸಿತಮುಖನಾಗಲಾಕ್ಷಣದೊಳು
ತರುಣಿ ತನ್ನಿನಿಯನ ಮೊಗವ ನೋಡಿ ಕಳೆಗುಂದಿ
ನೆರೆ ಮನದಿ ನೋವುತುಸುರಿಕ್ಕುತುರು ಕೋಪವಂ
ಕುರಿಸುತೊಯ್ಯನೆ ಲೆತ್ತವಿಳುಹಿ ಲಜ್ಜಿತಳಾಗಿ ಕೇಳ್ದಳಾ ತನ್ನೋಪನಂ ೩೦

ಎನ್ನೊಳಗೆ ಕುಂದಾವುದಂ ಕಂಡಿರೆಲೆ ದೇವ
ಚೆನ್ನಾಗಿ ನಿಮಗೆ ನಗೆಯಾಡುದಂ ಪೇಳೆನಲು
ನಿನ್ನ ಕಾರಣವಲ್ಲ ನಕ್ಕುದಂ ಶಶಿಮುಖಿಯೆ ಸೌರಾಷ್ಟ್ರಪುರದೊಳೋರ್ವ
ಗನ್ನಂವಾದೋಂಹಿಲಾಖ್ಯನೆನಿಪ್ಪ ಶಿವಶರಣ
ನನ್ನಿಯಿಂ ಶಿವಲೋಕಕೋರ್ವನೇಪೋಗುತಿಹ
ನನ್ನಿರೀಕ್ಷಿಸಿ ಹಸಿತಮುಖನಾದೆನೆನಲು ಕಟಕಿಯನಾಡುತಿಂತೆಂದಳು ೩೧

ಪುರಸಹಿತ ಪೋಪ ಸಾಮರ್ಥ್ಯ ನಿಮಗುಂಟಾದ
ಡಿರದೆ ನಕ್ಕುದು ಸಫಲಮಲ್ಲದಡೆ ಶರಣನಂ
ಪರಿಹಾಸ್ಯಗೈವುದುಚಿತಮದಲ್ಲವೆನಲು ಘುಡಿಘುಡಿಸುತ್ತಲಿಂತೆಂದನು
ತರುಣಿ ನೀ ಮರುಳಲಾ ಪುರಸಹಿತ ಪೋಪುದ
ಚ್ಚರಿಯೆ ಕೇಳ್ನಾಡಿಂದುವಾರ ನಮ್ಮೀ ಪೊಳಲ
ಭರದಿಂದೆ ಶಿವಪುರಕೆ ಕೊಂಡೊಯ್ವೆನಿದು ಸತ್ಯ ನಂಬು ನಂಬಂಬುಜಾಕ್ಷಿ ೩೨

ಎನಲಾಕೆ ತನ್ನ ಬಂಧುಗಳನೆಲ್ಲವಂ ಕರಸೆ
ಜನರೆಲ್ಲ ತಮ್ಮ ಬಳಗಂಗಳಿಂದೊತ್ತರಿಸೆ
ಇನಿತನಿತುಮೆನ್ನದಾ ಪೊಳಲು ತೀವಿತು ಜನಂ ಬಂದೊದಗಿತಿಂದು ವಾರಂ
ಎನಿತು ನುಡಿದಂತಾಪುರಂ ಸಹಿತವಾಶರಣ
ವಿನುತ ಕೈಲಾಸಕೈತರೆ ಗಣಪದವನಿತ್ತೆ
ವಿನಯದಿಂದುದ್ಭಟಯ್ಯನ ಪಾದಪದ್ಮಮಂ ಮನವೊಸೆದು ಪೊಗಳುತಿಕಂಡ್ಯಾತಿ ೩೩

---

೧ ವಹದೋ (ಹ)        ೨ ನಂಬಿ (ಹ)

ಚಿತ್ತವಿಟ್ಟಾಲಿಸೈ ನಂಬಿ ಮತ್ತಾನೊರೆವೆ
ಉತ್ತರ ದಿಶಾ ಭಾಗದೊಳು ಕೀರ್ತಿಯಂ ಪಡೆದು
ಒತ್ತರಿಪ ಮಾಯೆಯಂ ಸಚ್ಚರಿತದಿಂ ಜಡಿದುಯಿಪ್ಪವು ನವ ಗ್ರಾಮಗಳ್
ಮತ್ತಾ ಪುರದೊಳೊರ್ವ ಸದ್ಭಕ್ತನಿರುತಿರ್ದ
ನತ್ಯಧಿಕನೆನಿಸುತ ಹಲಾಯುಧನೆನಿಪ್ಪವಂ
ಬಿತ್ತರಿಸಲರಿದಾದ ಮಹಿಮಾತಿಶಯದಿಂದಲೊಪ್ಪಿರ್ದನೇವೇಳ್ವೆನು ೩೪

ನಡೆತಂದು ಲಿಂಗಾಲಯಂ ಪೊಕ್ಕು ಕೈಮುಗಿದು
ಮೃಡಮೂರ್ತಿ ಘನಕೀರ್ತಿ ಕರುಣಿಸೆನುತಂ ಬಿಗಿದು
ಒಡನೆ ತೆಗೆದಪ್ಪಿ ಮುಂಡಾಡಿ ಮತ್ತಪ್ಪುತ್ತೆ ಮನದಣಿಯುದೆ
ಸಡಗರದಿ ಪೂಜಿಸುತೆ ಧೂಪದೀಪಂಗಳಿಂ
ತಡೆಯದಾರೋಗಣೆಯನಿತ್ತು ವೀಳ್ಯಮಂಗೊಟ್ಟು
ಕಡುರಮ್ಯವಾದ ನವಗದ್ಯ ಪದ್ಯಂಗಳಿಂದೆನ್ನನುಂ ಕೀರ್ತಿಸುತ್ತೆ ೩೫

ಇರಲಾ ನವಗ್ರಾಮದ ಪ್ರಭುಗಳೆಲ್ಲರುಂ
ಹರುಷದಿಂ ಕೊಂಡಾಡುತಿಪ್ಪರೊಲಿದೆಲ್ಲರುಂ
ಸರಸದಿಂದಾ ನವಗ್ರಾಮಕ್ಕೆ ತಾನೆ ಸತ್ಪುರುಷನೆಂದೆನಿಸುತ್ತಲೀ
ಪುರದೊಳಂತೆಲ್ಲರಂ ಸದ್ಭಕ್ತರಂ ಮಾಡಿ
ಪರಮ ಶಿವಲಿಂಗ ಪೂಜಾಸಕ್ತಿಯೊಳು ಕೂಡಿ
ಹರಹರ ಮಹದೇವ ಶಿವಶಿವ ಮಹಾದೇವ ಕರುಣಿಸೆಂದೆಂಬ[1] ನುಡಿಯಿಂ ೩೬

ಭಾಳಕ್ಕೆ ಭೂತಿ ನಾಲಗೆಗೆ ಪಂಚಾಕ್ಷರಂ
ತೋಳುರಂ ಹಸ್ತಕ್ಕೆ ರುದ್ರಾಕ್ಷಿ ವಿಸ್ತರಂ
ಲಾಲಿತ್ಯವಾದ ಮಮಕೀರ್ತನಂ ಕಿವಿಗಚ್ಚ ಸುಖಜಳಂ ಕಂಗಳಲ್ಲಿ
ಲೀಲೆಯಿಂ ಭಾವಕ್ಕೆ ಶಿವಲಿಂಗಮೂರ್ತಿಯುಂ
ಮೇಲಾದ ಕೈಗೆ ಸುಖವೊಸರ್ವ ಘನಕಂಪನಂ
ಕೇಳಯ್ಯ ನಂಬಿ ತನುವಿನಲಿ ಪುಳಕಂಗಳಂ ತೊಡಿಗೆಯಾಗಿರಲೆಸಗಿದಂ ೩೭

---

೧ ಸೆಂಬ (ಹ)

ಇಂತಿರುತ್ತೊಂದು ದಿನವಾ ನವಗ್ರಾಮಕರು
ಸಂತಸದೊಳಾ ಹಲಾಯುಧನ ಕೂಡಿಕೊಳುತ್ತ
ಮುಂತೊಂದು ಪುರದಿ ಶಿವಗೋಷ್ಠಿಯಿಂದಿರುತಿರಲ್ನುಡಿ ನುಡಿಗಳಧಿಕಮಾಗೆ
ಕಂತುಹರ ಭಕ್ತನೋಹಿಲ ಶರೀರಂವೆರಸಿ
ಚಿಂತಿಸದೆ ಪೋದುದಕ್ಕುದ್ಭಟಂ ಪುರವೆರಸಿ
ತಾಂ ತಳರ್ದನಾ ಉದ್ಭಟಂಗಧಿಕರಿನ್ನುಂಟೆಯೆನುತೆ ಪುರಜನ ನುಡಿಯಲು ೩೮

ಅವರ ನುಡಿಯಂ ಕೇಳುತಾ ಹಲಾಯುಧ ನುಡಿದ
ಶಿವನೊಲಿದಡರಿದೇನು ಪುರವನೊಯ್ವುದು ಪಿರಿದೆ
ಭವನ ಕಾರುಣ್ಯವುಳ್ಳೊಡೆ ತಾನಿವೆಲ್ಲರಿದೆದಾವಧಿಕ ಸಾಹಸವೆನಲ್
ಅವಿವೇಕಿ ನರರೀತನುರುವಾಕ್ಯಮಂ ಕೇಳ್ದು
ತವೆ ಕಟಕಿಗಳನಾಡುತೆಮ್ಮೀ ಪುರಂಗಳಂ
ತವಕದಿಂದೊಯ್ಯದಿಪ್ಪರೆ ನಮ್ಮನೆಲ್ಲರಂ ಶಿವನ ಮುಂದಿರಿಸದಿಹರೆ ೩೯

ಎಂದ ಕಟಕಿಗಳಂ ಹಲಾಯುಧಂ ಕೇಳುತಂ
ನಿಂದು ಭಾಷೆಗಳನಿತ್ತಂ ಸಭೆಯೊಳುಬ್ಬುತಂ
ಇಂದು ನುಡಿದಿರ್ಪ ನುಡಿ ನಿಮ್ಮದಲ್ಲಲ್ಲ ಶಂಕರನ ಸುಪ್ರೇರಣೆಯೆಲ್ಲೈ
ಒಂದು ಪುರವಂ ಕೊಂಡು ೧ಪೋದನುದ್ಭಟನಲ್ಲಿ
ಚಂದದಿ ನವಗ್ರಾಮಸಹಿತ ಪೋದಪೆನಿಲ್ಲಿ
ಎಂದಾವದಿನವೆನ್ನದಿರಿ ನಾಳೆ ಪೋಪೆ ಪುಸಿಯಲ್ಲ ಪೊಯ್ ಡಂಗುರವನು ೪೦

ಎನುತೆ ಧರೆ ಬಿರಿವಂತೆ ಡಂಗುರಂ ಪೊಯ್ಸುತ್ತ
ಮನವಾರೆ ತದ್ದಿನಂ ಶಿವರಾತ್ರಿಯಂ ಮಾಡಿ
ದಿನಪನುದಯದೊಳು ಲಿಂಗಾಲಯಕ್ಕೈತಂದು ಕೈಗಳನೆ ಮುಗಿದು
ಅನಘ ನೀಂ ಕರುಣಿಪುದು ಶಂಕರಾ ಶಶಿಧರಾ
ಎನಗೆ ನೀಂ ಕರುಣಿಪುದು ಗಿರಿಜಾಮನೋಹರಾ
ಘನಮಹಿಮ ನೀನ್ನೈದೆ ಕೃಪೆಮಾಡಲಾವುದೊಂದರಿದುಂಟೆ ಲೋಕದಲ್ಲಿ ೪೧

---

೧ ಹೋ (ಹ)

ಕರುಣಿಸಲಿರುಂಪೆಯಾ ಬ್ರಹ್ಮನಾಗದೆ ದೇವ
ಕರುಣಿಸದಿರಲ್ ಬ್ರಹ್ಮನಿರುಹೆಯಾಗನೆ ದೇವ
ಕರುಣಿಸುವುದೆನಗೀಗ ಕಾಲಹರ ಕಪಟಹರ ಕಾರುಣ್ಯ ಸುಖ ಸಾಗರಾ
ಹರಹರ ಪುರತ್ರಯ ವಿನಾಶ ಪುಣ್ಯ ಸುಕೋಶ
ಹರಹರ ಸುರಾಸುರಸ್ತುತ್ಯ ಭಕ್ತಭೃತ್ಯ
ಹರಹರ ಗಿರೀಶ್ವರ ಮುನೀಶ್ವರ ಮನೋಂಬುಜ ಸುಶಯ್ಯ ಎನ್ನಯ್ಯ ಜೀಯ ೪೨

ಜಯ ಸುರನದೀತರಂಗಾವೃತ ಜಟಾಭಾರ
ಜಯ ಸುಧಾಕರ ಕಳಾಧರ ಮಂಗಳಾಕಾರ
ಜಯಲೋಚನತ್ರಯವಿರಾಜಿತ ಮಹಾಪ್ರಭುವೆ ವಿದ್ಯಾವಿನೋದವಿಭುವೆ
ಜಯ ವಿಮಳ ಪಂಚಮುಖರಂಜಿತ ಸದಾಶಿವನೆ
ಜಯ ನೀಲಕಂಠ ಭವಹರ ಭವಾನೀಧವನೆ
ಜಯ ಸಕಳ ಭಕ್ತಕಾಮಿತ ಕಲ್ಪಭೂಮಿರುಹ ಜಯ ಭರ್ಗ ಭೀಮರುದ್ರಾ ೪೩

ಎಂದು ಪೊಗಳ್ವನಿತಕ್ಕೆ ಪುರವೆದ್ದುವಮ್ಮಮ್ಮ
ಚಂದದ ನವಗ್ರಾಮವಾಗಸದೊಳಮ್ಮಮ್ಮ
ದುಂದುಭಿಗಳೊದರಿದುವು ಪೂಮಳೆ ಸುರಿದುದಲ್ಲಿ ಲೋಕವೆಲ್ಲೀಕ್ಷಿಸಲ್ಕೆ
ಒಂದು ಪುರವೊಂದುದ್ಭಟನ ಕೂಡೆ ನೆರೆ ಪೋಯ್ತು
ಒಂದೆಂದಡೊಂಬತ್ತೆನಿಪ್ಪದಿವರಿಂದಾಯ್ತು
ಎಂದಿಂತು ಜಗವೆಲ್ಲ ತಲೆದೂಗಿ ಕೊಂಡಾಡುತಿರ್ದುದದನೇನೆಂಬೆನು ೪೪

ಸುರನಗರ ಮೊದಲೆಲ್ಲ ಲೋಕಂಗಳಂ ದಾಂಟಿ
ಭರದಿಂದೆ ಕೈಲಾಸಕೈತರಲ್ಕಲ್ಲಿ ಗಣ
ವರರಚ್ಚರಿಯನಾಂತರಾ ನವಗ್ರಾಮಂಗಳಂ ರುದ್ರಲೋಕದಲ್ಲಿ
ಸರಸದಿಂದಿರಿಸಿ ತದ್ಭಕ್ತನಂ ತರ್ಕೈಸಿ
ಮೆರೆವ ಗಣಪದವನೊಲಿದಿತ್ತೆ ನೀನದರಿಂದೆ
ವರಹಲಾಯುಧ ದೇವನಡಿಗಳಂ ಬಿಡದೆ ನೀಂ ಸಡಗರದಿ ನುತಿಸು ನಂಬಿ ೪೫

ಅಂತು ಸಂಧಿ ೧೮ ಕ್ಕಂ ಪದಗಳು ೬೨೫ ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

## ಸಂಧಿ : ೧೯

**ಸೂಚನೆ :**

ಮಳೆಯರಸ ಸಾಮವೇದಿಯು ಭೋಗನಚ್ಯುತನ
ಲಲಿತ ವೇಳ್ಕುತ್ತ ಕಲಿಕಂಬ ಅಃಪ್ರೂತಿ ಕಡ
ವಲನಂಬಿ ಕಲಿಗಣಾಧಿಪರ ಚರಿತಾರ್ಥಂಗಳಂ ಕೇಳ್ದನಾ ಸೌಂದರೇಂದ್ರ

ಇಳೆಯೊಡೆಯ ಸೌಂದರಾಧಿಪ ಕೇಳು ಮತ್ತೊರೆವೆ
ಮಳೆಯಾಳ ದೇಶದೊಳು ಮಳಯಾವತಿಯೆನಿಪ್ಪ
ಚೆಲುವ ಪುರವೆಸೆದಿರಲ್ಕಾ ಪುರಕ್ಕರಸಾಗಿ ದೇವರಾಜೇಂದ್ರನೆಂಬ
ವಿಳಸದಭಿಧಾನದಿಂದಿರುತಿರ್ದನವನರಸಿ
ಕಳೆವೆತ್ತ ಕಾಮಿನಿಯು ಶಚಿಯೆಂಬ ನಾಮದಿಂ
ಸಲೆ ಸುಖದೊಳಿರುತಿರ್ದಳಾ ದಂಪತಿಗಳ ಸಾಮ್ರಾಜ್ಯವನದೇನೆಂಬೆನು ೧

ವಿತ್ತದಿಂ ಸರಿಯಿಲ್ಲ ಚತುರಂಗ ಪಡೆಯಿಂದೆ
ಮತ್ತವಗೆ ಪಡಿಯಿಲ್ಲ ಲೋಕಹಿತಕರಮಾದ
ಸತ್ಯವಾಕ್ಯದೊಳವಗೆ ಸಮವಿಲ್ಲ ರಾಜರೊಳಂಗಂತ್ಯಧಿಕರವನಿಗಿಲ್ಲ
ನಿತ್ಯ ಸದ್ಭಕ್ತಿಯೊಳು ಕುಂದು ಕೊರತೆಗಳಿಲ್ಲ
ವತ್ಯಂತ ದಾತೃತ್ವದೊಳಗವಂಗೆದುರಿಲ್ಲ
ಚಿತ್ತ ಶುದ್ಧಿಯೊಳುತ್ತಮೋತ್ತಮಂ ತಾನೆನಿಸಿ ತತ್ಪುರದೊಳೆಸೆದಿರ್ದನು ೨

ಇರಲಾನೃಪಂಗೆ ಸುತರಿಲ್ಲದಿರೆ ಕಾಂಕ್ಷೆಯಂ
ವೆರಸೆನ್ನನುಂ ಪ್ರಾರ್ಥಿಸಲ್ಕೊರೆದೆ ಶತಪರುಷ
ದುರುಮೂರ್ಖ ಷೋಡಶಾಬ್ದದ ಕುಶಲ ಸುತರೀರ್ವರುಂಟಿವರೊಳಾವನಲ್ಲಿ
ನೆರೆ ನಿನ್ನ ಪ್ರೀತಿಯುಹುದವನನಿತ್ತಪೆ ನಾನು
ಭರದಿಂದೆ ಪೇಳೆನಲು ಪದಿನಾರು ಬರಿಸದಾ
ಸರಸನಂ ಕರುಣಿಸೆನಲಂತಾಗಲೆಂದವನಿಗಾನು ವರವಿತ್ತೆನೊಲಿದು ೩

ಕೆಲವು ದಿನವಾಗಲಾನೊರೆದಂತೆ ದಿವ್ಯ ಸುತ
ಲಲನೆಯುಹ ಶಚಿಯುಳ ಸುಗರ್ಭದಿಂದೊಗೆಯಲ್ಕೆ
ಒಲವಿನಿಂ ಜಾತಕರ್ಮವನೆಸಗಿ ಮಳೆಯರಾಜನೆನಿಪ್ಪ ಪೆಸರನಿಟ್ಟು
ಪಲವು ತೆರದಿಂದ ತದ್ಭಕ್ತರಿರಂತಣಿಪುತ್ತೆ
ಸಲೆ ಸೌಖ್ಯದಿಂದೆ ಸುಕುಮಾರನಂ ಸಲಹುತ್ತೆ
ನಲವಿನಿಂದಿರೆ ಕುವರ ದಿನದಿನಕೆ ವೆಗ್ಗಳಿಸಿ ತೊಳತೊಳಗಿ ಬೆಳೆವುತಿರ್ದಂ ೪

ಸರಸದಿಂ ಸಕಲ ವಿದ್ಯಂಗಳಂ ಕಲಿತೊಡನೆ
ತುರಗದೇರಾಟದ ಚಮತ್ಕಾರದನುವರಿದು
ಪರಮೋತ್ಸವದೊಳಿರುತಿರಲ್ದೇವರಾಜನುಂ ಶಚಿದೇವಿಯುಂ ಪುತ್ರನ
ಉರುತರದ ಯೌವನೋದಯಮಂ ನಿರೀಕ್ಷಿಸುತೆ
ಕೊರತೆಯೆಂದೆನಿಸುತಾನಿತ್ತಾಯುವಂ ನೆನೆದು
ಉರಿಯೊಳು ಬಿಸುಟ ಮಲ್ಲಿಗೆಯ ಮಾಲೆಯಂತೆ ಕರ್ರನೆಕಂದಿ ಸುಯ್ದು ಸುಯ್ದು ೫

೧ ರ (ಜ) ೨ ನಂ (ಹ)

ಶೋಕರಸವುಕ್ಕಿ ಸಂತಾಪ ಶಿಖಿಯಿಂ ಕುದಿದು
ಓಕರಿಪ ಕಣ್ಣ ನೀರಿಂದಿರಲು ಕಾಣುತಲ
ನೇಕ ವ್ಯಥೆಯಿಂ ಮಳೆಯರಾಜಂ ಮಹಾ ಕೌತುಕಂಬಟ್ಟದೇನದ್ಭುತಂ
ಆಕಲಿತ ಸುಧೆಯೊಳು ವಿಷಂ ಬೆಳಗಿನೊಳು ಮರ್ಬು
ಲೋಕಹಿತಕರಪಾದ ಜೊನ್ನದೊಳು ದಳ್ಳುರಿಯು
ಶ್ರೀಕಂಠ ಭಕ್ತರ ವಚನದಲ್ಲಿ ಹುಸಿ ಹುಟ್ಟುವಂತೆ ಈ ಸಂಪದದೊಳು ೬

ಜವದಿ ನಿಮಗೊಗೆದಾರ್ತಮಾವುದದು ಪೇಳ್ವುದೆನೆ
ಕುವರನಂ ಕಾಣುತ್ತೆ ಮತ್ತಮತ್ತಳುತವನ
ತವಕದಿಂ ಬಿಗಿಸುಪ್ಪುತೆಲೆ ಪುತ್ರ ಪದಿನಾರು ವರುಷದಾಯುಷ್ಯ ನಿನಗೆ
ಶಿವನಿತ್ತಿಹಂ ಇಂದಿಗಾಯ್ತು ಪದಿನೈದಬ್ದ
ಮವಧಿಯೊಂದೆ ಬರಿಸಮುಂಟಾವಗತಿಯೆಮಗೆ
ವಿವರಿಸುವುದೆನುತೆ ಪೊಡೆಯೊಡೆವ ತೆರನಳುವ ಪಿತಮಾತೆಯುಂ ಸಂತೈಸುತೆ ೭

ಎನಗಾಯುವನ್ನಿತ್ತ ಶಿವನಿರ್ದಪಂ ಮತ್ತೆ
ಮನವೊಸೆದು ಪಡೆದವರ್ನೀವಿರ್ದಪಿರಿ ಮೇಲೆ
ಜನಿಸಿದವನ್ನೈದೆ ನಾನಿರ್ದಪೆನು ಇದಕವಧಿಯಿನ್ನೊಂದು ಬರಿಸಮುಂಟು
ಎನಿತಾದಡಂ ಶಂಕರಂ ಕರುಣೆ ನಿಮಗಾರ್ತ
ವಿನಿತೇಕೆನುತ್ತಲಂದವರ್ಗಳಂ ಸಂತೈಸಿ
ವಿನುತ ಲಿಂಗಾರ್ಚನಂ ಭೋಜನೋತ್ಸವದಿಂದಲೆಂದಿನಂತಿರುತಿರ್ದನು ೮

ಕೆಲವು ದಿನವಾಗಲಾ ಮಾತೆ ಪಿತರಲೆ ಮಗನೆ
ಉಳಿದುದಾರುದಿಂಗಳವೆನಲ್ಕರಿಯದಂತಿಪ್ಪ
ಸಲೆ ಮೂರು ತಿಂಗಳೆನೆ ಮೌನಮಂ ತಾಳ್ದಿರ್ಪ ತಿಂಗಳೆನೆ ಸುಮ್ಮನಿರ್ಪಂ
ತಿಳಿ ಮಗನೆ ತಪ್ಪದದು ನಾಳೆ ಮೃತಿಯೆಂದೆನಲು
ಘಳಿಲನಾ ಮಳೆಯರಾಜಂ ಭಕ್ತರಂ ಬರಿಸಿ
ಪೊಳಲೊಳಾದಿನದಲ್ಲಿ ಶಿವರಾತ್ರಿಯಂ ಮಾಡಲನಿತರೊಳ್ಬೆಳಗಾದುದು ೯

ಶರಧಿಯೊಳು ಶಾಂತಿಂಕರನೆಂಬಣುಗ ಜನಿಸಲಾ
ಶರಧಿ ತಚ್ಛಾಂತಿ ಕರ್ಮವನೆಸಗದಿರಲು ಮುನಿ
ವರನಗಸ್ತ್ಯಾಪೋಷಣಂಗೈಯಲಬ್ಧಿ ತದ್ದೋಷ ಪರಿಹಾರಾರ್ಥಕೆ
ಉರುತರ ಪ್ರಾಗ್ಗಿರೀಶ್ವರ ನಾಮವಾಂತ ಸು
ಸ್ಥಿರಲಿಂಗದಮಲ ಮಂಡೆಯೊಳಿಟ್ಟ ಮಹಿತ ಭಾ
ಸುರ ಭೂರ್ಮ[1]ಧಾರಾಘಟಮಿದೆಂಬ ತೆರದಿಂದೆ ರವಿಯುದಯಗಿರಿಯೊಳೆಸೆದಂ ೧೦

ಉದಯ ಸಮಯದೊಳೆದ್ದು ಶುದ್ಧಾಂಗನಾಗಿ ಲಸ
ದಧಿಕವಹ ಭಸಿತ ರುದ್ರಾಕ್ಷೆಯನಲಂಕರಿಸಿ
ಸದಮಲವೆನಿಪ್ಪ ಸ್ವಯಂಭುಲಿಂಗದ ಸನ್ನಿಧಾನದೊಳು ಬಂದುನಿಂದು
ವಿಧವಿಧದೊಳಾ ಲಿಂಗಮಂ ಪೂಜಿಸುತ್ತ ಶಿವ
ಪದಕಮಲ[2]ಮಂ[3] ಹಾಡಿರ್ದೈ ಎಂದು ಕುಣಿವುತ್ತ
ಗದಗದ ಸ್ವರದಿಂದೆ ಮೈಪುಳಕನಾವರಿಸಿ[4]ಲಿಂಗಮಂ ಜಿಗಿದಪ್ಪುತ ೧೧

ಪರಮ ಪರಿತೋಷದಿಂ ಪದ್ಮಾಸನಂ ಬಲಿದು
ಹರಿವ ಮನಮಂ ನಿಲಿಸಿ ಬುದ್ಧಿಯಂ ಶುದ್ಧೈಸಿ
ನೆರೆ ಚಿತ್ತಮಂ ತಿಳಿವಿಕೆಯೊಳಿಟ್ಟು ಹಂಕಾರಮಂ ತಾನಗಲಿ ನಿಲ್ಲುತೆ
ಉರುತರ ಹೃದಯ ಕಮಲಕರ್ಣಿಕೆಯು ಗದ್ದುಗೆಯೊ
ಳಿರದೆ ಸಹಜಾನಂದವೆಂಬ ಲಿಂಗವ ಕಂಡು
ಹರವರಿಯ ಹರುಷದಿಂದಿತರ ಭೇದವನರಿಯದೋಲಾಡುತಿರುತಿರ್ದನು ೧೨

ಇರಲವನ ಭಕ್ತಿಗಾನೊಲಿದು ನಿಜರೂಪಮಂ
ನೆರೆ ತೋರಿ ನಿನ್ನಿಷ್ಟವೇನೆನಲವಂ ಪರಮ
ಹರುಷದಿಂದೆಲೆದೇವ ಕರುಣಿಸು ಶತಾಯುವೆನಗೆನ್ನ ದೇಶದೊಳಿರುತಿಹ
ಇರುಹೆ ಮೊದಲಾನೆ ಕಡೆ ಸಕಲ ಜೀವಾಳಿಗಳಿ
ಗಿರದೆ ಶತವರ್ಷದಾಯುವನಿತ್ತು ಕಡೆಯಲ್ಲಿ
ಸರಸದಿಂ ಕೈಲಾಸಗಿರಿಗೆ ನಮ್ಮೆಲ್ಲರಂ ಕೊಂಡೊಯ್ದು ರಕ್ಷಿಸೆನಲು ೧೩

---

೧ ಕಾ (ಹ) ೨ ರ್ಕ್ಕ (ಹ) ೩ ವರ (ಹ) ೪ + ಶಿವ (ಜ)

ಅವನಿಷ್ಟವಿದ್ದಂತೆ ಕರುಣಿಸುತ್ತಂತ್ಯದೊಳು
ಅವನ ಪಿತ ಮಾತೆ ಮೊದಲಾದ ಬಂಧುವರ್ಗಮುಂ
ಅವನ ಚತುರಂಗ ಸೇನಾ ಸಹಿತವೆಲ್ಲಮುಂ ಅವರಿವರೆನುವರಿಲ್ಲದೆ
ಅವನವನಿಯೊಳಗಿರ್ಪ ಪಶುಪಕ್ಷಿ ಕೀಟಮುಂ
ಅವನೊಡನೆ ಸಕಲಮುಂ ಪುಮಪುರಕೆ ಕೊಂಡೊಯ್ದು
ಅವಗೆ ಗಣಪದವಿತ್ತೆನವರಿಂದೆ ಮಳೆಯರಾಜನನೊಲಿದು ಕೀರ್ತಿಸುವುದೈ ೧೪

ಪ್ರೇಮದಿಂದಾಲಿಸೈ ನಂಬಿ ಮತ್ತಾನೊರೆವೆ
ಭೂಮಿಯೊಳು ಛತ್ತೀಸ ಪುರಗಳೆಂದೊಪ್ಪಿರಲು
ಗ್ರಾಮಂಗಳೊಳಗೊಂದು ಪುರದಲ್ಲಿ ಸಲೆ ಶಿವಬ್ರಾಹ್ಮಣಂ ಮದ್ಭಕ್ತನು
ಸಾಮವೇದಿಯೆನಿಪ್ಪ ಪೆಸರಿನಿಂದಿರುತಿರ್ದ
ನಾ ಮಹಾ ವೇದಾಧಿಕಾರಿಯಾಗಿರುತಿರ್ದ
ರಾಮಣೀಯಕವಾದ ವೇದಾಂತ ಸಿದ್ಧಾಂತಗಳೊಳಪ್ರತರ್ಕ್ಯನೆನಿಸಿ ೧೫

ಎರಗನಾರ್ಗೆಯು ನೋಡೆ ತನಗೆರಗುವುದು ಜನಂ
ನೆರೆಹೊಗಳುವರು ತನ್ನನೀ ಧರಿತ್ರಿಗೆ ಘನಂ
ಸರಸವಾದವನಾಚರಣೆಯೆಲ್ಲ ವೇದಮಯ ನುಡಿಯೆಲ್ಲ ಶಾಸ್ತ್ರಮಯವು
ಅರಸುಗಳು ಮೈಯಿಕ್ಕಿ ಪಾವುಡವನಟ್ಟುವರು
ಧರಣೀತಳದ ವಿಪ್ರರೆಲ್ಲ ನಲಿದೆರಗುವರು
ಗುರುವೆನಿಸಿ ಮೂರುಸಾವಿರದ ಮೇಲೈನೂರು ಶಿಷ್ಯರಿಂದೊಪ್ಪಿರ್ದನು ೧೬

ವರಮನುಗಳುರು ಬಲದಿ ಧರೆಯ ಮೇಲಡಿಯಿಡಂ
ನೆರೆ ಗಗನ ಸರಣಿಯೊಳಗಿರದೆ ತಾನ್ನೈತಹಂ
ಗುರುಪೂಜೆ ಹರಪೂಜೆ ಪರಮಭಕ್ತರ ಪೂಜೆಗಿನ್ನಧಿಕವಿಲ್ಲೆನುತ್ತಾ
ಸರಸದಿಂದುರುಮನದಿ ಭರದಿಂದೆ ನಂಬುತ್ತ
ಪುರಹರ ಪರಾತ್ಪರ ಗಿರೀಶ್ವರ ಜಯವೆನುತ್ತ
ಸ್ಮರಿಸುತಿಹ ಚರಿಸುತಿಹ ಪುರಪಟ್ಟಣಂಗಳೊಳಗೆಲ್ಲರ್ಗೆ ಬೋಧಿಸುತ್ತೆ ೧೭

ಇಂತಿರಲ್ಕಾ ಸಾಮವೇದಿ ಪಿತೃಪಕ್ಷ ಬರ
ಲುಂ ತವಕದಿಂದೆ ಗುರುವಿಂಗೆರಗಿ ಬರುವುದೆನೆ
ಅಂತಕಾಂತಕ ಬಪ್ಪ ಪೋಗನೆ ಹಸಾದವೆನುತಾತ ತನ್ನಾಲಯದೊಳು
ಸಂತಸದಿ ಪಕ್ಷವೆಸಗುತ್ತಿರಲ್ಕಾದಿನದಿ
ನಾಂ ತಳುಹದವನ ಪಿತೃ ಸಂತಾನಮಂ ಕೂಡಿ
ಮುಂತಿರ್ದ[1] ಸಾಮವೇದಿಯ ಮಂದಿರದೊಳಾನು ನಿಜರೂಪದಿಂದಿರ್ದೆನು ೧೮

ಬಾ ಮಗನೆ ಕೈಲಾಸಪುರಕೆ ಕೊಂಡೊಯ್ವೆನೆನೆ
ಆ ಮಹಾ ಗುರುವಿಲ್ಲದಾಂ ಬರುವನಲ್ಲವೆನೆ
ಪ್ರೇಮದಿಂ ಗುರುಸಹಿತ ಛತ್ತೀಸ ಪುರಸಹಿತಲಾತನಂ ಕೊಂಡೊಯ್ವುತಾ
ಆ ಮಹಿತರೀರ್ವರ್ಗೆ ಗಣಪದವನೊಲಿದಿತ್ತು
ನಾ ಮನ್ನಿಸಿದೆನು ಕೇಳ್ಳೈ ನಂಬಿ ಭಕ್ತಿಯಿಂ
ರಾಮಣೀಯಕವಾದ ನುಡಿಯಿಂದೆ ಸಾಮವೇದಿಯನೊಲಿದು ಕೀರ್ತಿಸು ಕಣಾ ೧೯

ಒರೆವೆನಾಲಿಸು ನಂಬಿ ಕೆಂಬಾವಿಯೆಂಬ ಪುರ
ವಿರುತಿರಲ್ಕದರಲ್ಲಿ ಭೋಗಣ್ಣನೆಂದೆಂಬ
ಪರಮ ಸದ್ಭಕ್ತನಿರುತಿರ್ದನವ ಜಂಗಮ ಪ್ರೇಮಿ ನಿಃಕಾಮಿಯಾಗಿ
ಗುರುಭಕ್ತರೊಳಗೆ ಜಾತಿಯು ವಿಚಾರಿಪುದಿಲ್ಲ
ನೆರೆ ಭಕ್ತರೊಳಗೆ ಜುಣ್ಣುಡಿಯನರಸುವುದಿಲ್ಲ
ವರಭಕ್ತವೇಷವಿದ್ದಲ್ಲಿ ಶಿವನಿರುತಿರ್ಪನೆಂದವರನರ್ಚಿಸುತ್ತೆ ೨೦

ಇಂತು ಪಲವುಂ ಕಾಲವಿರುತಿರ್ಪ ಸಮಯದೊಳು
ಸಂತತಂ ಸದ್ಭಕ್ತಿ ಸಂದಣಿಪ ಚಂದದೊಳು
ನಾಂ ತವಕದಿಂದವನ ಭಕ್ತಿಯನರಿವೆನೆಂದು ಹಿರಿಯವೇಷವನಾನುತೆ
ಮುಂತೊಂದು ಹೆಗಲಮಿಣಿ ಕೈಯಲ್ಲಿ ತಿರಿಸೋರೆ
ಪಂಥದಿಂ ಭೂತಿ ರುದ್ರಾಕ್ಷೆಯನಲಂಕರಿಸಿ
ಸಂತಸದೊಳವನ ಮಂದಿರದ ಮಂದಂ ಸುಳಿಯಲಾತನೆನ್ನಂ ಕಾಣುತಾ ೨೧

---

೧ ರ್ಪ (ಹ)

ಬಂದು ಭೋಗಣ್ಣನಾಕ್ಷಣದಿ ನೆರ ಸೈಗೆಡೆದು
ಸಂದಣಿಪ ಪುಳಕಂಗಳೊಪ್ಪೆ ಪದಮಂ ಪಿಡಿದು
ಇಂದುಧರರೂಪ ಬಾರೈಯೆಂದು ಮಂದಿರದೊಳುನ್ನತಾಸನವನಿಕ್ಕಿ
ಅಂದು ಪದಮಂ ತೊಳೆದು ಕಂಗಳೊಳಗೊತ್ತುತಂ
ಛಂದದಿಂ ತನ್ನುರದಿ ಮಸ್ತಕದಿ ಸಾರ್ಚುತಂ
ಕುಂದು ಕೊರತೆಗಳಿಲ್ಲದಂತರ್ಚಿಸುತ್ತಲಾರೋಗಣೆಯ ಮಾಡಿಸುತಿರೆ ೨೨

ಕುಲದವರಿದಂ ಕಾಣುತೆಲ್ಲರೊಂದಾಗುತ್ತ
ಚಲದಿಂದಲಾ ಚಂದಿಮರಸರಲ್ಲಿಗೆ ಬಂದು
ಎಲೆ ರಾಯ ಭೋಗಣ್ಣನಿಂದೆ ನಮ್ಮೀ ಪೊಳಲು ನೆಲೆಗೆಟ್ಟು ಬೆಲೆಗೆಟ್ಟುದು
ಹೊಲೆಗಲೆತುದೇನೆಂಬೆವೆನಲದೇನೆಂದೆನಲು
ಹೊಲೆಯನಂ ಮುಟ್ಟಿ ಪೂಜಿಸುತಿಪ್ಪನವನೊಡನೆ
ಸಲೆ ಭುಂಜಿಸುಂತ್ತಿಂಪ್ಪ ಭಕ್ತಿ ಮರುಳಾವರಿಸುತಿವರವರೆನಿಪ್ಪುದರಿಯಾ ೨೩

ಆತನಂ ಕರೆಯಿಪುದು ಪೊರಮಡಿಪುದಲ್ಲದೊಡೆ
ಆತನಿರಲಾವೆಲ್ಲ ಪೋದಪ್ಪೆವೆನಲರಸ
ಘಾತಕರ ನುಡಿಗೇಳ್ದು ಪಾತಕಕ್ಕನುಸರಿಸುತಾತನಾತನ ಕರೆಸುತೆ
ಪೂತಾಂಗ ಸದ್ಭಕ್ತ ನೀನಿಂತುಗೈವರೇ
ಜಾತಿಯಲ್ಲದ ಹೊಲೆಯನಂ ಪೂಜೆಮಾಳ್ಪರೇ
ನೀತಿಗೆಟ್ಟೀ ತೆರದಿ ನಮ್ಮೂರೊಳಿರಸಲ್ಲ ಬಲ್ಲತ್ತಪೋಗೆನಲ್ಕೆ ೨೪

ದೃಢಭಕ್ತ ಭೋಗಣ್ಣನಲ್ಲಿಂ ಮನೆಗೆ ಬಂದು
ತಡವಿಲ್ಲದೂರಿಂದೆ ಪೊರಮಟ್ಟ ಮನೊಂದು
ಅಡಿಯಿಡಲ್ಕಾಪುರದೊಳಿರ್ದ ಲಿಂಗಂಗಳೆಲ್ಲಾ ತನೊಡನುಬ್ಬೆದ್ದವು
ನಡೆಯೆ ನಡೆದುದು ಪುರದ ಶಿವಲಿಂಗವೊಂದಾಗಿ
ಒಡನೊಡನೆ ಭೋಗಣ್ಣನೆಡಬಲದೊಳೊಂದಾಗಿ
ಪೊಡವಿ ಸೋಂಕದ ತೆರದಿ ಬರುತಿರಲ್ತರುನಿಕರ ನೆಳಲಾಗಿ ಬರುತಿರ್ದವು ೨೫

---

೧ ತಿ (ಹ) ೨ ಪೆ (ಹ) ೩ ಟ್ಟ (ಹ)

ಜಂಗಮವುಲಿಂಗಕ್ಕೆ ಲಿಂಗವಾ ಜಂಗಮಕೆ
ಲಿಂಗ ಜಂಗಮವೆಂಬು೧[ದವಿ]೧ಭೇದವೀಜಗಕೆ
ಸಂಗಡಿಸಿ ತೋರ್ಪಂತೆ ಭೋಗಣ್ಣನೋಡನೋಡನೆ ಲಿಂಗತತಿವೇಷ್ಟಿಸಿರಲು
ಲಿಂಗವೊಂದರ ಬಳಿಯೊಳೊಂದು ತರು ನೆಳಲಾಗಿ
ಹಿಂಗದಾಲಿಂಗಂಗಳೆನಿತನಿತು ತರುನಿಕರ
ಕಂಗೊಳಿಸುತಿರ್ದುದದು ಲಿಂಗದಾರವೆಯೆಂಬ ತೆರದೊಳೈತರುತಿರ್ದುದು ೨೩

ಶಿವಲಿಂಗತತಿಯನುಂ ಭೋಗಣ್ಣನೀಕ್ಷಿಸುತೆ
ತವೆಮರುಗಿ ತಲೆದೂಗಿ ಚಿಂತಿಸುತೆ ೨ಕಂಪಿಸುತೆ೨
ಶಿವಶಿವಾ ದೇವಿಯರನಗಲ್ದಿಂತು ಎನ್ನೊಡನೆ ಎಡಬಲದೊಳೈತಪ್ಪರೆ
ತವಕದಿಂ ಬಿಸಿಲು ಚಳಿಮಳೆಯೆನದೆ ಬಪ್ಪರೇ
ಅವನಿಯೊಳು ಹೊಸತಿಂಗೆ ಹೊಸತೆನಲು ಮಾಳ್ಪರೇ
ಭವಹರ ಮಹಾದೇವಯೆನುತೆ ಲಿಂಗಂಗಳಂ ಸಂತವಿಡುತಿರುತಿರ್ದನು ೨೪

ಬಲದ ಲಿಂಗಂಗಳಂ ಬಲದ ಕರದಿಂದಪ್ಪಿ
ಕೆಲದ ಲಿಂಗಂಗಳಂ ಕೆಲದ ಕರದಿಂದಪ್ಪಿ
ಒಲವಿನಿಂ ಪಿನ್ನೆಲೆಯೊಳಿರ್ದ ಲಿಂಗಂಗಳಂ ಬೆನ್ನಿನಿಂದೊಲಿದಪ್ಪುತ
ಚೆಲುವಾಗಿ ಮುಂದಿರ್ದವನುರಸ್ಥಳದೊಳಪ್ಪಿ
ನಿಲುಕದತ್ತತ್ತಿರ್ದವಂ ಕಂಗಳಿಂದಪ್ಪಿ
ಪಲಕೆಲವು ಮೇಲಿರ್ದ ಲಿಂಗಗಳನುತ್ತಮಾಂಗದೊ೩ಳ೩ಪ್ಪಿ ಸುಖಿಸುತಿರಲು ೨೫

ಇತ್ತಲಾ ಕೆಂಭಾವಿ೪ಯೊ೪ಳಗೆ ಭಕ್ತರು ಬಂದು
ಸುತ್ತಲುಂ ನೇಮವಂ ಮಾಡಲೆಂದೈತಂದು
ಇತ್ತತ್ತ ಲಿಂಗಾಲ೫ಯಂ೫ಗಳೊಳು ಬರಿಯ ಪೀಠಂಗಳಿರೆ ಕಾಣುತ್ತಲೀ
ಚಿತ್ತದೊಳು ಕೌತುಕಂಗೊಂಡೆಲ್ಲರೊಂದಾಗಿ
ಪತ್ತನದಧಿಪ ಚಂದಿಮರಸರಲ್ಲಿಗೆ ಬಂದು
ಬಿತ್ತರಿಸುತಿರ್ದರೆಲೆರಾಯ ಲಿಂಗಾಲ೬ಯಂ೬ಗಳೊಳು ಲಿಂಗಂಗಳಿಲ್ಲ ೨೬

---

೧ ವೀ (ಜ), ಏ (ಹ)  ೨ X (ಹ)  ೩ ಳೊ (ಹ)  ೪ ವೊ (ಹ)
೫ ಯ (ಹ)  ೬ ಯ (ಹ)

ಬರಿಯ ಪೀಠಂಗಳಿಹವೇನಿದಚ್ಚರಿಯೆನ
ಲ್ಕರಸಸತಿ ವಿಸ್ಮಯಂ ಬಟ್ಟಿದೇಕಾಂಯಿತೆಂನಲು
ಶರಣಸಹ ಭೋಗಣ್ಣನೊಡನೆ ಲಿಂಗಂಗಳೆಲ್ಲಂ ಪೋದುವೇನೆಂಬೆವು
ಭರದಿಂದ ಕರೆತಹುದು ದಿವ್ಯ ಸದ್ಭಕ್ತನಂ
ಹರನ ಪುರಹರನ ಘನಸಾಮರ್ಥ್ಯಯುಕ್ತನಂ
ಧರೆಯೊಳಗೆ ಕಟ್ಟಧಿಕ ಶಿವಲಿಂಗವಂತನಂ ಸರಸ ಸದ್ಗುಣಶಾಂತನಂ ೩೦

ಸಾರ ಲಿಂಗಂಗಳೊಳು ಬಾಳ್ವ ಭೋಗಣ್ಣನಂ
ತಾರದಿರೆ ಧರಣಿ ನುಗ್ಗಾಗುವುದು ಕೇಳರಸ
ಮೀರದಿರುಯೆಮ್ಮನುಡಿ ಏಳೇಳೆನಲ್ಚಂದಿಮರಸನತಿ ಸಿಗ್ಗಾಗುತ
ಕ್ರೂರರುಪದೇಶದಿಂ ಮಂದಮತಿಯಾದೆ ನಾಂ
ಕಾರಣಿಕನೆಂದು ಮೊದಲರಿಯುಂದಾಂದೆನೆನುತ್ತ
ಪೌರಜನವೆರಸಿ ಸಖಿಯರ ಕಲಶಕನ್ನಡಿಗಳಂವೆರಸಿ ಬರುತಿರ್ದನು ೩೧

ಪೊಡೆವ ತಮ್ಮಟಿನಾದ ಭೇರೀರವಂಗಳಿಂ
ಇಡಿದ ವೃಷಭಧ್ವಜಂ ಛತ್ರ ಚಾಮರಗಳಿಂ
ಒಡನೊಡನೆ ಭೋಗಣ್ಣನಂ ಪೊಗಳ್ವ ರಭಸದಿಂ ಎಲ್ಲರತ್ಯುತ್ಸವದಲೀ
ನಡೆದುದಾ ಗಿರಿಪತಿಯ ಮನೆಯ ನಿಬ್ಬಣದಂತೆ
ನಡೆದುದಾ ಶಿವಲೀಂಗಯಾತ್ರಾನಿಕರದಂತೆ
ಸಡಗರದೊಳೈತಂದು ಭೋಗಣ್ಣನಂ ಕಾಣುತೆಲ್ಲರುಂ ಸೈಗೆಡೆದರು ೩೨

ಕರವಮುಗಿದೆಲೆಲೆ ಕಾರುಣ್ಯನಿಧಿ ಭೋಗಣ್ಣ
ನರಕದೊಳು ಬೀಳ್ವವರನೆತ್ತುವುದು ಭೋಗಣ್ಣ
ಅರಿಯದಜ್ಞಾನಿಗಳ್ನಾವು ನಮ್ಮೆಲ್ಲರ್ಗೆ ಬುದ್ಧಿಗೊಟ್ಟಿಳುಹು ಭೋಗಾ
ನೆರೆಮುಸುಕಿದೆಮ್ಮಮ್ಮ ಮಾಯೆಯಂ ನೀಗಣ್ಣ
ಸುರುಚಿರ ಮಹಾಮಹಿಮ ಲಿಂಗನಿಧಿ ಭೋಗಣ್ಣ
ಹರಹರ ಮಹಾಲಿಂಗಸಂಪನ್ನ ಭೋಗಣ್ಣ ಭೋಗಿ ನೀಂ ಬಿಜಯಗೈಯ್ಯಾ ೩೩

---

೧ ಯ್ತು (ಹ) ೨ ಧೋ (ಹ) ೩ ಯ್ಯೋ (ಜ)

ಎಂದು ಪಲವಂದದಿಂ ನುತಿಪ ನುಡಿಯುಂ ಕೇಳ್ದು
ಸಂದಣಿಪ ಶಾಂತಿಯಿಂ ಕಾರುಣ್ಯಮುಂ ತಾಳ್ದು
ಇಂದಾನು ದೇವರಂ ದೇವಿಯರನೊಂದುಗೂಡಿಸುವೆನೆಂಬಕ್ಕರಿಂದೆ
ಪಿಂದಿರುಗಿ ಬರುತಿರ್ದನೇನೆಂಬೆ ಲಿಂಗಗಳ
ಗೊಂದಣಂ ಎನಗೆ ತನಗೆಂಬಂತೆ ಮುಂಚಿದುವು
ಅಂದರಿಯದವು ನಿಜಸ್ಥಾನಂಗಳಂ ಮರೆದವಾನಂದ ಪರವಶದೊಳು ೩೪

ಶರಣ ಭೋಗಣ್ಣನೊಡನಂ ಪೋಗಿಯೈತಂದು
ಕುರುಹಿದೆಂಬಂತಲ್ಲಿ ಸ್ಥಾನ ಪಲ್ಲಟವಾಗಿ
ಪಿರಿಯ ಪೀಠಂಗಳೊಳು ಕಿರಿಯ ಲಿಂಗಂ ಕಿರಿಯ ಪೀಠದೊಳು ಪಿರಿಯ ಲಿಂಗಂ
ಭರದಿಂದ ನೆಲಿಸಿದುವು ನಲಿವಾದುದೆಲ್ಲರ್ಗೆ
ಶರಣಂಗೆ ನಿಜರೂಪಮಂತೋರಿ ಕೊಂಡೊಯ್ದು
ವರರಜತಗಿರಿಯಲ್ಲಿ ಗಣಪದವನಿತ್ತನವರಿಂ ಭೋಗನಂ ಪೊಗಳಲೈ ೩೫

ಒರೆವೆನಾಲಿಸು ನಂಬಿ ಚೋಳಮಂಡಲದಲ್ಲಿ
ಇರುತಿರ್ದ ಕುಂಭಕೋಣವೆನಿಪ್ಪ ಪುರದಲ್ಲಿ
ಪರಮ ಸದ್ಭಕ್ತನಹ ಮೂರ್ಖ ನೈನಾರೆಂಬ ಶರಣನೊಪ್ಪಿರುತಿರ್ದನು
ನಿರುತಂ ಚರಾರ್ಚನೆಯ ಮಾಡುತ್ತಲಿರೆ ತನ್ನೊ
ಳಿರುವರ್ಥವೆಲ್ಲಮುಂ ತೀರಲ್ಕೆ ಚಿಂತಿಸು
ತ್ತಿರುತೊಂದುಪಾಯಮಂ ಕಂಡನಾ ವಿತ್ತಮುಂ ಸಂಪಾದಿಸುವ ಕಾರ್ಯಕೆ ೩೬

ಜೂಜಾಡುತರ್ಥಮಂ ಗಳಿಸಿ ತದ್ಧನದಿಂದೆ
ರಾಜಿಸುವ ಜಂಗಮಾರ್ಚನೆಯನೆಸಗುವೆನೆಂದು
ಮಾಜದಂತೀತೆರಂಗೈವುತ್ತ ನಿತ್ಯ ನೇಮಾರ್ಚನಂಗೈವುತಿರಲು
ಸಾಜಭಕ್ತಿಯೊಳೀತು ಕೆಲವಬ್ದ ನಡೆಯಲ್ಕೆ
ಸೋಜಿಗವೆನಿಸುತವನ ನೋಳ್ಪೆ ನಾನೆಂದು ಬಹು
ತೇಜದಿಂ ವಾಣಿಜಾಕಾರಮಂ ತಾಳ್ದವನೊಳಾಡಿದೆಂ ಜೂಜನಂದು ೩೭

೧ ದೊಳಿ (ಹ)

ನೆರೆ ಸಾವಿರಂ ಪೊನ್ನನಾತಂಗೆ ನಾಂ ಸೋಲ
ಲಿರದೆನ್ನವಿತ್ತಮಂ ತಾತಾಯೆನುತ್ತಾತ
ತ್ವರಿತಮಂ ಗೈಯ್ಯಲಾನಿಲ್ಲವೆನೆ ತತ್ಕಶರಣನೆನ್ನುವಂ ಬಂಧಿಸುತ್ತೆ
ಭರದಿಂದ ಪೊಯ್ಯಲಾಂ ನಿಜರೂಪಮಂ ತೋರೆ
ಅರಿಯೆನೇ ಬಿಡುಬಿಡುಯಿದಾರ್ಗೆ ತೋರುವೆ ರೂಪ
ನೆರೆಯೆನಗೆ ನೀಂ ಸೋತ ವಿತ್ತವಂ ಕೊಂಡಲ್ಲದಾನೆಂತು ಬಿಡುವೆನಯ್ಯಾ ೩೮

ಅಲಸದಿರು ತದ್ಧನಂ ನಿನ್ನದಲ್ಲೆನ್ನದ
ಲ್ಲಲಘು ಚಾರಿತ್ರರಹ ಜಂಗಮದ ಧನವದುಂ
ಘಳಿಲನೀಯೆನೆ ಸೋತ ವಿತ್ತವೆಲ್ಲವನೀಯಲಾತ ಚರರಿಂಗೀಯಲು
ಒಲವಿನಿಂ ಶರಣನಂ ಮಮಪುರಿಗೆ ಕೊಂಡೊಯ್ದು
ಲಲಿತವಹ ಗಣಪದವನಿತ್ತೆ ಕೇಳೈ ನಂಬಿ
ಚಲುವನಹ ಜೂಜುಗಾರಚ್ಯುತನ ೧ಪಾಂದಪದ್ಮಂಗಳಂ ಪೊಗಳು ಕಂಡ್ಯಾ ೩೯

ಕೇಳಯ್ಯ ನಂಬಿ ಮಣಿಮಂದ ಪುತ್ತೂರಲ್ಲಿ
ಬಾಳುತ್ತಲಿರುತಿರ್ದ ವೇಳ್ಕುತ್ತರೆಂದೆಂಬ
ಮೇಲಾದ ಶರಣನಾತನ ಚರಿತ್ರವ ಪೊಗಳಲಹಿಪತಿಗಗೋಚರವೆಲೈ
ಆ ಲಲಿತ ಗುರುವಿನಿಂದುಪದೇಶಮಂ ಪಡೆದು
ಕೀಳೆನಿಪ ಸಂಸಾರಮಂ ತೊರೆದು ಗುರುಮಠದಿ
ರಾರಾಜಿಸುತ್ತ ನಿಮಿಷಾರ್ಧವಾದಡೆಯು ಗುರುಪದವಗಲದಂತಿರ್ದನು ೪೦

ನಿನ್ನ ಮಂದಿರದೊಳಿರ ಹೋಗೆಂದು ಗುರುಪೇಳ
ಲೆನ್ನಯ್ಯ ನಿನ್ನನಗಲುವುದೆಂತು ಕರುಣಿಸೆನೆ
ಮನ್ನಿಸುತ್ತಾತ ತನ್ನಯ ಹಾವುಗೆಯನೀಯೆ ಮಸ್ತಕದೊಳುರೆ ತಾಳುತೆ
ಇನ್ನಾರ್ಗೆಯೀ ಶಿರವ ಬಾಗುವವನಲ್ಲೆಂದು
ಭಿನ್ನಿಸದ ಮನದಿಂದ ಚಲಿಯಾಗುತೈತಂದು
ತನ್ನ ಮಂದಿರದೊಳಿರುತಿರ್ದನತ್ಯಾನಂದದಿಂದಲಾ ವೇಳ್ಕುತ್ತನು ೪೧

---

೧ ಪ (ಹ)

ಶಿರದಿ ಪಾವುಗೆಗಳಂ ಪೊತ್ತು ಸಂಚರಿಸುತಿಹ
ಉರದಿ ಗುರುಪಾದಸ್ಮರಣೆಯಿಂದಾಲೊಪ್ಪುತಿಹ
ಗುರುದೈವ ಗುರುತಂದೆ ಗುರುರಾಜನೆಂಬ ನುಡಿ ಜಿಂಹೆಯೊಳಗೊಪ್ಪುತಿರಲು
ಅರಿವೆನಿವನಂತರಂಗ ದೃಢವನೆಂದಾನು
ಸರಸದಿಂ ನಿಜರೂಪಮಂ ತಾಳುತವನೆದುರು
ಭರದಿಂದೆ ಪೋಗಿ ನಿಲ್ಲಲ್ಕಾಣುತವ ನುಡಿಸದೆರಗದತ್ತತ್ತ ಪೋದಂ ೪೨

ಮತ್ತವನೆದುರು ಪೋಗಿ ಎನಗೇಕೆರಗದಿಪ್ಪೆ
ಇತ್ತ ನೋಡೈಯೆನಲು ಎಲೆದೇವ ನಿನಗೆನ್ನ
ಚಿತ್ತ ಮೊದಲೆರಗಿಹುದು ತನುವೆರಗಲೇಕೆ ಗುರುರೂಪವದು ನೀನಲ್ಲವೇ
ಪೊತ್ತ ಪಾವುಗೆಗಳಂ ನಿನ್ನವಲ್ಲವೆಯೆನಲು
ಅತ್ಯಂತ ಹರುಷಮಂ ತಾಳ್ದು ಕೈಲಾಸಕ್ಕೆ
ಉತ್ತಮನ ಕೊಂಡೊಯ್ದು ಗಣಪದವನಿತ್ತೆ ವೇಳ್ಕುತ್ತನಂ ಪೊಗಳು ನಂಬೀ ೪೩

ಸುವಿವೇಕದಿಂದಾಲಿಸೈ ನಂಬಿ ಮತ್ತೊರೆವೆ
ದ್ರವಿಡ ದೇಶದೋಳು ತಿರುಮಲಿಯೆಂಬ ಪುರವನಾ
ಳುವ ದೊರೆಯು ಕಲಿಕಂಬರಾಯನೆಂದಿರುತಿರ್ದನವನರಸಿ ಸುಮತಿಯೆಂಬ
ತರುಣಿಯೊಪ್ಪಿರ್ದಳವರೀರ್ವರು ಮಹಾಭಕ್ತಿ
ಚರಿತರೆಂದೆನಿಸಿ ಜಂಗಮದಲ್ಲಿ ಕುಲವನುಂ
ಪರಿಕಿಸದೆ ಪೂಜಿಸುತ್ತವರವರಭೀಷ್ಟಮುಮನೀವುತ್ತಲಿರುತಿರ್ದರು ೪೪

ಇಂತಿರಲವರ ಮನೆಯ ದಾಸಿ ಶಿರಿಗಿಯೆನಿಪ್ಪ
ಕಾಂತೆಯ ಕುಮಾರನವ ಮಲ್ಲನೆಂಬುವನು ದೇ
ಶಾಂತರಂ ಪೋಗಿ ಮಾಹೇಶ್ವರರ ಸೇವೆಯಿಂ ಚರವೇಷಮುಮನಾನುತೆ
ಚಿಂತಿಸದೆ ಸಂಚರಿಸುತವರೊಡನೆ ಸುಖದಿಂದ
ನಂತ ಕಾಲದೊಳಿರ್ದು ಚರಸಹಿತ ತತ್ಪುರಕೆ
ಸಂತಸದಿಯ್ಯೆತರಲ್ಕಲಿಕಂಬನಾದರದೊಳವನನರ್ಚಿಸುತಿರಲ್ಕೆ ೪೫

---

೧ ಪ (ಹ) ೨ ಲವನೊ (ಹ)

ಆ ರಾಜನರಸಿಯೆಮ್ಮೆಯ ದಾಸಿ ಶಿರಿಗಿಯ ಕು
ಮಾರನಿವ ಮಲ್ಲನೆನೆ ಭೂಪನತಿಕೋಪದಿಂ
ನಾರಿಯಂ ಖಡ್ಗದಿಂ ಪೊಯ್ವನಿತರೊಳ್ನಾನು ನಿಜರೂಪಮಂ ತೋರುತೆ
ಚಾರು ಪುಷ್ಪಕದೊಳಾ ಮುವ್ವರಂ ಕೊಂಡೊಯ್ದು
ಮೇರುಮಂದಿರದಿ ತತ್ಕಾರಣಂಗೆ ಗಣಪದವ
ರಾರಾಜಿಪಂತಿತ್ತೆನದರಿಂದೆ ಕಲಿಕಂಬರಾಯನಂ ಪೊಗಳು ಕಂಡ್ಯಾ ೪೬

ನೆರೆ ಚಿತ್ತವಿಟ್ಟಾಲಿಸೈ ಮಗನೆ ಮತ್ತೊರೆವೆ
ಧರೆಯಲ್ಲಿ ಮೆರೆವ ತಿರುವಣ್ಣೂರೊಳುದ್ಭವಿಸಿ
ಪರಿಶೋಭಿಸುತ್ತಿರ್ದನಃಪೂತಿಯೆಂಬವಂ ಭಕ್ತರುರು ಸಂಗದಿಂದೆ
ಪರಮ ಸದ್ಭಕ್ತಿಯೊಳವರಿಸಿಯೆನಗಧಿಕಾರಿ
ಗುರುವಾರೆನುತ್ತರಿದು ಮನದಲ್ಲಿ ನಿಶ್ಚೈಸಿ
ವರ ಮಹಾತ್ಮ್ಯಾತಿಶಯದಿಂದಿಪ್ಪ ವಾಗೀಶರೆನ್ನ ಗುರುವೆಂದಿರ್ದನು ೪೭

ಸತಿ ಸುತಗೃಹಂ ವಿತ್ತವೆಲ್ಲಕಧಿಕರ್ಗುರುಗ
ಳಿತರವೇನುಂಟವರಿಗಿನ್ನೆನುತ್ತಂ ತಿಳಿದು
ಚತುರವಹ ಲಿಂಗಾಲಯಂಗಳಂ ಕೆರೆಕೂಪವನವನ್ನ ಛತ್ರಂಗಳಂ
ಮಿತರಹಿತವೆನೆ ರಚಿಸುತೀಧರ್ಮ ವಾಗೀಶ
ಪತಿಯರದೆನುತ್ತವರನುಂ ಹೊಗಳಿಸುತ್ತಿರಲು
ಕ್ಷಿತಿಯಲ್ಲಿ ನುತಿವೆತ್ತ ವಾಗೀಶರೀವಾರ್ತೆಯಂ ಕೇಳುತೈತಂದರು ೪೮

ಬರಲವರನಿದಿರ್ಗೊಳುತ್ತತಿಮುದದೊಳಃಪೂತಿ
ಹರಹರ ಮಹಾದೇವಯೆನುತ ಕೈಮುಗಿವುತ್ತ
ಚರಣದೊಳ್ಬಿದ್ದು ಪೊರಳುತ್ತ ಪೊಗಳುತ್ತ ಕುಣಿಕುಣಿದಾಡುತುಬ್ಬೇರುತ
ಪರಮ ಪರಿತೋಷದಿಂದವರ್ಗಳಂ ತನ್ನ ಮಂ
ದಿರಕೆ ಬಿಜಯಂಗೈಸಿ ಪೂಜಿಸುತ್ತವರಿಂದೆ
ವರದೀಕ್ಷೆಯಂ ಪಡೆದು ಗುರುಸೇವೆಯಲ್ಲಿ ಸನ್ನಿಹಿತನಾಗಿರುತಿರ್ದನು ೪೯

೧ ಹ (ಹ)

ಗಾನದೊಳು ವಾಗೀಶನಿಂದಧಿಕನೆನಿಸುತ್ತ
ಭೂನುತ ಚರಿತ್ರನೆಂದೆನಿಸಿ ತಿರುಪಾತಮಂ
ತಾನಾಡುತಲ್ಲಲ್ಲಿ ಲಿಂಗಂಗಳಂ ನೋಡುತಾ ಗುರುವಿನೊಡನಿರ್ದನು
ನಾನತ್ತ ಕೈಲಾಸ ಸಭೆಯೊಳಿರೆ ತುಂಬುರರ್
ಜಾಣನಹ ನಾರದಂ ಮೊದಲಾದವರ್ಪಾಡೆ
ಮೇನಕಾತ್ಮಜೆಯುಂ ತಲೆದೂಗಲಿವರಿಂದಧಿಕನುಂಟೊರ್ವನಿಳೆಯೊಳೆನಲು ೫೦

ದೇವ ನೀನಾತನಂ ಕರಿಸಿ ಕೇಳಿಸುವುದೆನ
ಲಾವು ನಂದೀಶಂಗೆ ಬೆಸಸಲಾತಂ ಪೋಗಿ
ದೇವ ದೇವಂ ನಿನ್ನನೀಗ[1] ಬರಹೇಳ್ದನೆನೆ ಗುರುವಾಜ್ಞೆಯಿಲ್ಲದಾನು
ಆವ ಠಾವಿಂಗೈದುವವನಲ್ಲವೆಂದೆನಲು
ಈ ವಾರ್ತೆಯಂ ನಂದಿ ವಾಗೀಶಗುಸುರಲ್ಕೆ
ಕೇವಲಾನಂದದಿಂ ಪೋಗೆಂಬ ಗುರುವಿನಾಜ್ಞೆಯನೈದೆ ಶಿರದೊಳಾಂತು ೫೧

ನಂದಿಯೊಡ[2]ನಕ್ಷಣಂದಾತ ಬಂದೆನಗೆ ವಂದಿಸಲು
ಚಂದದಿಂ ಗಾನಮಂ ಗೈಯೆನಲ್ಕಂತಾಗ
ಲೆಂದಾತ ಪಾಡಿದನದೇನೆಂಬೆ ಸಭೆಯೆಲ್ಲ ಗಿರಿಜೆ ಸಹವಾನಂದಿಸೆ
[3]ಚಂ[4]ದಿರಂ ಚಲಿಸುವಂತಾನು ಶಿರವಲ್ಲಾಡಿ
ಕುಂದದಂತಾತಂಗೆ ಗಣಪದವನಿತ್ತೆನದ
ರಿಂದಲ[5]ಪೂತಿಯಂ ಮನವೊಸೆದು ಪೊಗಳ್ಕೆ ವಸುಂಧರಾಧಿಪ ಸೌಂದರಾ ೫೨

ಮುದದೋಳಾಲಿಸು ನಂಬಿ ಶ್ವೇತವಾಹಿನಿಯೆಂಬ
ನದಿಯ ತೀರದೊಳು ವೇದಸ್ಕಂದವೆಂಬ ಪುರ
ವಧಿಕವೆನಿಸಿರಲದರೊಳಿರ್ದು ಕಡವಲನಂಬಿಯೆಂಬ ಭಕ್ತಾಧಿಕ್ಯನು
ಎದುರಿಲ್ಲದಿ[5]ಹ ಭಾಗ್ಯಸಂಪನ್ನನೆಂದೆನಿಸಿ
ಮಧುರವಾಕ್ಯಗಳಿಂದೆ ಬಹುಮಾನಿ ತಾನೆನಿಸಿ
ಸದಮಳವೆನಿಪ್ಪ ಲಿಂಗಕ್ಕೆ ದೀಪಾರಾಧನೆಯ ನೇಮವಿಡಿದಿರ್ದನು ೫೩

೧ ಯ (ಹ) ೨ ನ (ಹ) ೩ ನೆಂ (ಹ) ೪ ಥಂ (ಹ) ೫ ಹೆ (ಹ)

ಹಗಲಿರುಳು ಸಾವಿರ ಸುದೀಪಂಗಳಂ ಮುಡಿಸು
ತಗಣಿತ ದಿನದೊಳರ್ಚಿಸುತ್ತಿಂತಿರಲ್ಕವನ
ಬಗೆಯನರಿವೆನೆನುತ್ತ ನಾನವಗೆ ಬಡತನವನೊದವಿಸಲ್ಕಾ ಭಕ್ತನು
ನಗರಮಂ ಬಿಟ್ಟು ಪೊನ್ನಂಬಲದ ಲಿಂಗಕ್ಕೆ
ಮಿಗೆ ನೇಮಮಂ ನಡೆಸುತಲ್ಲಿ ಹುಲ್ಲಂ ಮಾರಿ
ಸೊಗಸಿನಿಂದರ್ಚಿಸುತಿರಲೊಕ್ಕೊಂದು ದಿನವಾರು ತೃಣವನುಂ ಕೊಳ್ಳದಿರಲು ೫೪

ಆಗಲದಕೇನೆನುತ್ತಾ ಹುಲ್ಲನುರಿಮಾಡಿ
ರಾಗದಿಂದೀ ಹುಲ್ಲಿನಿಂದಿರುಳಗಳೆವೆನೆನು
ತಾಗ ಸಂತಸದೊಳಿರಲಾ ಮಧ್ಯರಾತ್ರಿಯೊಳು ತೃಣವಿಲ್ಲದಂತಾಗಲು
ಈಗಳೇಂಗೈವೆನೆನುತಂ ತನ್ನ ಜಡೆದಲೆಗೆ
ವೇಗದಿಂದುರಿಯ ಪತ್ತಿಸಿ ಬಲವರುತ್ತಿರಲು
ತಾಗಿರ್ದುದಾ ಬೆಳಗು ರಜತಗಿರಿಪರ್ಯಂತ ಪೇಳಲೇನದ್ಭುತವನು ೫೫

ಶಿರದೊಳಿಹ ರಕ್ತಮಾಂಸಂ ಚರ್ಮವೆಲುಸಹಿತ
ಜುರುಜುರಿಪ ಶಬ್ದದಿಂ ಛಿಟಿಛಿಟಿಲೆನುತ್ತಿರಲು
ಹರಣದಾಸೆಯನಳಿದ ಭಾವಮಂ ಕಂಡು ನಾನಲ್ಲಿ ನಿಜರೂಪತೋರಿ
ಪರಮ ಸಂತಸದಿಂದಲಾತನಂ ತೆಗೆದಪ್ಪಿ
ವರರಜತಗಿರಿಗೆ ಕೊಂಡೊಯ್ದು ಗಣಪದವಿಯಂ
ಭರದಿಂದಲಿತ್ತೆನದರಿಂದೆ ಕಡವಲನಂಬಿಯಡಿಗಳಂ ಪೊಗಳು ನಂಬಿ ೫೬

ಕೇಳವನಿಪತಿಗಳ ಶಿರೋರನ್ನ ನಂಬಣ್ಣ
ಚೋಳಮಂಡಲದೊಳಿರುತಿಹ ಪತ್ತನಂಗಳೊಳು
ಮೇಲೆನಿಸಿರುತ್ತಿಹುದು ಕಾಂಚೀನಗರವಾ ಪುರಕ್ಕಧಿಪನೆಂದೆನಿಸುತೆ
ಲೀಲೆಯಿಂ ಶೀಲಶೈವಾಚಾರ್ಯ ತಾನೆನಿಸಿ
ಆ ಲಲಿತ ಚೋಳಾದಿ ಭೂಪರ್ಗಧಿಕನೆನಿಸಿ
ಬಾಳುತ್ತಲಿರ್ದ ಕಲಿಗಣನಾಥನೆಂಬ ರಾಜಂ ಮಹಾ ವಿಭವದಿಂದೆ ೫೭

ಸಕಳ ದೈವಂಗಳೊಳು ನಿಖಿಳ ಕಾವ್ಯಂಗಳೊಳು
ಪ್ರಕಟವಾಗಿರ್ದಖಿಳ ಲೋಕಂಗಳೊಳು ಶೈವ
ಮುಖ ಷಣ್ಮತಂಗಳೊಳು ವಿಳಸದಾಮ್ನಾಯಾಗಮಂಗಳೊಳು ಶಿವನಲ್ಲದೆ
ಅಕಳಂಕವಾದ ದೈವಂಗಳಿಲ್ಲೆಂದು ನಿಜ
ಭಕುತಿಯಿಂ ನಿಶ್ಚೈಸಿ ಸರ್ವರುಂ ಲಿಂಗದೇ
ಒಕ್ಕರಪ್ಪ ತೆರದಿ ಸಾಧಿಸುವ ಬೋಧಿಸುವ ಬಾಧಿಸುವ[೧]ನೊಬ್ಬಿಲ್ಲದ ಜನರ್ಗೆ ೫೮

ಲಿಂಗಮಯವಾಯ್ತು ಕುಲವೆಲ್ಲಮುಂ ಸತ್ಪುರುಷ
ಸಂಗಮಯವಾಯ್ತು ಜಗವೆಲ್ಲಮುಂ ಭಕ್ತಿಪ್ರ
ಸಂಗಮಯವಾಯ್ತು ನುಡಿಯೆಲ್ಲಮುಂ ಮ[೨]ಮರೂಪ್ರದಿಂದೆಸೆವ ಚರವರ್ಯರ
ಸಂ[೩]ಘಮಯ[೪]ವಾಯ್ತು ಧರೆಯೆಲ್ಲಮುಂ ವಿತರಣೋ
ತ್ತುಂಗಮಯವಾಯ್ತು ಸಿರಿಯೆಲ್ಲಮುಂ ಕಲಿತ ನಿ
ರ್ಭಂಗಮಯವಾಯ್ತು ನಡೆಯೆಲ್ಲಮುಂ ಕಲಿಗಣಾಧಿಪನಾಳ್ವ ಸದ್ವಿಷಯದೊಳ್ ೫೯

ಇಂತಿರಲ್ಕಾತನ ನಿಜವನರಿವೆನೆಂದಾನು
ಪಂಥದಿಂ ಲಿಂಗವಿರಹಿತ ಶೂದ್ರವೇಷಮುಮ
ನಾಂತು ಪೊರಗಾಲುಂ ಕೆದರು ಮೀಸೆ ಬರತೆದೆಯುಂ ನೆರೆವಾಯಿ ಪಳಕುಗಡ್ಡ[೫]
ಮುಂತೊಂದು ನಿಡುಗೋಲು ಹೆಗಲಗಂಬಳಿಯಿಂದೆ
ಎಂತೆಂತದೇನೇನು ಸುಂಕ ಕಡ್ಡಾಯಂಗ
ಳಿಂತಲ್ಲದೂರಲ್ಲಿ ಬಿಟ್ಟಿಜು ಬಿಡಾರದಿಂ ಪಾಳಾದುದೆನ್ನ ಮನೆಯುಂ ೬೦

ಆರಿಗುಸುರುವೆನರಸನೆಲ್ಲಿರ್ಪನೋಯೆಂದು
ಚೀರುತ್ತಲೂರಲ್ಲಿ ತಿರುಗುತಿರಲಾವಾರ್ತೆ
ಯಾರಾಯಗರುಹಲ್ಕೆ ಚಾರರಂ ಕಳುಹಿ ಕರೆಸಿದನೆನ್ನನಾಕ್ಷಣದೊಳು
ಈ ರೂಪಮಂ ಕಾಣುತುರುಕೋಪದಿಂದಾತ
ಊರಾವುದೈ ನಿನ್ನ ಪೆಸರೇನೆನಲ್ಕಲ್ಲಿ
ದೂರಿಪ್ಪುದಾದಿಪುರದೇವಗೊಂ[೬]ಡನೆನುತ್ತ ಕರೆವರೆನ್ನನು ಕೇಳಿದ್ಯಾ ೬೧

---

೧ ಣ್ಮಾ (ಹ) ೨ ನ (ಹ) ೩ ಗ (ಹ) ೪ ವಾ (ಹ) ೫ ಕಚ್ಚಡಾ (ಹ)
೬ ದ (ಹ)

ಎನೆ ರಾಯನೀಕ್ಷಿಸುತ್ತೆಲವೆಲವೊ ಲಿಂಗಮಂ
ತನುವಿನೊಳು ಧರಿಸೆನಲು ನಾಕೆಟ್ಟೆ ಕೆಟ್ಟೆನೈ
ಎನಗೀ ನುಡಿಯ ನುಡಿಯಬೇಡ ನಮ್ಮವನೊಬ್ಬ ಕೊಬ್ಬಿ ಲಿಂಗವ ಧರಿಸಲು
ಮಳೆಯೆಲ್ಲ ಹಾಳಾಯ್ತು ತಿರುಕತನ ಪಿರಿದಾಯ್ತು
ನಿನಗುಸುರ್ವೆ ಸುಳ್ಳಲ್ಲ ಮಳೆಯಾಣೆ ಬೆಳೆಯಾಣೆ
ಮಣೆಯು ನೇಗಿಲೆಯಾಣೆ ಹುಲ್ಲುಗೊಬ್ಬರದಾಣೆ ಲಿಂಗವೆನಗೊಪ್ಪಬಹುದೆ ೬೨

ನಮ್ಮ ಮನೆದೈವ ಕೇಳಾ ಬೀರ ಮೈಲಾರ
ಸಮ್ಮತವು ಮತ್ತೆನಗೆ ಮಾರಿಮಸಣಿ ಪ್ರಕರ
ನಿಮ್ಮ ಲಿಂಗವು ಸಲ್ಲದೆಮಗೆನಲ್ಕಾರಾಯನುರಿದೆದ್ದು ಪಲ್ಮೊರೆವುತಾ
ಅಮ್ಮಮ್ಮ ನಿನ್ನ ನಾಂ ಬಿಡುವೆನೇಯೆನುತಸಿಯು
ಚಿಮ್ಮುತ್ತಲೈತರೆ ಪಲಾಯನಂ ಗೈದೆನಾಂ
ಗಮ್ಮನಾ ಭೂಪ ಬೆಂಬತ್ತಿದನದೇನೆಂಬೆ ಕೇಳಯ್ಯ೧ ಸೌಂದರೇಂದ್ರಾ ೬೩

ಓಡಿಓಡಿಯಲೋಡುತಿರುತಿರ್ದೆ ನಾಂ ಬೆಂಬಳಿಯೊ
ಳೆಡೆವಿಡದಲೈತರುತಿರ್ದನೀ ತೆರದಿಂದೆ
ಗಡಬಡಿಸುತೈದೆ ಕೈಲಾಸ ಸಭೆಯಂ ಪೊಕ್ಕು ನಿಜರೂಪಮಂ ತೋರಲು
ಬಿಡು ಬಿಡೀ ರೂಪವಾರಿಗೆ ತೋರ್ಪೆ ನಾನೊಲ್ಲೆ
ದೃಢದಿಂದೆ ಲಿಂಗಮಂ ಧರಿಸೆನಲ್ಕೆಲೆ ಮಗನೆ
ಬಿಡುಗಡೆಯುದೇನುಂಟುಯೆನ್ನೊಳುಂ ಲಿಂಗದೊಳು ಲಿಂಗವದು ನಾನಲ್ಲವೇ ೬೪

ಎನಗೆ ಲಿಂಗವನೀವರಾರೆನಲ್ಕಾನೀವೆ
ಜಿನಗು ವೇಷವನೆನಗೆ ತೋರಿದೇಕಾ ತನುಗೆ
ಘನ ಲಿಂಗಮಂ ಧರಿಪುದೇ ಸಹಜವೆನ್ನಯ ಶಪಥವಿಂತು ಬಿಡೆನೆಂದೆನೆ
ಅನುಪಮದ ನಿಷ್ಠೆಗಾಂ ಮಚ್ಚುತ್ತಲವನಿಂದೆ
ಮಿನುಪ ಲಿಂಗಂ ಬಡೆದು ಸುಖಿಸಲವನೆರಗಲ್ಕೆ
ಮನವೊಸೆದು ಗಣಪದವನಿತ್ತೆನದರಿಂದೆ ಕಲಿಗಣನಾಥನಂ ಪೊಗಳೆಲೈ ೬೫

ಅಂತು ಸಂಧಿ ೧೯ ಕ್ಕಂ ಪದಗಳು ೯೯೦ ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

---

೧ X (ಹ)

## ಸಂಧಿ : ೨೦

**ಸೂಚನೆ :**

ವರಪಗಲ್ತೊಣೆಯಾಂಡಿ ಚಿರುಪುಲಿಯ ತಿರುಮೂಲ
ಪರಮ ಭಕ್ತಾಧಿಕ ಕುಲಶ್ಚಿರ್ಯ ನಮಿನಂದಿ
ತಿರುನೀಲನಕ್ಕರು ನಮಿತ್ತಾಂಡಿಯರ ಚರಿತೆಯಂ ಕೇಳ್ದನಾ ಸೌಂದರಂ

ಒರೆವೆನಾಲಿಸು ನಂಬಿ ತಿರುವಂಜಲೂರೆಂಬ
ಪುರದೊಳಿರ್ದನು ಪಗಲ್ತೊಣೆಯಾಂಡಿಯೆಂಬ ಸ
ಚ್ಚರಿತ ಭಕ್ತಂ ನಿಚ್ಚವಾ ಪುರದ ಲಿಂಗಕ್ಕೆ ಪೊಸಚಲುವ ಜಲವ ತಂದು
ಸರಸದಿಂ ಮಜ್ಜನಕ್ಕೆರೆದು ಪೂಜಿಸುತಿರ್ಪ
ವರ ನೇಮಮಂ ಪಿಡಿದು ನಡೆಸಲೀ ತೆರದಿಂದೆ
ಕೊರತೆಯನಿಸದೆ ಕೆಲವು ದಿನ ನಡೆಯೆ ಬೇಸಗೆಯೊಳುಷ್ಣಪ್ರಬಲಮಾಗಲು ೧

ಚಲಿಮೆಯೊಳು ಜಲವರತು ಪೋಗಲಾ ಶರಣ ವ್ಯಾ
ಕುಲದಿಂದೆ ನಿಜವಿತ್ತವೆಲ್ಲಮುಂ ಸಲಿಸಲ್ಕೆ
ಬೆಲೆಗೈದರುಂ ಜಲವ ಕಾಣದಿರೆ ಕೆಲವುವುಂಪವಾಸಂವಿರುತಾ ಭಕ್ತನು
ಎಲೆದೇವ ಮಜ್ಜನದ ಜೀವನಂ ಮಮದಿವ್ಯ
ಲಲಿತವಹ ಜೀವನಂ ಕೋಯೆನಲ್ಕಾನೊಲಿದು
ಚಲುವೆನಿಪ ಗಣಪದವನಿತ್ತೆನದರಿಂ ಪಗಲ್ತೊಣೆಯಾಂಡಿಯಂ ಪೊಗಳಲೈ ೨

ನಲಿದಾಲಿಸೈ ನಂಬಿ ಚೋಳದೇಶದೊಳು ಚಿರು
ಪುಲಿಯಾಂಡಿಯೆಂಬ ಚರವರ್ಯ ತನ್ನಿಚ್ಛೆಯಿಂ
ಕೆಲವು ಗ್ರಾಮಂಗಳೊಳು ಸಂಚರಿಸುತಿರಲು ತದ್ದೇಶದೊಳಿರುವ ಭಕ್ತರು
ಎಲೆದೇವ ವಿವಹ ಮಾಡಿದಡೆ ನಿಮ್ಮ ವ್ರತನಿಷ್ಠೆ
ಚಲುವಾಗಿ ನಡೆವುದೆಂದವರು ಬಿನ್ನೈಸಲ್ಕೆ
ಲಲನೆಯರ ತೊಡಕೇಕೆ ಒಲ್ಲೆನೆನುತಾತನಿರಲನಿತರೊಳು ನಾನಲ್ಲಿಯು ೩

ಚರರೂಪದಿಂ ಪೋಗಿ ಮದುವೆಯಾಗೆಂದು ತ
ತ್ಸರಣಂಗೆ ಪೇಳಿ ಪಾವನ ನಾಚಿಯೆಂದೆಂಬ
ತರುಣಿಯಂ ವಿವಹಮಂಗೈದು ನಿನ್ನಿಷ್ಟವಿನ್ನೇನುಂಟು ಪೇಳೆಂದೆನೆ
ವರ ಸಂಪಗೆಯ ಪೂಗಳಿಂ ದಿಷ್ಟಲಿಂಗಕ್ಕೆ
ನೆರೆ ಪೂಜಿಸುತ್ತ ಸಾಸಿರ ಚರಾರಾಧನೆಯ
ಹರುಷದಿಂ ನಿಚ್ಚವುಂ ಗೈವುದೆನ್ನಿಷ್ಟವೆನಲಂತಾಗಲೆನಲು ನಾನು ೪

ಈ ತೆರದಿ ನಿತ್ಯ ಸಾಸಿರ ಚರಾರ್ಚನೆಗೈವು
ತೋತು ಸಂಪಗೆಯಿಂದೆ ಲಿಂಗಮಂ ಪೂಜಿಸು
ತ್ತಾತನಿರುತಿರಲೊಂದು ದಿವಸ ಚರರೊದಗದಿರಲಾತನುಪವಾಸವಿರಲು
ಪ್ರೀತಿಯಿಂ ಚರವೇಷದಿಂದೆ ನಾನೈತಂದು
ಏತಕುಣಲೊಲ್ಲೆ ಚರನೊರ್ವನಿಂ ತೃಪ್ತಿವಡು
ಈ ತನುವ ಬಳಲಿಸದಿರೆಂದಾನು ನುಡಿಯೆ ಮತ್ತಾಶರಣನಿಂತೆಂದನು ೫

---

೧ ಳಿದಿರು (ಹ) ೨ ಡಿದೆ (ಹ)

ಶರಿರ ಸುಖದಾಸೆಯೆನಗಿಲ್ಲ ಕೇಳಯ್ಯ ಸಾ
ಸಿರ ಜಂಗಮಂ ತೃಪ್ತಿಬಡುವಾಸೆಯೆನಗುಂಟು
ಕೊರತೆಯಿದರೊಳಗಾಗಲೆನ್ನ ಪರಣಂ ಗಳಿವೆನೆನಲವನ ನೇಮಕೊಲಿದು
ಭರದಿಂದೆ ಸಾಸಿರ ಚರಸ್ವರೂಪಂ ಧರಿಸಿ
ಶರಣನಾರಾಧನೆಯ ಕೈಕೊಂಡು ನಿಜರೂಪ
ವಿರದೆ ತೋರುತ್ತವಗೆ ಗಣಪದವನಿತ್ತೆನಾ ಚಿರುಪುಲಿಯರಂ ಪೊಗಳಿಲ್ಯೆ ೬

ಒರೆವೆನಾಲಿಸು ನಂಬಿ ತಿರುವೂರೆನಿಪ್ಪ ಪುರ
ವಿರಲಲ್ಲಿ ತಿರುಮೂಲನೆಂಬ ಸದ್ಭಕ್ತನತಿ
ಹರುಷದಿಂದಿರುತಿರ್ದನಾತನಾ ಪುರದೊಳಿರುತಿಹ ದಿವ್ಯ ಶಿವಲಿಂಗಕೆ
ಪರಮ ದುಗ್ಧಾಭೀಷೇಕಂಗೈವ ನೇಮವಿಡಿ
ದಿರುತಿರ್ದನದರಿಂದೆ ನೂರಾರು ಗೋವ್ಗಳಂ
ಪರಿಪಾಲಸಂ ಗೈವುತಂ ತನ್ನ ವ್ರತಕಿನಿತು ಕೊರತೆಯೆನಿಸದಲಿರುತಿರೆ ೭

ಕೆಲವು ದಿನವಿರ್ದವನ ಗೋವ್ಗಳೆಲ್ಲಳಿಯಲ್ಕೆ
ಲಲಿತವಹ ಲಿಂಗಾಭಿಷೇಕವಿಲ್ಲದೊಲಾಗೆ
ನಿಳಯದೊಳಗಾ ಭಕ್ತನಿಪ್ಪತ್ತು ದಿವಸವುಪವಾಸವಿರ್ದೊಂದು ದಿವಸ
ಎಲೆ ದೇವಯೆನಗೇತಕೀಗ ಕರುಣಿಸಲೊಲ್ಲೆ
೧ಚಲವೆನ್ನೊಳೇತಕ್ಕೆ ಫಲವಾವುದಿದರಲ್ಲಿ
ನಲಿದೆನಗೆ ಕಾಮಧೇನುವನಿತ್ತಡಭಿಷೇಕವಹುದೆಂದು ಪ್ರಾರ್ಥಿಸುತಿರೆ ೮

ಅವನ ನುಡಿಗಾಂ ಮೌನವೆರಸಿರಲು ಗಿರಿಜಾತೆ
ತವೆ ಮುದವನಾನುತ್ತಲೆಲೆ ಶಂಭು ತಿರುಮೂಲ
ಕುವರನಂದದೊಳಾಲ್ಪರಿವ ಪಾಲಿಗಾಗಿ ಕೇಳ್ನಿನ್ನರ್ಚನೆಯದಲ್ಲದೆ
ಲವಲೇಶ ಮಾತ್ರ ಬಾಯಂ ಮಿಡುಕದಿರ್ದಪಿರಿ
ಜವದಿಂದೆ ಪೇಳೆನಲು ನೀಂ ಸುರಭಿಯಾಗುತ್ತ
ಲವನ ನೇಮವನೈದೆ ನಡೆಸುವುದೆನಲ್ಗಿರಿಜೆ ತನ್ನಂಶದುರು ಸುರಭಿಯಂ ೯

---

೧ ಛ (ಹ)

ತಿರುಮೂಲನೆಡೆಗದಂ ಕಳುಹಿಸಲ್ಕಾತನತಿ
ಪರುಷಮಂ ತಾಳುತಿಪ್ಪಶ್ಕೊಂದು ದಿನದ ವ್ರತ
ವಿರದೆ ನಡೆಸುತ್ತ ಕೆಲವಬ್ದವಿಂತಿರ್ದೊಂದು ದಿನವದರ ಬಾಲವಿಡಿದು
ಸರಸದಿಂ ಮೇವಾಡಿಸಲ್ಪೋಪ ತೆರದಿ ಮ
ಪ್ಪುರಕಾತನೈತಂದು ಎನಗೆ ವಂದಿಸಿ ನಿಲಲು
ಭರದಿಂದೆ ಗಣಪದವನಿತ್ತೆನದರಿಂದೆ ತಿರುಮೂಲನಡಿಯಂ ಪೊಗಳೆಲೈ ೧೦

ಮುದದೊಳಾಲಿಸು ನಂಬಿ ಪಾಂಡ್ಯ ಮಂಡಲದಲ್ಲಿ
ಮಧುರೆಯೆಂಬುವ ಪುರವಿರಲ್ಕಲ್ಲಿ ಭಕ್ತಿ ಭಾ
ವದೊಳಿರುತ್ತಿರ್ದಂ ಕುಲಶ್ಚಿಯರ್ನೆಂಬ ಶರಣಂ ಚೊಕ್ಕನಾಥನೆಂಬ
ಸಡಮುಳವೆನಿಪ್ಪ ಲಿಂಗವನರ್ಚಿಸುತ್ತ ತಾಂ
ಪದುಳದಿಂದಿರೆ ಶಿವಪ್ರೀಯನಾಚಿಯೆನಿಪ್ಪ
ಸುದತಿ ತಲ್ಲಿಂಗಾರ್ಚಾನಕ್ಕೈತರಲ್ಕಾಕೆಯಂ ಶರಣನೀಕ್ಷಿಸುತ್ತೆ ೧೧

ಕಂಗಳಂ ಮುಚ್ಚಿಕೊಳಲಾ ಲಿಂಗದರ್ಶನಕೆ
ಹಿಂಗದೈತಂದ ರಾಜಂ ಕಾಣುತೇಕೆನಲು
ಲಿಂಗದಿಷ್ಟಮದಾದುದೀ ಶಿವಪ್ರೀಯಳನೆಮಗೆ ವಿವಹಮಂ ಗೈಯೆನೆ
ಮಂಗಲೋತ್ಸವವನಾ ಭೂಪನೆಸಗಲ್ಕಿರುಳೊ
ಳಂಗನೆಯುಳೇಕಾಂತಕೈತರಲ್ಕಾ ಶರಣ
ಲಿಂಗಮಂ ಸಜ್ಜೆಯಿಂ ತೆಗೆದು ಮಂಚದೊಳಿರಿಸಿ ಕೈಮುಗಿವುತಿಂತೆಂದನು ೧೨

ಎಲೆದೇವ ನೀಂ ಬಯಸಿದಂಗನೆಯನಿರ್ದಪಳು
ಸಲೆ ಸೊಗಸಿನಿಂ ಸುಖಿಸು ನಾಂಚದಿರೆನುತ್ತಾತ
ನಿಳಯದ ಕವಾಟಮಂ ಬಂಧಿಸುತ್ತಂ ಪೊರಗೆ ಕಾಯ್ದಿರಲ್ಕಾಲಿಂಗವು
ಚೆಲುವ ಪುರುಷಾಕೃತಿಯನಾಂತು ತತ್ಸಖಿಯಲ್ಲಿ
ಒಲವು ಮಿಗಿಲೆನೆ ರತಿಕಲೆಯೊಳಿರಲ್ಕನಿತರೊಳು
ಬೆಳಗಾಗಲಾ ಶರಣನಾ ಲಿಂಗಮೂರ್ತಿಯಂ ಬಾರಯ್ಯ ಎಂದು ಕರೆಯೆ ೧೩

ಪುರುಷ ರೂಪದ ಲಿಂಗವೈತರಲ್ಕಾ ಸತಿಯುಂ
ಸೆರಗಂ ಪಿಡಿದು ಎಲ್ಲಿಪೋದಪ್ಪೆ ೧ನಿಲ್ಲೆನಲು
ಶರಣನೆಲೆ ಲಿಂಗಯ್ಯ ಪೂಜಾ ಸಮಯವಾಯ್ತು ಬಹುದೆನುತ್ತಾತನೆಳೆಯೆ
ಕರೆಯದಿರುಯೆನ್ನ ಪತಿಯಂ ಬಿಡೆನೆನುವಳವಳು
ಸೆರಗ ಬಿಡುಯೆನ್ನ ಲಿಂಗವುಯೆನುತ್ತಿರುವನಿವ
ಪುರದ ಜನವೆಲ್ಲವೀ ನ್ಯಾಯಮಂ ಕೇಳುತ್ತ ಕೈಹೊಯ್ದು ನಗುತಿರ್ದುದು ೧೪

ಅಲ್ಲಿರ್ಪ೨ ತಿಲ್ಲವೇಣಾಂಧರರ ಬಳಿಗವರು
ನಿಲ್ಲದೈತಂದು ತಮ್ಮೊಳಗೆ ಬಂದಿಹ ತೊಡಕ
ನೆಲ್ಲಮಂ ವಿಸ್ತರಿಸಲವರು ಕೇಳ್ದುರುಲಿಂಗಮೂರ್ತಿಯಂ ನಿನಗಿವರೊಳು
ಎಲ್ಲಿರ್ದುದಾಸೆಯದನುಸುರೆನಲ್ಕೀರ್ವರೊಳು
ಸಲ್ಲೀಲೆಯಿಂದಿರ್ಪನಿವರ್ಗಳಂ ಬಿಡಲೊಲ್ಲೆ
ನಲ್ಲಳಿಗೆ ಪುರುಷನಹೆನಿರುಳಲ್ಲಿ ಪಗಲಲ್ಲಿ ಲಿಂಗವಹೆನೀಶರಣಗೆ ೧೫

ಈ ತೆರದೊಳಿರ್ವರ್ಗೆಯನುಕೂಲಿಸಿರ್ಪನೆನೆ
ಲಾತನುಂ ನಾರಿಯುಂ ಸಂತಸಂದಾಳ್ದರಾ
ಖ್ಯಾತರಹ ವೇಣಾಂಧರರ್ಗ್ಮದಂ ಬೆತ್ತರಿದ೩ರೊ೩ಲ್ಕೆಲವು ದಿನವಿರುತ್ತೆ
ಪೂತಾಂಗನಹ ಕುಲಶ್ಚರ್ಯನಾ ಮೇರುವಿಗೆ
ಪ್ರೀತಿಯಿಂ ಬಂದೆನಗೆರಗಲಾನು ಶರಣಂಗೆ
ನೂತನದ ಗಣಪದವನಿತ್ತೆನದರಿಂದೆ ಮತ್ತಾತನಂ ಪೊಗಳು ನಂಬಿ ೧೬

ಪ್ರೇಮದಿಂದಾಲಿಸೈ ನಂಬಿ ಮತ್ತಾನೊರೆವೆ
ಹೇಮಲಾಭವೆನಿಪ್ಪ ಪುರವಿರುತ್ತಿರಲಲ್ಲಿ
ರಾಮಣೀಯಕ ಭಕ್ತನಿಕರದೊಳಗಧಿಕನೆಂದೆನಿಸಿ ನಮಿನಂದಿಯೆಂಬ
ನಾಮದಿಂದಿರುತಿರ್ದನಾತ ಲಿಂಗಕೆ ನಿತ್ಯ
ನೇಮಮಂ ಗೈದಿರ್ದನಾಜ್ಯದೀಪಂ ಸಳಹಳ
ಸಾ೫ ಮಹೋತ್ಸವದಿಂದಲರ್ಚಿಸುವೆನೊದಗದಿರಲಸುಗಳೆಳವೆನೆಂದಿರ್ದನು ೧೭

---

೧ + ನಿಲ್ಲು (ಜ) ೨ ಪ್ಪ (ಹ) ೩ ಕೊ (ಹ) ೪ ಹಾ (ಹ) ೫ ವಳಿ (ಹ)

ಆ ಪುರದೊಳನುದಿನಂ ಘೃತಯಾಚನಂಗೈದು
ದೀಪಮಂ ಸಹಸ್ರ ಸಂಖ್ಯೆಗಳಂ ಬೆಳಗೆತ್ತಿ
ಶ್ರೀಪರಮ ಲಿಂಗಮಂ ಪೂಜಿಸುತ್ತರ್ಥಿಯಿಂದಾತನಿರಲಾನಗರದ
ಪಾಪಿಗಳೆನಿಪ್ಪ ಜೈನರ್ನೆರೆದು ನಮಿನಂದಿ
ಗೀ ಪುಣ್ಯವೇಕೆ ತುಪ್ಪವನಿಕ್ಕದಿರಿಯೆಂದು
ಕೋಪದಿಂ ಕೆಡುಗ ಬಗೆವುತ್ತವನಿಗಾಜ್ಯಮುಮನೆರೆಯದಂತವರಾದರು  ೧೮

ಆ ಶರಣನಾದಿನದ ನೇಮಮಂ ತಪ್ಪಿತೆನಂ
ತಾಸುರದ ವ್ಯಸನದಿಂ ಹರಣಮಂಗಳೆವುತಿರೆ
ಭಾಸುರದ ಲಿಂಗಮುಖದಿಂದುಸುರ್ದನಾನಲ್ಲಿ ಕೊಳನುದಕವೆರೆಯಲಾಗಿ
ಸೂಸುವುವು ಕಾಂತಿಯಾ ಜ್ಯೋತಿಯಿಂದರ್ಚಿಸೆನ
ಲಾ ಸುವಾಕ್ಯಂ ಕೇಳುತಾತನಂತೆಸಗಲ್ಕೆ
ಸಾಸಿರಪ್ರಭೆಯು ಜ್ಯೋತಿಗಳೆಸೆಯಲಾತನತ್ಯಾನಂದದಿಂದರ್ಚಿಸೆ  ೧೯

ಮರುದಿವಸವೆಲ್ಲ ಸವಣರ ಪಶುಗಳಸುಗಳೆಯೆ
ನೆರೆದೆಲ್ಲರಾಳೋಚಿಸಿದರು ಶರಣಂಗಾಜ್ಯ
ವೆರೆಯದಿಹ ಪಾಪದಿಂದಿಂತಾದುದೆಂದರಿದು ಸಕಲರ್ಕೈತಂದು ನಮಿಸಿ
ಕರುಣೆಸಲೆದೇವ ಘೃತವೀವೆವೆನೆ ಪಶುಗಳತಿ
ಭರದಿಂದೆ ಜೀವಿಸಿದವಾತನಾ ಕೈಲಾಸ
ಗಿರಿಗೈತರಲ್ಗಣಪದವನಿತ್ತನದರಿಂದೆ ನಮಿನಂದಿಯುಂ ಪೊಗಳೆಲ್ಕೆ  ೨೦

ಒರೆವೆನೆಲೆ ಸೌಂದರಾಧಿಪ ಕೇಳು ಮತ್ತೊರ್ವ
ಶರಣನ ಚರಿತ್ರಮಂ ಮೂಡಣಾಸೆಯೊಳತುಳ
ಸಿರಿಯು ಸಿಂಗರದಿಂದೆ ಶೋಭಿಸುತ್ತಿರ್ದುದು ವಿಶಾಸ್ತ್ರಪುರವದರೊಳೊರ್ವ
ಸರಸ ಸದ್ಗುಣಗಣಾಲಂಕಾರನೆನಿಸಿರ್ಪ
ತಿರುನೀಲನಕ್ಕನೆಂದೆಂಬ ಗಣವರನಾತ
ನರಸಿ ಲಲನಾದೇವಿ ಸತಿಪತಿಗಳೀರ್ವರುಂ ಸುಖದೊಳಿರುತಿರ್ದರಂದು  ೨೧

---

೧ ಸಿ (ಹ)

ಅವರ ಗುರು ಸರ್ವಜ್ಞದೇವರವರಿಂ ವಿಮಲ
ಸುವಿವೇಕವಾಂತ ಶೈವೋಪದೇಶವ ಪಡೆದು
ಭುವಿಯೊಳತಿ ಭಕ್ತಿಯಿಂದಿರುತವನಿಪುರಲಿಂಗದರ್ಶನಾ ನಿಷ್ಠರಾಗಿ
ಕವಲಿಲ್ಲದೇಕಮಾನಸದಿಂದಲಿರುತೊಂದು
ದಿವಸ ತಲ್ಲಿಂಗದಂಗದೊಳು ಶಲದಿಯಂ ಕಂಡು
ಯುವತಿ ಪುಕುವೆಂದರಿಯದಭವಗೇಳುವುವು ಬೊಕ್ಕೆಗಳೆಂದು ತೂಪಿರಿದಳು ೨೨

ಫಲಫದಂಗಳನೀವನೆನ್ನಯ್ಯನೀತನೊಲ್
ಸುಲಭ ದೈವಂಗಳಿಲ್ಲೆಂದು ನಿಶ್ಚೈಸುತ್ತ
ಚಲಭಕ್ತಿಭಾವಕೆಡರಿಲ್ಲದಂತಾವೀರ್ವರರಿದಿನಿತು ದಿನವರ್ಚಿಸಿ
ಎಲೆ ಶಿವದ್ರೋಹಿ ನೀನೀಗಳೀ ಲಿಂಗದುರು
ನೆಲೆಯನರಿಯದೆ ತೂಪಿರಿದೆ ನಿನ್ನನೀಕ್ಷಣದಿ
ಕೊಲುವೆನೆನುತಾರ್ಭಟಿಸುತಾ ಸತಿಯ ಮೇಲ್ವಾಯ್ದನಾ ಶರಣನೇನೆಂಬೆನು ೨೩

ಸತಿ ಪತಿಯ ಖತಿಯಂ ನಿರೀಕ್ಷಿಸುತ್ತಿನ್ನಾವ
ಗತಿಯೆನಗೆನುತ್ತಂ ಭಯಂಗೊಳುತ ನೆರೆ ಹೊರೆಯ
ತತಿಯೊಳಗಡಂಗಿದಳ್ಮಗುಳಿತ್ತ ಶರಣನೈತಂದು ಲಿಂಗವ ನೋಡಲು
ಸತಿಯ ಗಂಡೂಷಬಿಂದು ಸ್ಪರ್ಶನಾಂಗದೊಳ
ಗತಿಶಯ ಪುಳಂಗಳಿಲ್ಲದೆ ಮಿಕ್ಕಿನಂಗದೊಳ
ಗತುಳ ಪುಳುಗಳ ಬೆಂಬಲವ ಮುತ್ತಿರಲ್ಕಾಣುತಾತನಚ್ಚರಿವಟ್ಟನು ೨೪

ಮೂಢತನದಿಂದೆನ್ನ ಸತಿಯುಳಂ ಜರಿದೆನಿ
ನ್ನಾಡಲೇನವಳಾವ ಸುಕೃತಿಯೊ ಮಹಾದೇವ
ರೂಢಿಗಾಶ್ಚರ್ಯವಿದೆನುತ್ತ ತತ್ತರುಣಿಯೆಡೆಗೈತಂದು ಕರಪದ್ಮಮಂ
ಜೋಡಿಸುತ್ತೆಲೆ ನಾರಿ ಬಾರೆಂದು ಸಂತೈಸಿ
ಮೂಡುವೆಳನಗೆಯ ಸಂತಸದಿಂದೆ ಕೂಡಿಕೊಂ
ಡಾಡುತ್ತಲೈತಂದರೀರ್ವರಾಲಿಂಗದೆಡೆಗಾಲಿಸುವುದೈ ಸೌಂದರ ೨೫

---

೧ ಯ್ತು (ಹ)

ಉಗುಳುಗಳು ನಾರಿ ಈ ಲಿಂಗದಂಗದೊಳಿರ್ದ
ಒಗುಮಿಗೆಯ ಪುಳುಗಳೆಲ್ಲಂ ಪೋಗಲೀಶಂಗೆ
ಸೊಗಸಾಗಲಿದರ ಭಾವವನರಿದೆನಲಸದಿರು ಕೇಳೆನ್ನ ನುಡಿಯನೆಂಬ
ಜಗದೆರೆಯ ಶರಣನ ಸದುಕ್ತಿಗಳನಾಲಿಸುತ
ಮೃಗನೇತ್ರೆ ಕಂಪಿಸುತ ಕಳವಳಿಸುತಿಳೆಯೊಳೀ
ಹಗರಣವಿದೇನಾದುದೆಂದೆನುತ್ತುಸುರಿಡುತ್ತಿರ್ದಳಂಬುಜದಳಾಕ್ಷೀ ೨೬

ಏನಾದಡೇನುಗುಳಲೊಲ್ಲೆನಿದರಿಂದೆನಗೆ
ಹಾನಿಯಲ್ಲವೆ ನೋವಿದಲ್ಲವೆ ೧ಶಿವಂಗೆ೧ ಮ
ತ್ತೀನುಡಿಯ ದೋಷಪರಿ೨ಹಾ೨ರಕೆನ್ನಯ ಶಿರವನೀವೆನೆನುತಾಳೋಚಿಸಿ
ಮಾನಿನಿ ಶಿರೋರನ್ನೆ ತನ್ನ ಮಸ್ತಕವನನು
ಮಾನಿಸದಲರಿದುಕೊಂಬಾಗಳಾನೊಲಿದವರಿ
ಗಾನಂದದಿಂದೆ ನಿಜರೂಪಮಂ ದೋರುತ್ತ ನಿಮ್ಮಿಷ್ಟವೇನೆಂದೆನು ೨೭

ಎಲೆ ದೇವದೇವ ನೀನೊಲಿದು ನಮ್ಮಿಷ್ಟಮಂ
ಸಲಿಸುವಡೆ ನಿನ್ನ ಸನ್ನುತವಾದ ಕಾಯಕ್ಕೆ
ಬಲಿದ ೩ಬೊ೩ಕ್ಕೆಗಳಾಗದಂತೊರಪನಿತ್ತೆಮ್ಮನಸು ಪೊರೆಯೆನು೪ತ್ತೆ೪ರಗಲು
ಫಳಿಲನಾಡಿದ ನುಡಿಗೆ ನಾಸತಿ ಮುದಂಬಡು
ತ್ತಲಘು ಗುಣಿಗಳನ್ನು ಕೈಲಾಸಕ್ಕೆ ಕೊಂಡೊಯ್ದು
ಸಲೆ ಗಣಪದವನಿತ್ತೆಸದರಿಂದ ತಿರುನೀಲನಕ್ಕರಂ ನಂಬಿ ನೆನೆಯೈ ೨೮

ಮತ್ತೊರ್ವ ಶರಣನ ಕಥಾಕೌತುಕವನೊರೆವೆ
ಚಿತ್ತವಿಟ್ಟಾಲಿಸುವುದೈ ಸೌಂದರಾಧಿಪನ
ದತ್ಯಂತ ಭಕ್ತಿಗಾಗರವೆನಿಸಿ ಮುಕ್ತ್ಯಂಗನೆಗೆ ತವರ್ಮನೆಯದೆನಿಸಿ
ಉತ್ತಮ ಜ್ಞಾನಿಗಳ ಬೀಡೆನಿಸಿ ಸುಖದ ಕಳೆ
ವೆತ್ತಿರ್ದುದಾ ಮಹಾಕಾಂಚೀನಗರವದರೊ
ಳತ್ಯಧಿಕ ಮುಗ್ಧ ಗುಣಗಳ ಶಿರೋರತ್ನ೫ನೆ೫ನಿಸಿಹನೊರ್ವ ಮದ್ಭಕ್ತನು ೨೯

---

೧ ಶಿವಲಿಂಗ (ಹ) ೨ ಹ (ಹ) ೩ ಬು (ಹ) ೪ ತೆ (ಹ) ೫ ವೆ (ಹ)

ಆತಂ ದುರಾಚರಣೆ ದುರ್ಪದ ಪ್ರಕರಕ್ಕೆ
ಭೀತಂ ಭಸಿತಭೂಷ ಚರವರ್ಯರಿಪ್ಪಾರ್ಥ
ದಾತಂ ದಯಾ ಭರಿತ ದೈನ್ಯಭಾವಪ್ರಮಹಿತಂ ಭೀರುಭವಸಂಕುಲಂ
ಈತಂ ಮಹಾ ಸುಜನ ಸಂಸ್ತುತ್ಯನನುಪಮ ಪು
ನೀತಂ ಪರಮ ಸತ್ಕುಲೋದಯಂ ಕೀರ್ತಿವಿ
ಖ್ಯಾತನೆಸೆದಂ ಸಾರ ನಾಟ್ಯನಮಿತಾಂಡಾರ್ಯನೆಂಬ ಶರಣಾಗ್ರೇಸರಂ ೩೦

ಇರುತೊಂದು ದಿವಸವೇಕಾಮ್ರನಾಥನ ಗುಡಿಗೆ
ತೆರಳಿ ತಲ್ಲಿಂಗಕಭಿನಮಿಸಿ ದೇವಾಲಯುವ
ಹರುಷದಿಂ ನೋಡುತ್ತೈತರಲೊಂದು ತಾಣದೊಳು ನಾಟ್ಯಲೀಲಾಕಾರದಿಂ
ವಿರಚಿಸಿದ ವರಶಿಲಾಮೂರ್ತಿಯಿರೆ ಕಂಡು ಸೈ
ವೆರಗಾಗಿ ಶಿವನ ಕರಚರಣೋರುಕಟಿಮುಖ್ಯ
ಶಿರಗಳಿನಿತೇಕೆ ಕೊಂಕಾಗಿರ್ಪವೆನುತಲೆವೆಯಿಕ್ಕದೀಕ್ಷಿಸುತಿರ್ದನು ೩೧

ತಿಳಿಯದೀ ಭಾವವೆನುತಾ ಮುಗ್ಧ ಭಕ್ತನು
ಮ್ಮಳಿಸುತಾ ಪೂಜಾಧಿಕಾರಿಯಂ ಕೇಳ್ದಡವ
ನಲಿದಿವಂ ಮರುಳನೆಂದರಿದು ಶಿವನಂಗಕ್ಕೆ ರೋಗವಾವರಿಸಿರ್ದುದು
ಪೊಳಲೊಳಿಹ ಭಕ್ತರಾರ್ಗೆಯು ದಯಂ ಪುಟ್ಟದಿ
ನ್ನಳಿವನೋ ಉಳಿವನೋ ಹರನೆನುತ ಹಾಸ್ಯದಿಂ
ಘಳಿಲನುಸುರಲ್ಕದಂ ಕೇಳುತುಬ್ಬಸಗೊಂಡನೇನೆಂಬೆನಾ ಶರಣನು ೩೨

ಶಿವಶಿವಾ ಶಂಭು ಸರ್ವೇಶ ಸರ್ವಜ್ಞಗೀ
ಭವಣೆಯೇಕಾಗಿರ್ದುದಕಟಕಟ ಸದ್ಭಕ್ತ
ನಿವಹವೇನಾದುದಭವನ ಮರೆದರೇಕೆಂದು ಮಲವಂಲನೆ ಮರುಗುತ್ತಲಿ
ಅವಿಕಲಾಂಗವಿದೀಗಳೀ ರೋಗದಿಂ ಕೊಂಕಿ
ದವಯುವಮಿದಾಯ್ತಾವ ಕಾರಣದಿ ಶಿವಗೆ ಸಂ
ಭವಿಸಿರ್ಪುದೀ ರೋಗವೆನುತಾತನೀಕ್ಷಿಸುತ್ತಾಲೋಚಿಸುತ್ತಿರ್ದನು ೩೩

ಊಹಿಸುವಡಭವ ಶಿರದಲ್ಲಿ ಸುರಗಂಗೆಯುಂ
ನೇಹದಿಂ ತಳೆದಿರ್ಪನೆಂಬರಾ ಶೈತ್ಯವೀ
ದೇಹವಾವರಿಸುತಿಂತಾಗಿರ್ದುದೋ ಪಣೆಯೊಳನಲವಿಹುದೆಂಬರದರ
ದಾಪದಿಂ ತನುವಿದಿಂತಾದುದೊ ನಿಶಾಚರರ
ಮೋಹರವನಿರಿಯಲೆಸಗಿದರೊ ಶೂನ್ಯತೆಯನೆನು
ತಾ ಹಲವನೆಣಿಸುತ್ತ ಮಣಿಮಣಿದು ಮುಟ್ಟಿ ಮೂರ್ತಿಯನೀಕ್ಷಿಸುತ್ತಿರ್ದನು ೩೪

ಸಲ್ಲಲಿತ ಮಲ್ಲಿಕಾಕುಸುಮ ಶಿವಸಂಗಕೆಣೆ
ಯಲ್ಲ ತಳಿರಲ್ಲ ತಾವರೆಯಲ್ಲವೆನುತ ಬುಧ
ರೆಲ್ಲರಿಂ ನುತಿಗೊಂಬ ಮೆಲ್ಲತೆತೆಯ ತನುವಿದೇಂ ಕಠಿಣಮಾಗೀರ್ದುದಯ್ಯಾ೧
ಫುಲ್ಲಶರಕೋಟಿ ರೂಪವನು ಕೀಳ್ಪಡಿಪ ವಪು
ವೆಲ್ಲ ವಕ್ರತೆಯನಾಂತಿರ್ದುದಕಟಾ ಶಿವೆಯ
ವಲ್ಲಭಂಗೇನುಗತಿಯೆನುತ ತತ್ಪೂಜಾಧಿಕಾರಿಗವನಿಂತೆಂದನು ೩೫

ಎನ್ನೊಳಿರುವರ್ಥವೆಲ್ಲವನು ಕೊಂಡೈತಂದು
ನನ್ನಿಯಿಂ ನಿನಗೀವೆನೀಶಿವನ ತನುವೀಗ
ಚೆನ್ನಾಗಿ ಶೋಭಿಸುವ ತೆರದಿ ರೋಗಕ್ಕೌಷಧವನಿತ್ತು ಮನ್ನಿಸಿದಡೆ
ಭಿನ್ನವಿಲ್ಲದಲಾವು ಸತಿಪತಿಗಳೀರ್ವರುಂ
ನಿನ್ನ ಸೇವೆಯೊಳಿರ್ಪೆವೈಯೆಂದು ತನ್ನೊಳಿಪ
ಧಾನ್ಯಾದಿ ಪೊನ್ನು ವಸ್ತ್ರಾಭರಣವೆಲ್ಲವಂ ತಂದಿತ್ತನಾ ಶರಣನು ೩೬

ಆ ಮುಗ್ಧನಿತ್ತುದಂ ಕಂಡವಂ ಬಳಿಕಟವಿ
ಕಾಮರಂಗಳ ತೈಲಮಂ ನಾಟ್ಯಮೂರ್ತಿಗು
ದ್ದಾಮದಿಂ ಪೂಸಿ ಸೋಳಿಮಾಳಕಾದಿ ಪತ್ರಗಳ ಪೊಟ್ಟಣದಿ ಕಾಸುತ್ತಲಿ
ನೇಮವಿಡಿದೀ ತೆರದೊಳೈದೆ ಪುಸಿಯುಪಚಾರ
ರಾಮಣೀಯಕವೆನಲ್ಕೆಸಗುತಿರಲೊಂದು ದಿನ
ಪ್ರೇಮಿಯಹ ತನ್ಮುಗ್ಧ ಭಕ್ತನೈತಂದು ಕಂಡಂ ನಾಟ್ಯಮೂರುತಿಯನು ೩೭

---

೧ ಲಿಂ (ಹ) ೨ ಡಿ (ಹ) ೩ ರ್ಪುದೈ (ಹ) ೪ ಮ (ಹ)

ಬಲವಾದುದೀ ರೋಗ ಪೋಗದೀಶಂಗೆನ್ನ
ತಲೆಯಂ ಸಮರ್ಪಿಸುವೆನರಿಯೆ ಬರಿದಲೆಯಲ್ಲ
ಚಲುವಪ್ಪ ಫಲವಪ್ಪ ಶಿವನ ನುತಿಯೆಂಬ ಘುಟಿಕಾ ಪಟಲದಿಂ ಶೋಭಿಪ
ಇಳೆದೇರನಡಿದಾವರೆಗಳಂ ನಿರೀಕ್ಷಿಸುವ
ಕಲಿತ ಕಮನೀಯಾಕ್ಷಿರುಚಿಯೆಂಬ ಚೂರ್ಣದಿಂ
ವಿಳಸಿತ ಸದೌಷಧದ ಕರಡಿಗೆಯಿದೆಂದಭವಗೆನ್ನ ಶಿರವೀವೆನೆಂದಂ ೩೮

ನಿಶಿತ ಚಂದ್ರಾಯುಧಕೆ ನೇಣ್ಬಂಧನಂ ಗೈವು
ತೊಸೆದು ಕರವಾಳಮಂ ತನ್ನ ಕಂಧರಕಿಟ್ಟು
ಅಸಮ ಸನ್ನಾಟ್ಯ ಮೂರುತಿಯ ವಕ್ರಾಂಗಕ್ಕೆ ತತ್ಪಾಶಮಂ ಬಂಧಿಸಿ
ಉಸುರಲಳವಲ್ಲದ ದೃಢತ್ವದಿಂದಾ ಶರಣ
ಪಶುಪತಿ ಮಹಾದೇವ ಜಯಯೆನುತ ಸೆಡೆಯಲ್ಕೆ
ಕಸವಿಸಿಗೊಳುತ್ತ ಕಂಪಿಸುತಿರ್ದೆ ನಾನವನ ಭಕ್ತಿಗೆಲೆ ಸೌಂದರೇಂದ್ರ ೩೯

ಎನಗಾಗಿ ಶಿರವನೀವಂ ಶರಣನೆನುತರಿದು
ಮನದೊಳು ದಯಂ ಪುಟ್ಟಿ ತ[೧]ನ್ನಾ[೧]ಟ್ಯ ಮೂರುತಿಯ
ಘನವಾದ ಕೊಂಕಿದವಯವವೆಲ್ಲ ನೀಳಾಗಿ ಸೊಗಸಾಗಿ ಶೋಭಿಸುತ್ತ
ಅನಿತರೊಳಗಾನು ನಿಜರೂಪಮಂ ದೋರಿ ನಿ
ನ್ನನುಪಮದ ಭಾವಕಾಂ [೨]ಮೆ[೨]ಚ್ಚಿದೆನು ಮಗನೆ
ಪೇಡನುಮಾನವಿಲ್ಲ[೩]ದ[೩]ದನೀವೆನೆನುತಾತನಂ ತಕ್ಕೈಸಿದೆನು ಸೌಂದರ ೪೦

ಇನ್ನಾವನೊರವಸೊಲ್ಲೆನು ನಿನ್ನ ತನುವಿಂಗೆ
ಗನ್ನವಹ ರೋಗವಂಟದೆ ಸುಖದೊಳಿರುತಿರ್ಪ
ಉನ್ನತೋನ್ನತದ ವರವಿತ್ತೆನ್ನ ಪೊರೆಯೆಂದು ಚರಣಕಾತಂ ನಮಿಸಲು
ಎನ್ನಯ್ಯ ಮುಗ್ಧ ಕೇಳೆನಗೆ ರೋಗಗಳುಂಟೆ
ಮುನ್ನ ನಾಂ ನಾಟ್ಯವಾಡಿರ್ದನು ತದಾಕಾರ
ದಿನ್ನಿರ್ಮಿಸಿದ ಶಿಲಾವಿಗ್ರಹವಿದೆಂದೆನಲ್ಕಾತ ಮುಗುಳಿಂತೆಂದನು ೪೧

---

೧ ನ್ನಾಂ (ಹ) ೨ ಮ (ಹ) ೩ ದು (ಹ)

ಎಂತಿರ್ದುದಯ್ಯ ತೋರೆನಗೆ ನಟನವನೀಗೆ
ಸಂತಸಂದಳೆವುತಾನೀಕ್ಷಿಸುವೆನೆನಲದ
ಕ್ಕಂತಾಗಲೆಂದು ನಾಂ ನರ್ತನಂಗೈಯಲದನೇಸೆಂಬೆನದ್ಭುತವನು
ಅಂತರಿಸದಬ್ಧಿಗಳ್ತುಳುಕಿದುವು ದೆಸೆಗಳ್ಸ
ಮಂತೊಪ್ಪುಗೆಟ್ಟವು ಧರಾತಲದ ಧೂಳಿಯುಮ
ನಂತ ಮಂಡಲವ ಮುಸುಕಿರ್ದುದು ಮದೀಯ ನಾಟ್ಯಾನಂದ ಪದರಚನೆಯಿಂ ೪೨

ಅದುರಿದುವು ಸಪ್ತ ಪಾತಾಳಂಗಳದ್ರಿಗಳ್
ಬಿದಿರಿದುವು ಭರದಿಂ ಭಯಂಗೊಳುತದ್ಭುತಕೆ
ಹೆದರಿದುವು ದಿಗ್ಗಜಂಗಳ್ಕುಸಿದವಹಿಪನ ಫಣಾಮಂಡಳಂಗಳಾಗಳ್
ಉದುರಿದುವು ತಾರಾಗಣಂಗಳ್ಮಹೀತಳಕೆ
ಬೆದರಿದುವು ತನುವಿನೊಳ್ತುಳಿದ ಸರ್ಪಾಳಿಗಳ್
ಒದರಿದುವು ಶಂಖಾದಿ ಕಹಳಾರವಂಗಳಾಂ ನರ್ತನಂ ಗೈಯಲೊಡನೆ ೪೩

ನಾಕೀ ಜನರ್ನಲಿದರಬ್ಜಭವಶಕ್ರ ಕಮ
ಲಾಕಾಂತ ಮುಖ್ಯರ್ಮುದದಂ ಚಿತ್ತ್ರಾಗಣಾ
ನೀಕಂ ಮಹೋತ್ಸವದಿ ಜಯಜಯವೆನುತ್ತಿರ್ದರೆನ್ನ ನಟನವನೀಕ್ಷಿಸಿ
ನಾಕೆನಿಸದತುಲ ಸಂತಸದೊಳೀಸಾಡುವ ಶು
ಭಾಂಕಾರರಿ ಶರಣನಂ ನಿಜಪುರಿಗೆ ಕೊಂಡೊಯ್ದು
ತೇಕೈಕ ಪದವಿತ್ತನದರಿಂದೆ ನಾಟ್ಯನಮಿತಾಂಡಾರ್ಯನಂ ನೆನೆ ಕಣಾ ೪೪

ನಿನ್ನಲ್ಲಿ ಸಂಗೀತಮಂ ಪಾಡಿ ಮಚ್ಚಿಸಿದ
ಗನ್ನವಹ ತಿರುನೀಲಕಂಠಪಾಣನುವೊರ್ವ
ನಿನ್ನೊಡನೆ ಕದನಮಂ ಗೈದ ಕಲಿಕಾಮದೇವಯ್ಯನೊರ್ವಂ ಮತ್ತೆಕೇಳ್
ನಿನ್ನ ಹಿತಕರನಾದ ಚಾರಮೇಶ್ವರನೊರ್ವ
ನಿನ್ನಲ್ಲಿ ಧ್ವಜವನೆತ್ತುವನಾ ಕುರುಂಬವ್ವೊರ್ವ
ನಿನ್ನಿಂದ ಸವನಮಂ ಪೂರೈಸಿಕೊಂಡು ಘನ ಸೋಮಾಶಿಮಾರನೊರ್ವಂ ೪೫

---

೧ ಕರಣ (ಹ) ೨ X (ಹ)

ನಿನ್ನನೋವಿರ್ದ ನರಸಿಂಗಮೊನೆಯಂವೊರ್ವ
ನಿನ್ನರಸಿಯೆನಿಸಿದ ಪರವೆ ನಾಚಿಯೊರ್ವಳುಂ
ನಿನ್ನ ಪಿತಮಾತೆಯುಹ ಜಡೆಯನ್ಯೆನಾರು ಯಸ್ಯಜ್ಞಾನಿಯರುಯೀರ್ವರು
ಎನ್ನನುಂ ನಿನ್ನನುಂ ಪೊರಗೆಂದ ಸಾಹಸದ
ಮಾನ್ಯಸಹ ಮೆರೆಮಿಂಡನೊರ್ವ ೧ನೀನೊರ್ವ೧ ಕೇ
ಇನ್ನಿವರು ಅರುವತ್ತು ಮುವ್ವರಿವರಂ ಪಾಡು ಪಾಡಯ್ಯ ಲೇಸಪ್ಪುದು ೪೩

ಅಂತು ಸಂಧಿ ೨೦ ಕ್ಕಂ ಪದಗಳು ೧೦೩೬ ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

೧ X (ಹ)

# ಸಂಧಿ : ೨೧

ಸೂಚನೆ :

ಅರುವತ್ತು ಮೂವರುಗಳಂ ಪಾಡಿ ಮೆರೆಮಿಂಡ
ರುರುತರದ ಕಾರುಣ್ಯಮಂ ಪಡೆದು ಸೌಂದರಂ
ಪರಮ ಶಿವಲೋಕಮಂ ಸಾರ್ದು ಮುನ್ನಿನ ನಾಮವಾಂತು ಸುಖದಿಂದಿರ್ದನು

ಎಂದಿಂತು ಪೇಳಿ ಸೌಂದರನಿಂದೆ ಪಾಡಿಸುತೆ
ಮುಂದೆ ನಂಬಿಯುನಕ್ಕರಿಂದ ಮೈಯಿಕ್ಕಿಸುತೆ
ಹಿಂದೆ ನಡೆತಂದನಭವಂ ದಿವ್ಯ ದೇಹದುರು ದೀಧಿತಿಯ ಮೊತ್ತದೊಳಗೆ
ಸಂದ ನಂದೀಶಾದಿ ದೇವಗಣತತಿಯೊಳಗೆ
ಬಾಂದಳದಿ ಸಂದಣಿಪ ತಳಿತ ಬೆಳುಗೊಡೆಯೊಳಗೆ
ಇಂದುಧರನೈತರಲ್ಕಾ ಬೆಳಗು ಶರಣಸಭೆಯಂ ಮುಸುಕಿತೇನೆಂಬೆನು ೧

ಕಂಡು ಮೆರೆಮಿಂಡರೆಲ್ಲಿಯ ಮಹಾ ಬೆಳಗಿದೆನೆ
ದಿಂಡೆಯನುರ್ಡಿದರಲೆ ದೇವ ನಂಬಿಯು ಕೂಡಿ
ಕೊಂಡು ಶಿವನೈತಹಂ ಮುಂದಣಾತಂ ನಂಬಿ ಹಿಂದಣಾತಂ ದೇವನು
ಮಂಡಿತ ಮಹಾಪುರಾತನರನುರೆ ಕೀರ್ತಿಸುತೆ
ಖಂಡೇಂದು ಮೌಳಿಯನುಮಾತದಿಂದೆ ಪೊಗಳುತ್ತೆ
ಮಂಡಲಾಧಿಪ ಸೌಂದರಂ ಬರ್ಪನೆನಲು ಮೆರೆಂಮಿಂಡಂರಚ್ಚರಿಯಾದರು ೨

ಎಂತೊೞ್ಳಿದನೆ ನಂಬಿಯೆಂದೆನುತ ತಲೆದೂಗಿ
ಇಂತಪ್ಪ ನಂಬಿಯುಂ ಮರೆದು ನಿಂದಿಸಿದೆನೇ
ಇಂತಪ್ಪ ಭಕ್ತನುನ್ನತವನರಿಯದೆ ನಾನು ಭಂಗಿಸಿದೆನೇ ಶಿವಶಿವಾ
ಇಂತಾಯಿತೇ ಎನ್ನ ಭಕ್ತಿ ನೊಂದೆಂ ನೊಂದೆ
ಇಂತಾಗಿ ಜೀವಿಪ ದುರಾಸೆ ಥೀತೆಗೆಯೆಂದು
ಮುಂತಿರ್ದ ಕರವಾಳನೆತ್ತಿ ಕೊರಳಂ ನೂಂಕಿಕೊಳಲು ಶಿವನೋಡಿ ಬಂದು ೩

ಎನ್ನಾಣೆಯೆನ್ನಾಣೆ ತೆಗೆತೆಗೆಯೆನುತ್ತಂದು
ಉನ್ನತದ ಕರವಾಳಮಂ ಪಿಡಿದು ಬಿಸುಟಿದಂ
ಎನ್ನಯ್ಯಯೆನ್ನಣ್ಣ ನೀನಿಂತುಗೈವರೇನಯ್ಯ ಮೆರೆಮಿಂಡದೇವ
ಮನ್ನಣೆಯ ಶರಣರೊಳಗಧಿಕನೈ ನೀನೆಂದು
ಸನ್ನಿಯಿಂದಾತನಂ ಬಿಗಿದು ತಕ್ಕೈಸಲ್ಕೆ
ಗನ್ನವಹ ಪೂಮಳೆ ಸುರಿದುದಲ್ಲಿ ಪೊಣ್ಮಿದುದು ಗಗನದೊಳ್ಭೇರೀರವಂ ೪

ಪರಮ ನಂದೀಶಾದಿ ಗಣನಿಕರವೈತಂದು
ದಿರದೆ ಪುಷ್ಪಕವೈತಡಲ್ಕೆ ಸೌಂದರನಂದು
ಮೆರೆಮಿಂಡರಂ ತೆಗೆದು ಬಿಗಿಯಪ್ಪಲಾತನುಂ ೞಸೈೞಯೆಂಬ ಡಂಗುರವನು
ನೆರೆ ಪೊಯ್ಸೆ ಶರಣನಂ ಪುಷ್ಪಕದಿ ಕುಳ್ಳಿರಿಸಿ
ಭರದಿಂದೆ ಕೈಲಾಸಮಂ ಪೊಕ್ಕು ಗಣನಿಕರ
ದುರುಪದತ್ವವನಿತ್ತನೊಲಿದು ಸರ್ವೇಶ್ವರಂ ವೀರ ಮೆರೆಮಿಂಡಯ್ಯಗೆ ೫

X (ಹ) ೨ ೪ (ಹ) ೩ ಪೊ (ಹ)

ಇತ್ತಲೀ ಸೌಂದರಂ ಮುನ್ನೆ ಶಿವನೊರೆದ ಮಹಿ
ಮೋತ್ತಮವೆನಿಪ್ಪ ತಿರುವಂಜಳಕರ್ದೇವರೆಡೆ
ಗತ್ಯಂತ ಹರುಷದಿಂದೈತರಲ್ಕನಿತರೊಳಗೈತಂದುದೈರಾವತಂ
ಚಿತ್ತಜಾಂತಕನಾಜ್ಞೆಯಾಗಲತಿ ಸಂತಸಂ
ಬೆತ್ತು ನಿಜ ಚತುರಂಗ ತುಂಬುರರ್ಗರ್ಪ್ಪಣೆಯ
ನಿತ್ತು ಚೌದಂತಪನಡರಿ ಪೇರುಮಳಲಿಸಹ ನಡೆದನಾ ಶಿವಲೋಕಕೆ ೬

ನಂಬಿಯಣ್ಣಂ ಪೋದನೆಂಬುದಂ ಕೇಳುತ್ತೆ
ಬೆಂಬತ್ತಿದಂ ಹಯುವನಡರಿ ಚಾರಮನೃಪಂ
ಮುಂಬರಿದು ಪೋಪ ನಂಬಿಯ ಕೂಡಲೀರ್ವ್ವರುಂ ಸಂತಸಂದಾಳುತ್ತಲೀ
ಶಂಭುವಿನ ಸಭೆಯನೊಳಪೊಕ್ಕಿರಗಂ[1]ರ್ವರ್ಗೆ
ಇಂಬಾದ ಗಣಪದತ್ವಂ ನಂಬಿಯಿಂದಾಗೆ
ಸಾಂಬಂಗೆ ಪುಷ್ಪಮಂ ತಪ್ಪ ಪೂರ್ವಾಭಿಧಾನದೊಳೊಪ್ಪಿ ಸುಖದೊಳಿರ್ದಂ ೭

ಕೆಲವು ದಿನಕಾ ಪರವೆ ಸಂಕಿಲೆಯರುಂ ತನುವ
ನುಳಿದು ಕೈಲಾಸಮಂ ಪೊಕ್ಕು ಮುನ್ನಿನ ರೂಹ
ದಳೆದಲ್ಲಿ ರುದ್ರಕರ್ನಿಕೆಯರೆನಿಸುತೆ ಸಂದರಗಸುತೆಯ ಸೇವೆಯಲ್ಲಿ
೨ಇಳೆಯೊಳೀ ಸುಪ್ರಬಂಧಂ ಪುರಾತನರ ನಿಜ
ದೊಲುಮೆಯಿಂ ಶುಕ್ಲಪಕ್ಷದ ಶಶಿಯೊಲೊಂದೊಂದು
ಕಳೆವೆತ್ತು ಪರಿಶೋಭಿಸುತ್ತಿರ್ಕೆಯೆಲ್ಲಿ೦ಯುಂ ಕುಂದುಕೊರತೆಗಳಿಲ್ಲದೆ ೮

ಇದನೋದಲೊರೆಯಲತಿಭಕ್ತಿಯಿಂದಾಲಿಸಲು
ಸದಯರರುವತ್ತು ಮುವ್ವರ್ಪುರಾತನರೊಲಿದು
ಪದುಳದಿ ಪೊರೆವರಿಚ್ಛಾರ್ಥಮುಮನೀವರ್ಸದಾ ಸುಖದೊಳೋಲಾಡಿಪರ್
ವಿದಿತ ಭಕ್ತಿಜ್ಞಾನಕೈದೆ ಒಲವೆನಿಪರು ಮು
ದದಿ ಮಂಗಲೋತ್ಸಾಹಗಳನೆ ಕರುಣಿಪರು ಭುವ
ನದೊಳವರ ಕಂಟಕಾದಿಗಳನೆಲ್ಲವ ಕಳೆದು ಕರವ ಪಿಡಿದುದ್ಧರಿಪರು ೯

---

೧ ವೀ (ಹ) ೨ X (ಹ)

ಶ್ರೀ ಭವ್ಯರೂಪರಾದೀ ಪುರಾತನರೊಳಾಂ
ಶೋಭಿಸಿದ ಕಾರಣದಿ ಭವಬಂಧವೆನಗಿಲ್ಲ
ವಾಭಾವವೆಂತೆನಲು ಪೇಳ್ವ ಕೇಳುವ ಜನಕ್ಕಾನಂದವೆನಗಲು೧ ಕೆಂಭಾ
ವೀ ಭೋಗಣಿಯೆಣಿಸೆ ಅಮರನೀತಿಯೆನೆ ಭಕ್ತರೊಳು
ಪ್ರಾಬಲ್ಯರೆನಿಸುವಿರಿ ಭಕ್ತರೆನೆ ಮತ್ತಂ ದ
ಯಾ ಭರಿತನಾ ರುದ್ರಶಂಭುಯೆನೆ ಚನ್ನಯ್ಯ ಚೋಳಯೆನಲರಿವುದಿವರೊಳ್ ೧೦

ಸಾರಸದ್ಭಕ್ತ ಮಂದಾರ ಮುನಿಜನ ಹೃದ್ವಿ
ಹಾರ ವೇದಸ್ತವನದೂರ ಕುಧರೋಪಮಗ
ಭೀರ ಶಿವಜಂಗಮಾಧಾರ ರಿಪ್ಪೞವರ್ಗಾಂಙಧಕಾರ ನೈರ್ಮಲ್ಯ ಸೂರ
ಕ್ರೂರ ಜೈನ ಮದಾಪಹಾರ ಶಶಿಧರ ಮತೋ
ದ್ಧಾರ ಸಂತತ ಸದಾಚಾರ ಸನ್ಮಂಜುಲಾ
ಕಾರ ಕಲುಷಾಂಬುದ ಸಮೀರ ಗುರುಬಸವಕುಮಾರ ನೀಂ ಸಲಹೆಮ್ಮನು ೧೧

ದೇವಶಂಕರ ಮಹಾದೇವ ಕಮಲಜ ವಾಸು
ದೇವ ವಾಸವ ಪೂರ್ವದೇವ ಮನುಮುನಿ ಗರುಡ
ದೇವತತಿನುತ ಶ್ರಾದ್ಧದೇವ ಸಂಹರ ದಿವ್ಯದೇವ ಗಂಗಾಧರೇಶಾ
ಭಾವಭವಮದವಿಪಿನದಾವ ಹಾಲಾಹಲ
ಗ್ರೀವ ಸದ್ಭಕ್ತ ಸಂಜೀವ ನಿರುಪಮ ಗಣಕು
ಲಾವ ದಿಗ್ಭರಿತ ಪ್ರಭಾವ ನೀಂ ಪೊರೆಯೆನ್ನ ಕೇವಲಾನಂದಮೂರ್ತಿ ೧೨

ಜಯ ಜಯ ಸುಧಾಕರ ಕಲಾಧರ ಶುಭಾಕರಾ
ಜಯ ಜಯ ನಿಲಿಂಪಾಪಗಾಭೃತ ಜಟಾಧರಾ
ಜಯ ಜಯ ಜಗನ್ಮಯ ನಿರಾಮಯ ದಯಾಪಯೋನಿಧಿ ಮಹಿತಮಹಿಮಾಕರ
ಜಯ ಜಯ ವಿರೂಪಾಕ್ಷ ವಿನಮಿತ ಸುಜನಪಕ್ಷ
ಜಯ ಜಯ ಲಸತ್ರ್ಯಕ್ಷ ಶರಣಾವನಾಪೇಕ್ಷ
ಜಯ ಜಯ ಗಣಾಧ್ಯಕ್ಷ ಮಾಂರಕ್ಷಣ ಮಹೇಶತೇ ಸಂತತಂ ಜಯ ಜಯ ೧೩

ಅಂತು ಸಂಧಿ ೨೧ ಕ್ಕಂ ಪದಗಳು ೧೧೪೪ ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ

---

೧ ಲಿ (ಹ) ೨ ವೆ (ಹ) ೩ ವರ್ಗಂ (ಹ)

ಕಂಡು ಮೆರೆಮಿಂಡರೆಲ್ಲಿಯ ಮಹಾ ಬೆಳಗಿದೆನೆ
ದಿಂಡೆಯನುರ್ಡಿದರೆಲೆ ದೇವ ನಂಬಿಯ ಕೂಡಿ
ಕೊಂಡು ಶಿವನೈತಹಂ ಮುಂದಣಾತಂ ನಂಬಿ ಹಿಂದಣಾತಂ ದೇವನು
ಮಂಡಿತ ಮಹಾಪುರಾತನರನುರೆ ಕೀರ್ತಿಸುತೆ
ಖಂಡೇಂದು ಮೌಳಿಯನುಮತದಿಂದೆ ಪೊಗಳುತ್ತೆ
ಮಂಡಲಾಧಿಪ ಸೌಂದರಂ ಬರ್ಪನೆನಲು ಮೆರೆಮಿಂಡರಚ್ಚರಿಯಾದರು ೨

ಎಂತೊಳ್ಳಿದನೆ ನಂಬಿಯೆಂದೆನುತ ತಲೆದೂಗಿ
ಇಂತಪ್ಪ ನಂಬಿಯಂ ಮರೆದು ನಿಂದಿಸಿದೆನೇ
ಇಂತಪ್ಪ ಭಕ್ತನುನ್ನತವನರಿಯದೆ ನಾನು ಭಂಗಿಸಿದೆನೇ ಶಿವಶಿವಾ
ಇಂತಾಯಿತೇ ಎನ್ನ ಭಕ್ತಿ ನೊಂದೆಂ ನೊಂದೆ
ಇಂತಾಗಿ ಜೀವಿಪ ದುರಾಸೆ ಭೀತೆಗೆಯೆಂದು
ಮುಂತಿರ್ದ ಕರವಾಳನೆತ್ತಿ ಕೊರಳಂ ನೂಂಕಿಕೊಳಲು ಶಿವನೋಡಿ ಬಂದು ೩

ಎನ್ನಾಣೆಯೆನ್ನಾಣೆ ತೆಗೆತೆಗೆಯೆನುತ್ತಂದು
ಉನ್ನತದ ಕರವಾಳಮಂ ಪಿಡಿದು ಬಿಸುಟಿದಂ
ಎನ್ನಯ್ಯಯೆನ್ನಣ್ಣ ನೀನಿಂತುಗೈವರೇನಯ್ಯ ಮೆರೆಮಿಂಡದೇವ
ಮನ್ನಣೆಯ ಶರಣರೊಳಗಧಿಕನೈ ನೀನೆಂದು
ನನ್ನಿಯಿಂದಾತನಂ ಬಿಗಿದು ತಕ್ಕೈಸಲ್ಕೆ
ಗನ್ನವಹ ಪೂಮಳೆ ಸುರಿದುದಲ್ಲಿ ಪೊಣ್ಮಿದುದು ಗಗನದೊಳ್ಭೇರೀರವಂ ೪

ಪರಮ ನಂದೀಶಾದಿ ಗಣನಿಕರವೈತಂದು
ದಿರದೆ ಪುಷ್ಪಕವೈತರಲ್ಕೆ ಸೌಂದರನಂದು
ಮೆರೆಮಿಂಡರಂ ತೆಗೆದು ಬಿಗಿಯಪ್ಪಲಾತನುಂ ಇಸ್ಸೈಇಯೆಂಬ ಡಂಗುರವನು
ನೆರೆ ಪೊಯ್ಸಿ ಶರಣನಂ ಪುಷ್ಪಕದಿ ಕುಳ್ಳಿರಿಸಿ
ಭರದಿಂದೆ ಕೈಲಾಸಮಂ ಪೊಕ್ಕು ಗಣನಿಕರ
ದುರುಪದತ್ವವನಿತ್ತನೊಲಿದು ಸರ್ವೇಶ್ವರಂ ವೀರ ಮೆರೆಮಿಂಡಯ್ಯಗೆ ೫

X (ಹ) ೨ ಳ (ಹ) ೩ ಪೊ (ಹ)

ಇತ್ತಲೀ ಸೌಂದರಂ ಮುನ್ನೆ ಶಿವನೊರೆದ ಮಹಿ
ಮೋತ್ತಮವೆನಿಪ್ಪ ತಿರುವಂಜಳಕರ್ದೇವರೆಡೆ
ಗತ್ಯಂತ ಹರುಷದಿಂದೈತರಲ್ಕನಿತರೊಳಗೈತಂದುದೈರಾವತಂ
ಚಿತ್ತಜಾಂತಕನಾಜ್ಞೆಯಾಗಲತಿ ಸಂತಸಂ
ಬೆತ್ತು ನಿಜ ಚತುರಂಗ ತುಂಬುರರ್ಗಪ್ಪಣೆಯ
ನಿತ್ತು ಚೌದಂತಪನಡರಿ ಪೇರುಮಾಳಲಿಸಹ ನಡೆದನಾ ಶಿವಲೋಕಕೆ ೬

ನಂಬಿಯಣ್ಣಂ ಪೋದನೆಂಬುದಂ ಕೇಳುತ್ತೆ
ಬೆಂಬತ್ತಿದಂ ಹಯುವನಡರಿ ಚಾರಮನೃಪಂ
ಮುಂಬರಿದು ಪೋಪ ನಂಬಿಯ ಕೂಡಲೀರ್ವರುಂ ಸಂತಸಂದಾಳುತ್ತಲೀ
ಶಂಭುವಿನ ಸಭೆಯನೊಳಪೊಕ್ಕಿರಗಂಲೀಂರ್ವರ್ಗೆ
ಇಂಬಾದ ಗಣಪದತ್ವಂ ನಂಬಿಯಿಂದಾಗೆ
ಸಾಂಬಂಗೆ ಪುಷ್ಪಮಂ ತಪ್ಪ ಪೂರ್ವಾಭಿಧಾನದೊಳೊಪ್ಪಿ ಸುಖದೊಳಿರ್ದಂ ೭

ಕೆಲವು ದಿನಕಾ ಪರವೆ ಸಂಕಿಲೆಯರುಂ ತನುವ
ನುಳಿದು ಕೈಲಾಸಮಂ ಪೊಕ್ಕು ಮುನ್ನಿನ ರೂಹ
ದಳೆದಲ್ಲಿ ರುದ್ರಕನ್ನಿಕೆಯರೆನಿಸುತೆ ಸಂದರಗಸುತೆಯ ಸೇವೆಯಲ್ಲಿ
ತಳೆಯೊಳೀ ಸುಪ್ರಬಂಧಂ ಪುರಾತನರ ನಿಜ
ದೊಲುಮೆಯಿಂ ಶುಕ್ಲ ಪಕ್ಷದ ಶಶಿಯೊಲೊಂದೊಂದು
ಕಳೆವೆತ್ತು ಪರಿಶೋಭಿಸುತ್ತಿರ್ಕೆಯೆಲ್ಲೀಯುಂ ಕುಂದುಕೊರತೆಗಳಿಲ್ಲದೆ ೮

ಇದನೋದಲೊರೆಯಲತಿಭಕ್ತಿಯಿಂದಾಲಿಸಲು
ಸದಯರರುವತ್ತು ಮುವ್ವರ್ಪುರಾತನರೊಲಿದು
ಪದುಳದಿಂ ಪೊರೆವರಿಷ್ಟಾರ್ಥಮುಮನೀವರ್ಸದಾ ಸುಖದೊಳೋಲಾಡಿಪರ್
ವಿದಿತ ಭಕ್ತಿಜ್ಞಾನಕೈದೆ ಒಲವೆನಿಪರು ಮು
ದದಿ ಮಂಗಲೋತ್ಸಾಹಗಳನೆ ಕರುಣಿಪರು ಭುವ
ನದೊಳವರ ಕಂಟಕಾದಿಗಳನೆಲ್ಲವ ಕಳೆದು ಕರವ ಪಿಡಿದುದ್ಧರಿಪರು ೯

---

೧ ವೀ (ಹ) ೨ X (ಹ)

# ಕಠಿನ ಶಬ್ದಕೋಶ

( ಅರ್ಥದ ಮುಂದೆ ಸಂಧಿ–ಪದ್ಯಗಳ ಸಂಖ್ಯೆಗಳನ್ನು ಸೂಚಿಸಿದೆ)

## ಅ

ಅಕಟಕ–ಅಯ್ಯೋ ೪-೧೩
ಅಕಳಂಕ–ಶುದ್ಧ, ಪವಿತ್ರ ೧೯-೫೮
ಅಕ್ಕರ–ಪ್ರಿತಿ ೨-೫೧; ೧೨-೨೭
ಅಕ್ಷಿ–ಕಣ್ಣು ೯-೧೧
ಅಖಂಡ–ಇಡಿಯ, ಪೂರ
ಅಖಿಲ–ಎಲ್ಲ
ಅಗಜಾ–ಪಾರ್ವತಿ ೧-೧
ಅಗಿ–ಹೆದರು ೧೫-೧೧
ಅಗ್ಗವಣಿ–ನೀರು ೧೦-೨೬
ಅಗ್ಗಳೆ–ಉತ್ತಮ, ಶ್ರೇಷ್ಠ ೧೧-೩೫
ಅಗ್ರಜ–ಅಣ್ಣ ೫-೩೩
ಅಘ–ಪಾಪ ೧-೨
ಅಘಟಿತ–ಆಶ್ಚರ್ಯಕರ ಸಂಗತಿ ೫-೨೯
ಅಂಕ–ಯುದ್ಧ ೯-೪೦; ೧೬-೪೪
ಅಂಕುರಿಸು–ಮೊಳೆ, ಹುಟ್ಟು ೧೮-೩೦
ಅಂಗಜ–ಕಾಮ ೧-೨೫
ಅಂಗಜಕೇಳಿ–ರತಿಕ್ರೀಡೆ, ಸ್ತ್ರೀಪುರುಷ ಸಂಯೋಗ ೨-೫೯
ಅಂಗಜಾರಿ–ಶಿವ ೧೧-ಸೂಚನೆ
ಅಂಗನ್ಯಾಸ–ಹಾವಭಾವ, ಶರೀರದ ಚಲನವಲನ ೭-೧೫
ಅಂಗೈಸು-ಆಸೆಮಾಡು ೪-೨೭;೧೬-೪೮
ಅಂಘ್ರಿ–ಪಾದ ೩-೨೪; ೯-೩೯
ಅಚಲ–ಸ್ಥಿರವಾದ, ದೃಢವಾದ, ಚಲಿಸದ ೮-೯
ಅಚ್ಚರಿ–ಆಶ್ಚರ್ಯ ೧೪-೬೮
ಅಜ–ಬ್ರಹ್ಮ ೧೦-೫೯; ೧೩-೨೬; ೧೬-೩೩
ಅಜಿನ–ತೊಗಲು ೫-೪೮
ಅಜ್ಞ–ತಿಳಿಯದವ, ದಡ್ಡ ೨-೩೫
ಅಂಜನ–ಕಾಡಿಗೆ ೬-೯
ಅಂಜನಾಚಲ–ಕಾಡಿಗೆಯ ಬೆಟ್ಟ ೬-೯
ಅಂಜುಲಿ–ಬೊಗಸೆ ೧೩-೩೨
ಅಟವಿ–ಅಡವಿ, ಅರಣ್ಯ ೨೦-೩೭
ಅಟ್ಟಹಾಸ–ಉತ್ಸಾಹದ ಅತಿರೇಕದ ನಗು ೧೨-೧೭
ಅಡಗು–ಮಾಂಸ ೧೦-೧೭
ಅಡರು–ಏರು ೧೦-೧೧

ಅಮೃತರೋಚಿ—ಚಂದ್ರ ೩-೫
ಅಂಬಕಳ—ಅಂಬಲಿ ೧೭-೪೯
ಅಂಬರ—ಆಕಾಶ, ಬಟ್ಟೆ ೧-೨೫; ೨-೫೪; ೮-೪೪
ಅಂಬಿಕೆ—ಪಾರ್ವತಿ ೧-೨೫
ಅಂಬು—ಬಾಣ ೧೦-೫
ಅಂಬುಜ—ಕಮಲ ೧-೧
ಅಂಬುದ—ಮೋಡ ೨೧-೧೧
ಅಂಬುನಿಧಿ—ಸಮುದ್ರ ೧-೬
ಅರಲು—ಹೂ ೧೨-೩೪
ಅರವರಿಸು—ತಡಮಾಡದಿರು ೧೦-೬೨
ಅರಸು—ಹುಡುಕು ೮-೨೧
ಅರಳ್—ಹೂ ೧೩-೪೯
ಅರಿದು—ಅಸಾಧ್ಯ, ಆಗದ ೮-೮
ಅರುಣಜಲ—ರಕ್ತ ೧೪-೧೫
ಅರುಹಂತ—ಜಿನ ೧೫-೧೩
ಅರೆ—ಬಂಡೆಗಲ್ಲು, ಅರ್ಧ ೧೦-೧೨, ೧೨-೧೫
ಅರ್ಕ—ಸೂರ್ಯ ೩-೧೪
ಅರ್ಚನ—ಪೂಜೆ ೯-೭
ಅರ್ಚಿಸು—ಪೂಜಿಸು ೯-೧೧
ಅರ್ಣವ—ಸಮುದ್ರ ೧೦-೬೮
ಅರ್ತಿ—ಪ್ರೀತಿ ೯-೩೯
ಅರ್ಥಿ—ಇಚ್ಛೆ, ಸುಖ ೨-೫; ೮-೫೦
ಅಲಗು—ಆಯುಧ ೭-೮; ೭-೨೦; ೮-೫೫; ೯-೫೦
ಅಲಘು—ದೊಡ್ಡ, ಶ್ರೇಷ್ಠ ೪-೧
ಅಲರು—ಹೂ ೧೪-೬೦
ಅಲವು—ಹಂಬಲಿಸು, ಇಚ್ಛಿಸು ೧೧-೨೪
ಅಲಸು—ದಣಿ, ಬೇಸರಗೊಳ್ಳು ೧೪-೩೫, ೩೭; ೨೦-೨೬
ಅವಧರಿಸು—ಕೇಳು ೮-೫೮
ಅವನಿ—ಭೂಮಿ ೮-೧೯
ಅವನಿಪ—ಅರಸ ೯-೧೪
ಅಶನ—ಅನ್ನ ೧೪-೮
ಅಶನಿ—ಸಿಡಿಲು ೧೫-೩೭
ಅಶೋಕ—ಒಂದು ಬಗೆಯ ಗಿಡ ೩-೪;೧೧-೨೯
ಅಶ್ರು—ಕಣ್ಣೀರು ೮-೯
ಅಶ್ವ—ಕುದುರೆ ೨-೨೬
ಅಸಮಾಕ್ಷ—ಶಿವ ೯-೧೧
ಅಸಿ—ಖಡ್ಗ ೩-೪; ೫-೪೩; ೯-೩೧; ೧೯-೬೩
ಅಸಿಫಳಕ—ಖಡ್ಗ, ಢಾಲು ೫-೩೯
ಅಸು—ಜೀವ ೬-೧೯; ೧೪-೫೭
ಅಸುರ—ರಾಕ್ಷಸ ೧೩-೧೫
ಅಸ್ಥಿ—ಎಲುವು ೧೩-೨೪
ಅಸ್ಥಿ ಮಾಲಾಧಾರ—ಶಿವ ೧೩-೨೪
ಅಹಿ—ಹಾವು ೧೨-೨೩
ಅಹಿಧರ—ಶಿವ ೧೫-೬೮
ಅಹಿಪತಿ—ಆದಿಶೇಷ ೧೯-೪೦
ಅಹಿರಾಜ—ಆದಿಶೇಷ ೨-೩೧
ಅಳಲು—ದುಃಖ ೯-೫೪
ಅಳವಡು—ಹೊಂದು, ಒಳಗಾಗು ೧-೨೦
ಅಳಿ—ತುಂಬಿ, ಭ್ರಮರ ೧೪-೧೬
ಅಳಿಮನ—ಕೀಳುಮನ ೧೩-೨೦
ಅಳಿಯಾಸೆ—ಕೀಳುಆಸೆ ೧-೨೦

## ಆ

ಆಕರ್ಣಿಸು—ಕೇಳು ೧೧—ಸೂಚನೆ
ಆಕಲಿತ—ಕೂಡಿಸಲ್ಪಟ್ಟ ೧-೧೯
ಆಗಸ—ಆಕಾಶ ೧೪-೧೪
ಆಜ್ಯ—ತುಪ್ಪ ೨೦-೧೭

ಆಣ್ಮ—ಒಡೆಯ, ಆಳುವವ ೨-೨೧
ಆತಪತ್ರ—ಕೊಡೆ ೩-೧೫
ಆತ್ಮಜ—ಮಗ ೧೪-೩೩
ಆತ್ಮಭವ—ಮಗ ೨-೧೦
ಆದಿತ್ಯ—ಸೂರ್ಯ ೧೪-೧೪
ಆನನ—ಮುಖ ೧—೯
ಆನೆಮೊಗ—ಗಣಪತಿ ೧೪-೫೪
ಆಂತರ್ಯ—ಮನಸ್ಸು,
ಅಂತರಂಗ ೪—೩೦
ಆಪಗಾ—ಹೊಳೆ, ನದಿ ೨೧-೧೩
ಆಪದ—ದುರ್ದೈವ, ಸಂಕಟ ೧-೧೧
ಆಪೋಷಣ—ಬೊಗಸೆಯಲ್ಲಿ ನೀರು
ಕುಡಿಯುವುದು ೧೯-೧೦
ಆಮ್ನಾಯ—ವೇದ ೧೯-೫೮
ಆಮ್ರಫಲ—ಮಾವಿನ ಹಣ್ಣು ೫-೮
ಆಯತ—ಒಳಗಾದ, ೧—೫;
ಯೋಗ್ಯವಾದ, ೭-೨;
ವಿಸ್ತಾರವಾದ ೧೩-೨೫
ಆಯು—ಆಯುಷ್ಯ, ೧೩-೨೫
ಜೀವನ ೧೩-೨೬
ಆರ್—ಗರ್ಜಿಸು, ಸಮರ್ಥ
ನಾಗು ೫-೪೧
ಆರಡಿ—ತುಂಬಿ ೩-೫
ಆರಂಭ—ಒಕ್ಕಲುತನ ೬-೩
ಆರಯ್—ಆಲೋಚಿಸು,
ವಿಚಾರಿಸು ೧೦-೨
ಆರವೆ—ತೋಟ ೧೯-೨೬
ಆರಾಧನಾ—ಪೂಜೆ,
ಪ್ರಾರ್ಥನೆ ೯—೩೦
ಆರೋಗಣೆ—ಊಟ ೬-೧೮
ಆರೋಗಿಸು—ಊಟಮಾಡು ೬-೨೦
ಆರ್ಜಿಸು—ಗಳಿಸು ೯-೨೭

ಆರ್ತ—ದುಃಖವುಳ್ಳ, ಪೀಡಿತ ೧೯-೭
ಆರ್ತಸ್ವರ—ದುಃಖಧ್ವನಿ ೩-೨೨
ಆಲವಾಲ—ಪಾತಿ ೯-೧
ಆಲಿನೀರು—ಅತಿತಂಪುನೀರು ೩-೩
ಆಲಿಸು—ಲಕ್ಷ್ಯಕೊಟ್ಟುಕೇಳು ೧೧-೧೩
ಆವರ್ಕ—ಅಂಟಿದ, ಹೊಂದಿದ,
ಹೊದ್ದ ೧೨-೪೩
ಆಶೀವಿಷ—ಹಾವು ೧೫-೩೩
ಆಸುರ—ಪೀಡೆ, ಕಷ್ಟ, ಭೀಕರ ೮-೩೦;
೪-೧೭; ೬-೧೨
ಆಸ್ಫಾಲನ—ಅಪ್ಪಳಿಕೆ, ತಟ್ಟುವಿಕೆ,
ಚಪ್ಪರಿಸುವಿಕೆ ೫-೪೦
ಆಹವ—ಯುದ್ಧ ೯-೪೭

ಇ

ಇಕ್ಕುಳ—ತಂಡಾಸ,
ದೊಡ್ಡ ಚಿಮಟಿ ೯-೫
ಇಕ್ಕೆ—ಸ್ಥಳ, ನಿವಾಸ ೧೦-೫೦
ಇಕ್ಕೆಲ—ಎರಡು ಬದಿ ೯-೩೨
ಇಂಗಳ—ಬೆಂಕಿ ೩-೪
ಇಂಗಿತ—ಅಭಿಪ್ರಾಯ,
ಉದ್ದೇಶ ೧೧-೧೧
ಇಡಿ—ತುಂಬು, ನಿಬಿಡವಾಗು ೨-೩೬
ಇನ—ಸೂರ್ಯ ೨-೫೦; ೧೫-೨೧
ಇನಿತು—ಇಷ್ಟು, ಸ್ವಲ್ಪ ೮-೨೭
ಇನಿಯಳು—ಹೆಂಡತಿ, ಪ್ರಿಯೆ ೮-೫೫
ಇಂದು—ಚಂದ್ರ ೧-೭
ಇಂದ್ರಜಾಲ—ಮಾಟಮದ್ದು
ಗಳ ವಿದ್ಯೆ ೧-೨೫
ಇಭ—ಆನೆ ೧೭-೩೨
ಇಮ್ಮನ—ಎರಡು ಮನಸ್ಸು ೮-೩೬
ಇಂಬು—ಲೇಸು, ಸ್ಥಿತಿ ೨-೧೧

ಇರುಂಪೆ—ಇರುವೆ ೧೩-೭
ಇರುಹೆ—ಇರುವೆ ೧೮-೪೨
ಇಳೆ—ಭೂಮಿ ೨-೨೧; ೨೦-೩೮
ಇಳೆದೇರ—ಶಿವ ೨೦-೩೮

### ಈ

ಈ—ಕೊಡು ೮-೧೨
ಈಕ್ಷಣ—ಕಣ್ಣು ೧೬-೪೮
ಈಕ್ಷಿಸು—ನೋಡು ೮-೧೬
ಈಡಾಡು—ಬೀಸಾಡು, ತೂರಿ ಒಗೆ ೧೫-೪೨
ಈಡು—ಸಮ ೧೭-೩೦

### ಉ

ಉಕ್ಷ—ನಂದಿ, ಹೋರಿ ೧೦-೭೨
ಉಗ್ಘಡಿಸು—ಪರಾಕುಹೇಳು, ಜಯಜಯಕಾರ ಮಾಡು ೧೭-೫೬
ಉಘೆ—ಭಲೆ, ಭಾಪು; ಹೊಗಳಿಕೆಯ ಶಬ್ದ ೩-೧೯
ಉಜ್ಜುಗಿಸು—ತೊಡಗು ೭-೭
ಉಡುಪತಿ—ಚಂದ್ರ ೫-೧೨
ಉತ್ತರಣ—ದಾಟುವಿಕೆ ೧-೮
ಉತ್ತರೀಯ—ಹೆಗಲಮೇಲೆ ಹೊದ್ದುಕೊಳ್ಳುವ ವಸ್ತ್ರ ೫-೧೩
ಉತ್ತಮಾಂಗ—ತಲೆ ೧೯-೨೮
ಉತ್ತುಂಗ—ಶ್ರೇಷ್ಠ, ಉನ್ನತ ೧-೧; ೧೯-೫೫
ಉತ್ಪಾತ—ಕೇಡು, ಗಂಡಾಂತರ, ಅಪಶಕುನ ೧೦-೬೩
ಉದಧಿ—ಸಮುದ್ರ ೫-೫೨
ಉದ್ಧೂಳಿಸು—ಹಚ್ಚು, ಧರಿಸು ೯-೪೭
ಉದ್ಯತ—ತೊಡಗಿದ, ಸಿದ್ಧವಾದ ೨-೯
ಉದ್ವರ್ತನ—ಲೇಪನ, ಹಚ್ಚುವುದು ೨-೫೪
ಉಪರತಿ—ಸುರತ ೨-೫೯
ಉಪ್ಪರಗಟ್ಟು—ಶ್ರೇಷ್ಠವೆನಿಸು ? ಹೆಚ್ಚೆನಿಸು ? ೫-೫
ಉಪ್ಪವಡಿಸು—ಎಬ್ಬಿಸು, ಹಾಸಿಗೆಯಿಂದ ಏಳು ೧೦-೨೪
ಉರ—ಎದೆ ೫-೧೫; ೯-೫೨; ೧೮-೩೭
ಉರಗ—ಹಾವು ೧-೨೩
ಉರು—ಶ್ರೇಷ್ಠ ೨-೧
ಉರುತರ—ಬಹಳ, ಶ್ರೇಷ್ಠ ೧-೧೭
ಉರುವಣೆ—ಆತುರ, ಸಿಟ್ಟು ೫-೪೦; ೯-೩೨
ಉರ್ವಿ—ಭೂಮಿ ೨-೭
ಉಲವು—ಧ್ವನಿ ೯-೩೧
ಉಲ್ಬಣ—ಆಧಿಕ್ಯ, ಹೆಚ್ಚಳ ೨-೪
ಉಸಿರು—ಹೇಳು ೯-೩೪
ಉಳುಹು—ಕಾಪಾಡು, ಉಳಿಸು ೧೯-೩೩

### ಊ

ಊಡು—ಉಣ್ಣಿಸು ೨-೨೨; ೯-೫
ಊಣೆಯ—ಕೊರತೆ ೧೦-೪೯
ಊರು—ಚುಚ್ಚು; ಕಡಿ ೧೩-೭
ಊರುದಂಡ—ತೊಡೆ ೧೬-೨೦
ಊಳಿಗ—ಸೇವೆ, ಕೆಲಸ ೯-೪೧

### ಎ

ಎಡೆಮಾಡು—ಊಟಕ್ಕೆ ನೀಡು ೧೬-೧೦

ಎಡೆಯಾಡು—ಅಡ್ಡಾಡು, ಅಲೆದಾಡು ೨-೫
ಎಣೆ—ಸರಿ, ಹೋಲಿಕೆ ೧-೧೩
ಎತ್ತಣ—ಯಾವಕಡೆಯ, ಎಲ್ಲಿಯ ೨-೩
ಎತ್ತು—ಬದುಕಿಸು ೯-೧೩
ಎರಕ—ಬೆಸುಗೆ ೧-೯
ಎರಗು—ನಮಸ್ಕಾರಮಾಡು ೭-೪; ೧೯-೧೬
ಎರಳೆಗುರುಪ—ಚಂದ್ರ ೨-೫೫
ಎರೆಗುಪ್ಪಸ—ಕಪ್ಪು ಕೆಂಪಂಗಿ ? ಹಾವಿನಪರೆಯ ಅಂಗಿ? ೧೦-೪
ಎರೆಯ—ಒಡೆಯ ೧೦-೪೩
ಎಸು—ಬಾಣ ಪ್ರಯೋಗಿಸು ೧೦-೭
ಎಸೆ—ಶೋಭಿಸು ೧-೧೦
ಎಳಲು—ನೇತಾಡು ೮-೧೫
ಎಳಸು—ಇಚ್ಛಿಸು ೮-೧೦

ಐ

ಐತರು—ಬರು ೨-೧
ಐದು—ಪಡೆ ೧-೫
ಐದೆ—ಚೆನ್ನಾಗಿ ೮-೨೦
ಐದೆತನ—ಮುತ್ತೈದೆತನ ೧೩-೩೫

ಒ

ಒಗುಮಿಗೆ—ಬಹಳ, ಅತಿಶಯ ೬-೨೫; ೮-೧೮
ಒಗೆ—ಹುಟ್ಟು ೨-೧೦
ಒಗೆ—ಬಟ್ಟೆಯನ್ನು ನೀರಿನಲ್ಲಿ ತೊಳೆಯುವುದು ೧೪-೨೦
ಒಟ್ಟಿಲು—ಸಮೂಹ ೧೦-೧೨
ಒಡಂಬಡು—ಒಪ್ಪು ೨-೨೪; ೪-೧೩
ಒಡರಿಸು—ರಚಿಸು ೧೭-೧೧
ಒಡ್ಡು—ಸೈನ್ಯ ೫-೩೩;೫-೪೧
ಒಡ್ಡೋಲಗ—ತುಂಬಿದ ರಾಜಸಭೆ
ಒದವಿಸು—ಒದಗಿಸು, ಸಿಕ್ಕುವಂತೆ ಮಾಡು ೧೯-೫೪
ಒನೆದಾಡು—ತೂಗಾಡು ಒಲೆದಾಡು ೮-೨೭
ಒಪ್ಪುಗೊಡು—ಒಪ್ಪಿಸು, ವಶಕ್ಕೆ ಕೊಡು ೨-೩೦
ಒಬ್ಬುಳಿ—ಒಟ್ಟು, ರಾಶಿ ೧೩-೫೩
ಒರೆ—ಬರೆ, ಹೇಳು ೧-೧೪; ೫-೫೦

ಓ

ಓಕರಿ—ಸುರಿಯುವುದು, ವಾಂತಿ ೧೯-೬
ಓಗರ—ಅನ್ನ ಆಹಾರ ೨-೨೩; ೧೨-೧೫
ಓಘ—ರಾಶಿ, ಸಮೂಹ ೧-೨
ಓಜಕ—ಶಿಕ್ಷಕ, ಗುರು, ಶಿಲ್ಪಿ ೧೦-೫೮
ಓತು—ಪ್ರೀತಿಸಿ ೪-೧೯
ಓಪ—ಗಂಡ ೧೮-೩೦
ಓರಂತೆ—ಒಂದೇರೀತಿ, ಒಂದೇ ಸಮನೆ ೧೩-೪೩
ಓಲೈಸು—ಸೇವೆಮಾಡು ೧೫-೪೦
ಓವು—ಕಾಪಾಡು ೨-೨೧; ೧೫-೪೭
ಓಸರಿಸು—ಹಿಂಜರಿ ಬದಿಗೆ ಸರಿಸು ೫-೪೭; ೧೭-೪೪
ಓಳಿ—ಗುಂಪು, ಸಾಲು ೧೧-೩೨

ಔ

ಔಚಿತ್ಯ—ಯೋಗ್ಯ, ತಕ್ಕ ೧೮-೨೦

ಕ

ಕಂಕಪತ್ರ—ಬಾಣ ೧೫-೬೧
ಕಚ್ಚುಟ—ಲಂಗೋಟಿ;
ಕೌಪೀನ ೮-೨೮
ಕಜ್ಜಳ—ಕಾಡಿಗೆ ೬-೯
ಕಂಜ—ಕಮಲ ೧೧-೫
ಕಂಜಶರಹರ—ಶಿವ ೧೧-೫
ಕಂಜಾರಿ—ಚಂದ್ರ ೧-೨
ಕಂಜಾರಿಧಾರಿಣಿ—ಪಾರ್ವತಿ ೧-೨
ಕಟಕಿ—ಚುಚ್ಚುಮಾತು,
ಕೆಣಕು ಮಾತು ೮-೨೦; ೧೩-೨೮
ಕಟಾಹ—ಕೊಪ್ಪರಿಗೆ, ಕಡಾಯಿ ೮-೪೮;
೮-೬೩
ಕಟವಾಯಿ—ಬಾಯಿಯ ಕೊನೆ ೧೨-೨೨
ಕಟಿ—ಟೊಂಕ ೨೦-೩೧
ಕಡ—ಸಾಲ, ಎರವು ೧೧-೧೯
ಕಡಲು—ಸಮುದ್ರ ೧೧-೨೧
ಕಡಿಖಂಡಮಯ—ತುಂಡು-
ತುಂಡಾದ ೫-೪೩
ಕಡುಕು—ಕಿವಿಯ ಆಭರಣ ೫-೧೨
ಕಡೆಗಾಣಿಸು—ದೂರಮಾಡು ೭-೨೨
ಕಣ್ಕೆತ್ತು—ಕಣ್ಣುಸ್ಪಂದಿಸು,
ಕಣ್ಣುಹಾರು ೮-೨೭
ಕಣ್ಣ—ಕಣ್ಣಪ್ಪ ೧೦-೧೧
ಕಣ್ಣಂದ—ಕಣ್ಣಪ್ಪ ೧೦-೧೧
ಕತ—ಕಾರಣ ೧೨-೧೯
ಕತ್ತುರಿ—ಕಸ್ತೂರಿ ೫-೧೩
ಕದಪು—ಕೆನ್ನೆ ೧೬-೨೧
ಕದಂಬ—ಸಮೂಹ ೧-೨; ೧೩-೪೮
ಕದಂಬಕ—ಸಮೂಹ ೯-೩೩
ಕದಳಿ—ಬಾಳೆಗಿಡ ೧೬-೨೦
ಕದಿರು—ಕಿರಣ, ಕಾಂತಿ ೧೧-೨೯
ಕನಲು—ಸಿಟ್ಟಿಗೇಳು ೮-೩೦; ೧೦-೧೪
ಕಂತುಹರ—ಶಿವ ೧-೨೨
ಕಂತೆ—ಕೌದಿ ೧೪-೧೧
ಕಂಥೆ—ಕೌದಿ ೧೪-೧೯
ಕಂದುಗೊರಳ—ಶಿವ ೪-೩೧
ಕಂಧರ—ಕುತ್ತಿಗೆ ೨೦-೩೯
ಕಪರ್ದಿ—ಶಿವ ೧೨-೪೨
ಕಪ್ಪಡ—ಬಟ್ಟೆ ೬-೬
ಕಬಂಧ—ಮುಂಡ, ತಲೆಯಿಲ್ಲದ
ದೇಹ ೯-೩೬
ಕಮಂಡಲ—ಸಂನ್ಯಾಸಿಗಳ
ಜಲಪಾತ್ರೆ ೧-೨೧
ಕಮಲಭವಾಂಡ—ವಿಶ್ವ ೧೧-೧೫
ಕರಕರಿ—ಒಂದೇಸವನೆ
ಪೀಡಿಸುವಿಕೆ ೮-೩೯
ಕರಡಿಗೆ—ಪೆಟ್ಟಿಗೆ ೧೦-೨೬
ಕರಡೆ—ಒಂದು ಬಗೆಯ
ಚರ್ಮವಾದ್ಯ ೧೦-೪೩
ಕರಂಡಗೆ—ಪೆಟ್ಟಿಗೆ ೯-೧೬
ಕರವಾಳ—ಖಡ್ಗ ೨೦-೩೯
ಕರಿ—ಆನೆ ೫-೧೩; ೯-೩
ಕರಿಗೊರಳ—ಶಿವ ೯-೩೪
ಕರಿಮುಖ—ಗಣಪತಿ ೧೪-೬೬
ಕರೆಕಂಠ—ಶಿವ ೧೭-೩
ಕರ್ಣಿಕೆ—ತಾವರೆಯ ಒಳಗಿನ
ಬೀಜಕೋಶ ೧೯-೧೨
ಕರ್ಪುರ—ಕಬ್ಬು ೩-೧೧
ಕಲ್ಪಭೂಜ—ಕಲ್ಪವೃಕ್ಷ ೮-೩೮
ಕಲ್ಪ ಭೂಮಿರುಹ—ಕಲ್ಪವೃಕ್ಷ ೮-೪೩
ಕಲ್ಪಲತೆ—ಕಲ್ಪವೃಕ್ಷ ೨-೯
ಕಲ್ಲೋಲ—ತರಂಗ, ಅಲೆ ೧-೧೯
ಕವಡಿಕೆ—ಹೆಣಿಕೆ, ಮಾಲೆ ೧೦-೪

ಕವಳಿಗೆ–ಶಿವನಕೈಯ ಭಿಕ್ಷಾ ಪಾತ್ರೆ, ತಲೆಬುರುಡೆ ೭-೮
ಕಶ್ಮಲ–ಹೊಲಸು, ಕೊಳೆ ೧೩-೧೦
ಕಳ–ಯುದ್ಧಭೂಮಿ, ಮಲ್ಲಭೂಮಿ ೯-೩೬; ೯-೪೮
ಕಳಭ–ಆನೆಯ ಮರಿ ೧-೨೦
ಕಳಮೆ–ಬತ್ತ, ಅಕ್ಕಿ ೩-೧೧
ಕಳೇವರ–ದೇಹ ೪-೩೪; ೧೩-೩೩
ಕಾಂಕ್ಷಾ–ಇಚ್ಛೆ ೨-೩೮
ಕಾಂಡಧಿ–ಸಮುದ್ರ ೧೫-೪೩
ಕಾತ್ಯಾಯನೀ–ದುರ್ಗಾದೇವತೆ ೧-೨
ಕಾನನ–ಅಡವಿ ೧೦-೨೧
ಕಾಪಟ್ಯ–ವಂಚನೆ, ಮೋಸ ೪-೧೩
ಕಾಮಾರಿ-ಶಿವ ೧೪-೬೬
ಕಾಮ್ಯ–ಇಚ್ಛೆಗೆ ಸಂಬಂಧಿಸಿದ ೯-೪
ಕಾಯಜಾಂತಕ–ಶಿವ ೧೮-೨೫
ಕಾರಣಿಕ–ಪರೀಕ್ಷಕ, ಮಹಾಪುರುಷ ೨-೨೪
ಕಾರ್ಮುಗಿಲು–ಮಳೆಗಾಲದ ಮೋಡ ೧೦-೨
ಕಾಲ–ಯಮ ೩-೧೯
ಕಾಲಪೃಷ್ಠಾರಾತಿ–ಕರ್ಣನ ಬಾಣದ ವೈರಿ ೧೫-೬೧
ಕಾಲಹರ–ಶಿವ ೧೨-೪೦
ಕಾಲಾರಿ-ಶಿವ ೯-೨೦
ಕಾವ-ಕಾಮ ೧೬-೨೦
ಕಾಷಾಂಬರ–ಕಾವಿಬಟ್ಟೆ ೧೧-೨೯
ಕಾಸಾರ–ಸರೋವರ ೩-೫
ಕಾಹು–ಕಾಯುವಿಕೆ ೧೪-೪೯
ಕಾಳೆಗ–ಯುದ್ಧ ೯-೩೦
ಕಿಂಕರ–ಸೇವಕ ೧-೧೨
ಕಿಂಕರತೆ–ಸೇವಕತನ ೩-ಸೂಚನೆ
ಕಿನ್ನರ(ಕಿಂಪುರುಷ)–ಕುದುರೆಯ ದೇಹ, ಮನುಷ್ಯರಮೋರೆಯುಳ್ಳ ದೇವತೆ ೧-೨೩
ಕಿರುಪಂಡಿ–ಚಿಕ್ಕಬಂಡಿ ೨-೧೪
ಕಿಸಲಯ–ಚಿಗುರು ೩-೪
ಕೀಳ್ಪಡಿಸು–ತಿರಸ್ಕರಿಸು ೪-೩೬
ಕುಂಜರ–ಆನೆ ೧೧-೭
ಕುಟಿಲ–ಮೋಸ ೩-೧೨
ಕುಂಟಣಿ–ಕುಂಟಲಗಿತ್ತಿ ೨-೧೩
ಕುಂಡಲ–ಕಿವಿಯ ಆಭರಣ ೭-೧೦
ಕುಧರ–ಬೆಟ್ಟ ೧೨-೪೨
ಕುಂತಳ–ತಲೆಗೂದಲು ೫-೧೨
ಕುಪ್ಪಿ–ಪೆಟ್ಟಿಗೆ ೧೪-೨
ಕುಪ್ಪು–ಹಾರು, ಜಿಗಿ ೧೦-೪೩
ಕುಮುದ–ನೈದಿಲೆ ೨-೬೪
ಕುಮುದಿನಿ–ನೈದಿಲೆ ೩-೧೦
ಕುಂಭಕಾರಕ–ಕುಂಬಾರ ೪-೨
ಕುಂಭಜ–ಅಗಸ್ತ್ಯ ೧-೨೧
ಕುಂಭಿನಿ–ಭೂಮಿ ೨-೧೧
ಕುರಂಗ–ಚಿಗರೆ ೪-೩೮
ಕುರುಹು–ಗುರುತು ೨-೬
ಕುರುಳು–ಕೂದಲು ೫-೧೪
ಕುರ್ಗು–ಕುಗ್ಗು ೧೧-೨೫
ಕುಲಿಶ–ವಜ್ರಾಯುಧ ೧೨-೪೨
ಕುವಲಯ–ಕನ್ನೈದಿಲೆ ೩-೫
ಕುಸುಮಕೋದಂಡ–ಕಾಮ ೧೩-೫
ಕುಸುಮಾಸ್ತ್ರ–ಕಾಮ ೧೧-೩೭
ಕೂಪ–ಬಾವಿ ೧೭-೧೨
ಕೂರ್–ಚೂಪು, ಹರಿತ ೧೦-೬
ಕೂರಸಿ–ಹರಿತವಾದ ಖಡ್ಗ ೪-೩೦
ಕೃತಕೃತ್ಯ–ತೃಪ್ತ, ಮಾಡಬೇಕಾದುದನ್ನು ಮಾಡಿ ಮುಗಿಸಿದವ ೫-೨೮

ಕೆಡೆ—ಬೀಳು ೧೪-೫೭
ಕೆಲಬಲ—ಎಡಗಡೆ, ಬಲಗಡೆ ೧೧-೪೪
ಕೇಶವ—ವಿಷ್ಣು ೧-೨೩
ಕೈಂಕರ್ಯ—ಸೇವಕತನ ೧-೮
ಕೈಗುಂದು—ಶಕ್ತಿಹೀನವಾಗು ೮-೫೭
ಕೈಗೆಲಸ—ಹೊಲದಕೆಲಸ ೧೩-೩೯
ಕೈರವ—ನೈಯ್ದಿಲೆ ೧೫-೧೮
ಕೈವಾರ—ಹೊಗಳಿಕೆ ೧-೨೩; ೨-೩೯
ಕೊಂಕು—ಸೊಟ್ಟಾಗಿರುವುದು,
ಬಾಗಿರುವುದು ೨೦-೩೧
ಕೊಣಕಿಡು—ಹಾರು, ನೆಗೆ ೧೦-೪೨
ಕೊಪ್ಪರಿಕೆ—ದೊಡ್ಡ ಕಡಾಯಿ ೮-೪೫
ಕೊರ್ಬು—ಸೊಕ್ಕು ೮-೫೭
ಕೊಳಗ—ಧಾನ್ಯ ಅಳೆಯುವ
ಒಂದು ಪಾತ್ರೆ ೩-೧೪; ೧೪-೩೭
ಕೊಳಗುಳ—ಯುದ್ಧ ೩-೪
ಕೋಟಲೆ—ಪೀಡೆ, ಉಪದ್ರವ ೧೫-೯
ಕೋಲು—ಬಾಣ ೨-೫೨
ಕೋವಣ—ಲಂಗೋಟಿ, ಕೌಪೀನ ೬-೬
ಕೌತುಕ—ಆಶ್ಚರ್ಯ, ಆನಂದ ೬-೧೫
ಕೌಪ—ಲಂಗೋಟಿ ೮-೨೩
ಕೌಪೀನ-ಲಂಗೋಟಿ ೮-ಸೂಚನೆ
ಕ್ರಮುಕ-ಅಡಕೆ ೩—೧೧
ಕ್ರೌಂಚರಿಪು—ಷಣ್ಮುಖ ೧೪-೬೬
ಕ್ಷಿತಿ—ಭೂಮಿ ೧೩-೧
ಕ್ಷಿಪ್ರ—ತೀವ್ರ, ಕೂಡಲೆ ೧೩-೨೩
ಕ್ಷುತ್—ಹಸಿವು ೬-೩
ಕ್ಷುಧೆ—ಹಸಿವು ೬-೧೬
ಕ್ಷೋಣಿ—ಭೂಮಿ ೭-೫

ಖ

ಖಗ—ಪಕ್ಷಿ ೧೦-೬೫
ಖಂಜನೀ—ಗವುಜಗ ೧-೧೨
ಖಂಜರೀಟ—ಗವುಜಗ,
ಮಡಿವಳ ಹಕ್ಕಿ ೧-೨
ಖಂಜರೀಟಾಕ್ಷಿ—ಮಡಿವಳಹಕ್ಕಿ-
ಯಂತೆ ಕಣ್ಣುಳ್ಳವಳು ೧-೨
ಖಂಡೇಂದು—ಅರ್ಧ ಚಂದ್ರ ೧೭-೧೭
ಖತಿ—ಸಿಟ್ಟು ೨೦-೨೪
ಖರಕರ—ಸೂರ್ಯ ೯-೫೩
ಖಳ—ಕಣ, ರಂಗ ೯-೫೦
ಖಾತಿ—ಸಿಟ್ಟು ೧೪-೧೭, ೧೭-೬
ಖ್ಯಾತ—ಹೆಸರಾದ ೧೫-೨

ಗ

ಗಂಹರ—ಗವಿ ೧೭-೪೦
ಗಜ—ಆನೆ ೯-೨೧
ಗಜರಿಪು—ಶಿವ ೧-೨೪
ಗಜಾಜಿನ—ಆನೆಯ ಚರ್ಮ ೫-೪೮
ಗಜಾರಾತಿ—ಸಿಂಹ ೮-೩
ಗಂಡೂಷ—ಬಾಯಿ-
ಮುಕ್ಕಳಿಸುವಿಕೆ ೧೯-೨೪
ಗಂಡೂಷ ಬಿಂದು—ಉಗುಳು-
ಹನಿ ? ೧೯-೪
ಗದ್ಗದಿಸು—ನಡುಗು ೧೦-೪೬
ಗರಳ—ವಿಷ ೫-೧೩, ೯-೫೩
ಗರಳಧರ—ಶಿವ ೧೩-೧೨
ಗರುವಾಯಿಗೆಡು—ಹೆಮ್ಮೆಗೆಡು ೨-೩೩
ಗವಸಣಿಕೆ—ಹೊದಿಕೆ ೭-೨೬
ಗಳಿಗೆವಟ್ಟಲು—ಪ್ರಾಚೀನ
ಕಾಲದ ವೇಳೆ ತಿಳಿಯುವ
ಸಾಧನ ೮-೬೩
ಗಾಂಪ—ದಡ್ಡ ೧೫-೨೨
ಗಾರುಮಾಡು—ಗಾಸಿಮಾಡು ೧೭-೧೭
ಗಿಡಿಬಿಡಿ—ಡಮರುವಿನಂತಹ

ಒಂದು ವಾದ್ಯ ೫-೩೩
ಗುಗ್ಗುಳ—ಒಂದು ಬಗೆಯ ಸುಗಂಧ ದ್ರವ್ಯ ೧೧-೪
ಗುಂಜ—ಗುಲಗಂಜಿ ೧೦-೪
ಗುಂಜಾಭರಣ—ಗುಲಗುಂಜಿಯ ಆಭರಣ ೧೦-೪
ಗುಡಿಗಟ್ಟು—ಧ್ವಜಹಾರಿಸು ೧೬-೧೨
ಗುಡಿಲು—ಗುಡಿಸಲು ೧೭-೫೪
ಗುಣಗರ್ಭ—ಜೇಡ ೧೭-೨೮
ಗುಲ್ಮ—ಮರಗಳ ಗುಂಪು ೨-೫೫
ಗುಹ—ಷಣ್ಮುಖ ೧೬-೪
ಗೂಡೆ—ಒಂದುಬಗೆಯ ಬುಟ್ಟಿ ೬-೧೭
ಗೊಂಟು—ದಿಕ್ಕು, ಮೂಲೆ ೮-೧೬
ಗೊಂದಣ—ಸಮೂಹ ೫-೪೨; ೧೯-೩೪
ಗೊರವ—ಶೈವಭಿಕ್ಷು ೫-೩೪
ಗೋಕುಲ—ದನಗಳ ಹಿಂಡು, ಆಕಳಹಿಂಡು ೧೨-೨೨
ಗೋಜಾಗತ—ಆಕಳಜನ್ಮ ? ೧೨-೩೧
ಗೋನಾಳಿ—ಕುತ್ತಿಗೆ ೧೨-೧೪
ಗೋಪವಾಹನ—ಶಿವ ೫-೧೯
ಗೋಪ್ಯ—ಗುಟ್ಟಾದ ೪-೧೧

### ಘ

ಘಟ್ಟಿ—ಮುದ್ದೆ, ಸುಗಂಧ ದ್ರವ್ಯದ ಕರಣೆ ೯-೫
ಘನ—ಮೋಡ ೧-೧೦; ೬-೧೦
ಘಳಿಗಿವಟ್ಟಲು—ವೇಳೆ ಅಳೆಯುವ ಒಂದು ಸಾಧನ ೧೧-೩೩
ಘಳಿಲನೆ—ಬೇಗನೆ ೩-೧೮; ೨೦-೩೨
ಘ್ರಾಣ—ಮೂಸುವಿಕೆ ೫-೫೦
ಘ್ರಾಣ—ಮೂಗು ೧೦-೩೪
ಘೀಳಿಡು—ಕೂಗು, ಗರ್ಜಿಸು ೨-೨೬
ಘುಟಿಕಾ—ಗುಳಿಗೆ ೨೦-೩೮
ಘೃತ—ತುಪ್ಪ ೨೦-೧೮

### ಚ

ಚಕ್ರ—ಚಕ್ರವಾಕ ಪಕ್ಷಿ ೩-೧೪
ಚಂಡನುಡಿ—ಚುರುಕುನುಡಿ ೮-೧೧
ಚಂಡಿತನ—ಹಟಮಾರಿತನ ೮-೧೧
ಚಂಡಿಕಾ—ದುರ್ಗೆ ೧೬-೧೬
ಚದುರ—ಜಾಣ ೫-೫೨
ಚದುರತ್ವ—ಜಾಣತನ ೨-೩೭
ಚಂದನ—ಶ್ರೀಗಂಧ ೧೨-೩೫
ಚಂದ್ರಹಾಸ—ಒಂದುಬಗೆಯ ಆಯುಧ ? ೧೧-೧೫
ಚಂದ್ರಿಕೆ—ಬೆಳುದಿಂಗಳು ೨-೬೪
ಚಪಲತನ—ಚುರುಕುತನ ೧೫-೨
ಚಮ್ಮಟಿಗೆ—ಸುತ್ತಿಗೆ ೯-೫
ಚಮ್ಮಳಿಗೆ—ಕೇತು, ರಾಹು ಗ್ರಹಗಳು ೧೪-೧೬
ಚರ—ಸೇವಕ ೧೧-೧೯
ಚರ—ಜಂಗಮ ೧೯-೩೯
ಚರಿಗೆ—ಜೈನಭೋಜನ ೧೫-೨೧
ಚರ್ಯೆ—ನಡತೆ, ವೃತ್ತಿ ೫-೧೧; ೮-೨೯
ಚಲ—ಹಟ ೮-೪೨
ಚಲಿ—ದಿಟ್ಟ ೧೯-೪೧
ಚಲ್ಲಬಡಿ—ಹೊಡೆದು ಓಡಿಸು ೧೦-೨೩
ಚಾತುರಂಗ—ಚತುರಂಗ ಸೈನ್ಯ ೩-೮
ಚಾದಗೆ—ಚಾತಕ, ಮಳೆಹನಿಯನ್ನು ಕುಡಿದು ಜೀವಿಸುವ ಹಕ್ಕಿ ೩-೫
ಚಾರಣ—ಸ್ತುತಿಗಾಯಕ ೧೦-೨
ಚಾರಣಂಗೈ—ಸ್ತುತಿಸು, ಹೊಗಳು ೧೦-೨

ಚಾರು—ಸುಂದರ,
ಮನೋಹರ ೧೭-ಸೂಚನೆ
ಚಾಳಿಸು—ಅಣಕವಾಡು ೪-೧೯
ಚಾಳೆ—ಹಾವು ೨-೨೦; ೧೪-೧೬
ಚಿತ್ತಜ—ಮನ್ಮಥ ೭-೧
ಚಿತ್ತಜಾಂತಕ—ಶಿವ ೧೦-೬೩
ಚಿತ್ರ—ಸೋಜಿಗ, ವಿಚಿತ್ರ ೧-೧೫
ಚಿನುಮಯ—ಪರಮಾತ್ಮ ೧೨-೨೯
ಚಿಂತಾಮಣಿ—ಬಯಸಿದುದನ್ನು
ಕೊಡುವ ರತ್ನ ೮-೩೮
ಚೂತ—ಮಾವು ೧೬-೬
ಚೊಲ್ಲೆಯ—ಜಡೆಯ ತುದಿ ೫-೧೪
ಚೋದ್ಯ—ಆಶ್ಚರ್ಯ ೫-೧೫; ೧೧-೮
ಚೋಹ—ವೇಷ ೮-೬೧; ೧೬-೨೪
ಚೌದಂತ—ಐರಾವತ ೨೧-೬

ಛ

ಛವಿ—ಕಾಂತಿ ೪-೩೬

ಜ

ಜಂಗೆ—ಮೊಳಕಾಲಕೆಳಗಿನ
ಭಾಗ ೧೬-೨೦
ಜಂಝಾನಿಲ—ಬಿರುಗಾಳಿ ೧೫-೪೭
ಜಡಜಭವ—ಬ್ರಹ್ಮ ೧೩-೨೫
ಜಡವನಿತೆ—ಗಂಗೆ ೯-೨೩
ಜಂಬು—ನೇರಿಲ ೩-೧೧
ಜಂಬೂವೃಕ್ಷ—ನೇರಿಲಗಿಡ ೧೭-೨೬
ಜರಾ (ಜರೆ)—ಮುಪ್ಪು ೧-೨, ೧-೯
ಜಲಕೇಳಿ—ನೀರಾಟ, ನೀರಲ್ಲಿ
ಆಡುವ ವಿನೋದದಆಟ ೧-೨೦
ಜಲಜ—ಕಮಲ ೧೬-೧೦
ಜಲಧಿ—ಸಮುದ್ರ ೧೩-೨೮

ಜವ—ತೀವ್ರ ೧-೨; ೨೦-೯
ಜವ—ಯಮ ೯-೪೭
ಜವನಿಕೆ—ಪರದೆ ೭-೨೭; ೧೭-೪೭
ಜವ್ವನ—ಯೌವನ ೫-೧೬
ಜಸ—ಯಶ, ಕೀರ್ತಿ ೮-೧೫
ಜಳನಿಧಿ—ಸಮುದ್ರ ೧-೨೦
ಜಾಗರ—ಎಚ್ಚರಿಕೆ, ನಿದ್ದೆ
ಯಿಲ್ಲದಿರುವಿಕೆ ೧೨-೮
ಜಾಣ್ನುಡಿ—ಜಾಣತನದ
ಮಾತು ೧೯-೨೦
ಜಾವ—ಯಾಮ, ಏಳುವರೆ
ಗಳಿಗೆಯ ಕಾಲ ೮-೧೬
ಜಿಗುಪ್ಸೆ—ಹೇಸಿಕೆ, ತಿರಸ್ಕಾರ ೧೦-೨೭
ಜಿತ—ಜಯಿಸಿದ ೧-೮
ಜಿಂಹ್ವೆ—ನಾಲಗೆ ೯-೧೧
ಜೀರ್ಣ—ಹಳೆಯದಾದ,
ಶಿಥಿಲವಾದ ೬—೨೩
ಜುಂಜುದಲೆ—ಕೆಂಪುಕೂದಲುಳ್ಳ
ತಲೆ ೧೦-೪
ಜೂಟ—ಶಿವನ ಜಡೆ ೭-೩೦
ಜೊನ್ನ—ಬೆಳುದಿಂಗಳು ೧೩-೧೮

ಝ

ಝಂಪಿಸು—ನಡುಗಿಸು ? ೧೬-೩೦
ಝಾಡಿಮಾಡು—ಅಲು
ಗಿಸು ? ೧೬-೩೦

ಡ

ಡಮರುಗ—ಶಿವನ ಕೈಯಲ್ಲಿಯ
ಚರ್ಮವಾದ್ಯ ೧೬-೩೧
ಡಿಂಗರಿಗ—ಸೇವಕ ೮—೫೮
ಡಿಂಡಿಮ—ಒಂದುಬಗೆಯ
ಚರ್ಮವಾದ್ಯ ೩-೨

ಡೋಣೆ—ಬತ್ತಳಿಕೆ ೧೬—೨೦
ಡೊಳ್ಳು—ಹೊಟ್ಟೆ ೧೪-೨೭

ತ

ತಡಿ—ದಂಡೆ ೧೫-೧೬
ತತಿ—ಸಮೂಹ ೧-೮
ತತ್ತರಿಸು—ಗಾಬರಿಗೊಳ್ಳು, ನಡುಗು, ಬಲಗುಂದು ೭-೨೦
ತನಿ—ಮಧುರ, ಸಂಪೂರ್ಣ ೮-೨೭
ತನುಜ—ಮಗ ೧೧-೪೩
ತಮ—ಕತ್ತಲೆ ೧೪-೩೦
ತಮಾಲ—ಹೊಂಗೆಮರ, ಕಪ್ಪು ತೊಗಟೆಯುಳ್ಳಮರ ೧-೨
ತಮ್ಮಟ—ಒಂದುಬಗೆಯ ಚರ್ಮ ವಾದ್ಯ ೨-೪೩; ೩-೧೫; ೧೯-೩೨
ತರಗು—ಒಣ ಎಲೆ ೫-೪೦
ತರಗೆಲೆ—ಒಣಗಿದ ಎಲೆ ೩-೨೧
ತರಣಿ-ಸೂರ್ಯ ೧೧-೪೭
ತರಣಿ—ತೆಪ್ಪ, ಡೋಣಿ ೧೫-೪೮
ತರಿ—ಕತ್ತರಿಸು, ತುಂಡುಮಾಡು ೫-೪೩
ತರು—ಗಿಡ ೨-೫೫
ತರ್ಕೈಸು—ಅಪ್ಪಿಕೊಳ್ಳು ೨-೩೭: ೫-೪೬
ತರ್ಗು—ತಗ್ಗು, ಕೆಳಗಾಗು ೧೧-೨೫
ತವಕ—ಆತುರತೆ ೮-೨೦; ೮-೬೩
ತವನಿಧಿ—ಬತ್ತದ ಸಂಪತ್ತು ೪-೨೬; ೧೫-೬೨
ತವರಾಜ—ಒಂದುಬಗೆಯ ಶ್ರೇಷ್ಠ ವಾದ ಸಕ್ಕರೆ ೩-೬;೫-೭
ತವಿಸು—ಹೋಗಲಾಡಿಸು, ನಾಶಮಾಡು ೨-೫೨
ತವೆ—ಹೆಚ್ಚಾಗಿ, ಸಂಪೂರ್ಣವಾಗಿ ೧-೭
ತಳುಹು—ತಡ, ವಿಳಂಬ ೬-೮
ತಾಣ—ಸ್ಥಳ ೧೦-೪೯
ತಾತ—ತಂದೆ ೧೪-೫೨
ತಾಪಸ—ಅಜ್ಞಾನ, ನೀಚಸ್ವಭಾವ ೨-೪
ತಾರಕ—ಪಾರುಮಾಡುವವ, ನಾವಿಕ ೧-೪
ತಾರಕಾರಿ—ಷಣ್ಮುಖ ೧-೪
ತಾರಗೆ—ನಕ್ಷತ್ರ ೫-೪
ತಿಂತಿಣಿ—ಗುಂಪು ೨-೩೮
ತಿಂಥಿಣಿ—ಸಮೂಹ ೮-೭; ೧೧-೩೫
ತಿಲ—ಎಳ್ಳು ೧೭-೪೦
ತಿಸುಳ—ತ್ರಿಶೂಲ ೫-೪೯
ತೀಟೆ—ಚಾಪಲ್ಯ, ಕಾಮುಕತೆ ೧-೨೦
ತೀರ್ಚು—ಮುಗಿಸು ೨-೭
ತೀವು—ತುಂಬು ೮-೨೬; ೧೪-೪೧
ತುಂಗ—ಶ್ರೇಷ್ಠ, ಉನ್ನತ ೧-೧
ತುತಿಸು—ಸ್ತುತಿಸು ೯-೧೧
ತುರಗ—ಕುದುರೆ ೩-೧೬
ತುಷ್ಟಿ—ತೃಪ್ತಿ ೧೮-೩
ತೂಪಿರಿ—ಉಫ್ ಎಂದು ಊದು, ದೃಷ್ಟಿದೋಷ ನಿವಾರಿಸು ೧೩-೨೨; ೨೦-೨೨
ತೆರಳು—ಹೋಗು ೧೪-೧೪
ತೆರಹು—ಅವಕಾಶ, ಬಿಡುವು ೧೦-೩
ತೆವರು—ಎತ್ತರ ಸ್ಥಳ ೧೦-೧೨
ತೊಡಂಕು—ಅಡೆತಡೆ, ತಂಟೆ ೪-೨೨
ತೊಣೆ—ಹೋಲಿಕೆ ೧೬-೨೦
ತೊತ್ತು—ಸೇವಕಿ ೨-೩೨
ತೋಮರ—ಈಟಿ, ಬಾಣ ೩-೪
ತೊರೆ—ಹೊಳೆ, ನದಿ ೮-೬೧
ತೋರ—ದೊಡ್ಡ, ಬೆಲೆಯುಳ್ಳ ೨-೫೪

ತೋಷ,ತೋಷಣ—ಆನಂದ
೫-ಸೂಚನೆ
ತೋಹು—ಅಡಗಿ ಹೊಂಚು
ಹಾಕುವ ಸ್ಥಳ ೧೦-೫
ತ್ರಾಸ—ತರಾಸು ೮-೪೩
ತ್ರಿಣಯನ—ಶಿವ ೨-೪೪

ದ

ದಕ್ಷಾರಿ—ವೀರಭದ್ರ ೧೦-೭೨
ದಟ್ಟಡಿ—ಪುಟ್ಟಪುಟ್ಟ ಹೆಜ್ಜೆ,
ತಪ್ಪು ಹೆಜ್ಜೆ ೧೨-೧೭
ದಂಡಧರ—ಯಮ ೧೫-೪೭
ದನುಜ—ರಾಕ್ಷಸ ೧೪-೪೨
ದಂತಿ—ಆನೆ ೨-೧೭; ೭-೬
ದಂದುಗ—ಕಷ್ಟ, ಪೀಡೆ ೪-೩೧
ದಂಭ—ಆಡಂಬರ, ಮೋಸ ೭-೧೬
ದರ್ವೀಕರ—ಸರ್ಪ ೧-೧೯
ದಳವೇರು—ಬೆಳೆ, ಹೆಚ್ಚಾಗು ೧೩-೫
ದಾಕ್ಷಾಯಣಿ—ಪಾರ್ವತಿ ೧೦-೭೩
ದಾತ—ದಾನಿ ೪-೧೯; ೮-೨೨
ದಾತೃತ್ವ—ಉದಾರ ಗುಣ ೧೯-೨
ದಾನವ—ರಾಕ್ಷಸ ೧೫-೪೭
ದಾಯಾದ—ಭಾಗಾದಿ, ಪಿತ್ರಾ-
ರ್ಜಿತ ಆಸ್ತಿಯ
ಪಾಲುಗಾರ ೭ ಸೂಚನೆ
ದಾವಣಿ—ದನಗಳನ್ನು
ಸಾಲಾಗಿ ಕಟ್ಟುವ ಹಗ್ಗ ೮-೩೮
ದಾವಾನಲ—ಕಾಡಿನಕಿಚ್ಚು ೧೪-೬೧
ದಿಕ್ತಟ—ದಿಗಂತ, ದಿಕ್ಕುಗಳಕೊನೆ ೩-೨
ದಿಟ—ಸತ್ಯ ೧೦-೩
ದಿಂಡೆಯ—ಶೂರ ೨೧-೨
ದಿನಪ—ಸೂರ್ಯ ೧೮-೪೧

ದಿವಾಕರ—ಸೂರ್ಯ ೪-೩೬
ದಿವಿಜ—ದೇವತೆ ೧೪-೪೨
ದಿಶಾ—ದಿಕ್ಕು ೧೮-೩೪
ದೀಧಿತಿ—ಬೆಳಕು ೯-೫೩
ದುಕೂಲ—ರೇಶಿಮೆ ಬಟ್ಟೆ ೨-೫೪
ದುಗುಡ—ದುಃಖ,
ಚಿಂತೆ ೩-೧೪; ೧೦-೨೨
ದುಗ್ಧ—ಹಾಲು ೨೦-೭
ದುಂದುಭಿ—ಒಂದು ಬಗೆಯ
ದೊಡ್ಡ ಚರ್ಮ
ವಾದ್ಯ ೩-೨; ೪-೩೬
ದುಮ್ಮಾನ—ಚಿಂತೆ, ಸಂಕಟ ೧೫-೩೫
ದುರಿತ—ಪಾಪ ೧-೬; ೯-೪೯, ೧೫-೬
ದುರ್ನಿಮಿತ್ತ—ಅಪಶಕುನ ೪-೧೪
ದುರ್ಯಶ—ಅಪಕೀರ್ತಿ ೪-೨೪
ದೂರು—ಅಪವಾದ,ನಿಂದೆ ೧೦-೫೧
ದೌವಾರಿಕ—ಬಾಗಿಲು
ಕಾಯುವವ ೨-೨೬
ದ್ವಿಜಾಧಿಪ—ಚಂದ್ರ ೩-೧೦
ದ್ವಿಜಾವಳಿ—ಹಾವುಗಳು ೩-೧೨
ದ್ವಿಪದ—ಎರಡುಪಾದಗಳುಳ್ಳ ಪ್ರಾಣಿ
ದ್ವಿರಸನ—ಹಾವು ೩-೧೨
ದ್ವೈತ—ಎರಡೆಂಬ ತಿಳಿವಳಿಕೆ ೩-೭

ಧ

ಧನದ—ಕುಬೇರ, ಶ್ರೀಮಂತ ೧೬-೧
ಧಮ್ಮಿಲ್ಲ—ಮುಡಿ, ಹೆಳಲು ೧೧-೪೬
ಧರಿತ್ರಿ—ಭೂಮಿ ೧೯-೧೬
ಧವ—ಗಂಡ ೭-೨೭, ೧೫-೧೯
ಧವಲ—ಶುಭ್ರ, ಬಿಳಿದು ೧-೨೪
ಧಾಮ—ಮನೆ ೬-೨೨

ಧಾರಾಘಟ–ಧಾರಾಪಾತ್ರೆ; ಲಿಂಗದ ಮೇಲೆ ಹನಿಹನಿಯಾಗಿ ನೀರು ಬೀಳಲು ಕಟ್ಟಿದ ಪಾತ್ರೆ ೧೯-೧೦
ಧಾರುಣಿ–ಭೂಮಿ ೧೩-೨೨
ಧಾವತಿ–ಶ್ರಮ, ಕಷ್ಟ ೩-೨೮;೧೨-೩೦
ಧಾವಲ್ಯ–ಬಿಳುಪಾಗಿರುವಿಕೆ ೧೪-೧೦
ಧುರ–ಯುದ್ಧ ೫-೪೨; ೯-೩೭
ಧೃತ–ಧರಿಸಿದ ೧-೧
ಧೃತಿ–ಧೈರ್ಯ ೪-೩೧
ಧೌರೇಯ–ಮುಂದಾಳು ೧೫–೪೭

ನ

ನಕ್ಕು–ನೆಕ್ಕು ೧೪-೪೬
ನಖ–ಉಗುರು ೫-೧೫
ನಗರಿಪು–ದೇವೇಂದ್ರ ೪-೩೮
ನಂಜು–ವಿಷ ೧೫–೫೪
ನಂದನ–ಉಪವನ ೩-೮
ನನ್ನಿ–ಸತ್ಯ, ಪ್ರೀತಿ ೧-೭
ನಭ–ಆಕಾಶ ೧೦-೪೨
ನರಪ–ರಾಜ ೧೧-೧೧
ನಲ್ಲ–ಗಂಡ ೧೩-೭
ನವಿರು–ಕೂದಲು ೧೧-೪೩
ನಳನಳಿಸು–ಶೋಭಿಸು, ಮಿರುಗು ೫-೧೪
ನಳಿನ–ಕಮಲ ೧-೧೦
ನಸಿ–ಹಾಳಾಗು, ಕ್ಷೀಣವಾಗ ೫-೪೫
ನಾಕ–ಸ್ವರ್ಗ ೪–೩೬
ನಾಗ–ವಾಸುಕಿ, ಹಾವು ೪-೩೮
ನಾಗಚರ್ಮಧರ–ಶಿವ ೧೨-೩೧
ನಾಗಾಭರಣ–ಶಿವ ೧೨-೩೧
ನಾಡೆ–ಚೆನ್ನಾಗಿ ೧೨–೨೪

ನಾಭಿವಲಯ–ಹೊಕ್ಕುಳ ೧೬–೨೧
ನಾರಿ–ಬಿಲ್ಲಿನ ಹೆದೆ ೧೮-೬
ನಾಳೀಕ–ಕಮಲ ೧-೧೦
ನಾಳೀಕಸಂಭವ–ಬ್ರಹ್ಮ ೧-೧೦
ನಿಃಕಾಮಿ–ಆಸೆಯಿಲ್ಲದವ, ವಿರಕ್ತ ೧೯-೨೦
ನಿಕರ–ಸಮೂಹ ೧-೧೯
ನಿಖಿಲ–ಎಲ್ಲ ೧-೫
ನಿಚ್ಚ–ಯಾವಾಗಲೂ, ಸತ್ಯ ೨-೩೭
ನಿಟ್ಟಿಸು–ನೋಡು ೧೨-೧೭
ನಿತಂಬ–ಸ್ತ್ರೀಯರ ಸೊಂಟದ ಕೆಳಗಿನ ಭಾಗ ೧೧-೨೯
ನಿಧಾನ–ಹುದುಗಿಟ್ಟ ಐಶ್ವರ್ಯ ೨-೯; ೧೫-೩೨
ನಿನಾದ–ಧ್ವನಿ ೧-೨೧
ನಿಬಿಡ–ದಟ್ಟವಾದ ೧೧-೩೪
ನಿಬ್ಬಣಿಗರು–ವರನ ಸಂಗಡಿಗರು, ಆಪ್ತೇಷ್ಟರು ೧೧-೩೫
ನಿಮಿತ್ತ–ಕಾರಣ ೪-೨೨
ನಿರಯ–ನರಕ ೧೫-೪೮
ನಿರಾಮಯ–ರೋಗವಿಲ್ಲದ ೨೧-೧೩
ನಿರುತ–ಸತ್ಯ ೮–೨೨
ನಿರ್ಧೂತ–ಕಳೆಯಲ್ಪಟ್ಟ ೧-೨
ನಿಲಿಂಪ–ದೇವತೆ ೨೧-೧೩
ನಿಶಾಚರ–ಭೂತ, ರಕ್ಕಸ ೧-೧
ನಿಷಂಗ–ಬತ್ತಳಿಕೆ ೧೫-೩೩
ನಿಸ್ಸಾಳ–ಒಂದು ಬಗೆಯ ದೊಡ್ಡ ಚರ್ಮವಾದ್ಯ ೨-೨೬
ನಿಳಯ–ಮನೆ ೧೨-೨೪
ನೀರಧಿ–ಸಮುದ್ರ ೧-೨೧
ನೀಳ–ಉದ್ದ, ವಿಸ್ತಾರವಾದ ೮-೪೪
ನೂನ–ಕೊರತೆ ೧೫-೨೪

ನೆಗಳ್, ನೆಗಳು—ಮಾಡು,
ರಚಿಸು ೨-೫೩; ೧೦-೨೨
ನೆಗಳ್ಚು—ಮಾಡು ೮-೩೪
ನೆತ್ತರು—ರಕ್ತ ೧೦-೬೬
ನೆರವಿ—ಸಮೂಹ ೧-೨೩
ನೆಲದೇರ—ಶಿವ ೩-೧೮
ನೇತ್ರಾವಳಿ—ಒಂದು ಬಗೆಯ
ಸೀರೆ ೮-೩೧
ನೇಸರು—ಸೂರ್ಯ ೫-೩೦
ನೇಹ—ಸ್ನೇಹ, ಪ್ರೀತಿ ೧೦-೪೭
ನೇಹಿತ—ಸ್ನೇಹಿತ, ಗೆಳೆಯ ೯-೧೩
ನೊಸಲು—ಹಣೆ ೫-೧೪

ಪ

ಪಕ್ಕಾಗು—ಗುರಿಯಾಗು ೪—೨೪
ಪಗೆ—ವೈರಿ ೭-೭
ಪಂಕ-ಕೆಸರು, ಪಾಪ ೧—೨೦
ಪಜ್ಜಳಿಸು—ಪ್ರಜ್ವಲಿಸು,
ಹೊಳೆಯು ೯-೨೩
ಪಟಹ—ನಗಾರಿ ೨-೪೩; ೩-೨
ಪಟ್ಟಾವಳಿ—ರೇಶಿಮೆಯ
ಬಟ್ಟೆಗಳು ೮-೫; ೧೨-೩೭
ಪಟ್ಟಿರು—ಮಲಗಿರು ೯-೨೮; ೧೨-೪೦
ಪಡಿ—ಪ್ರತಿ, ಅದರಂತೆ ೧-೨೨;೩-೫
ಪಡಿಹಾರ—ಕಾವಲುಗಾರ,
ಬಾಗಿಲು ಕಾಯುವವ ೧೭-೫೪
ಪಡುವಣಾವ—ಅಸ್ತಸಮಯ ೧೪-೩೬
ಪಣೆ—ಹಣೆ ೯-೭
ಪಣ್ಣು—ಪಕ್ವವಾಗು ೪-೭
ಪತಂಗ—ದೀಪದಹುಳು ೧೫-೨೯
ಪತ್ತನ—ಪಟ್ಟಣ ೨-೪೭; ೭-೪೦
ಪತ್ತಳೆ—ಎಲೆ ? ೧೦-೨೦
ಪದ—ಪಾದ, ಚರಣ ೧೨-೨೮
ಪದಪು—ಪ್ರೀತಿ, ಸಂಭ್ರಮ,
ಸಂತೋಷ ೧-೧೯
ಪದಾತಿ—ಕಾಲ್ದಳ ೨-೨೬; ೫-೩೩
ಪದುಳ—ಕ್ಷೇಮ, ಒಳಿತು,
ನೆಮ್ಮದಿ ೨-೧೩; ೨-೩೭
ಪದ್ಮ—ಕಮಲ ೯-೨೫
ಪದ್ಮಿನಿ—ಕಮಲ ೩-೧೦
ಪನ್ನಗ—ಹಾವು ೧೪-೨೬
ಪಯೋಧರ—ಮೊಲೆ ೧೬—೨೧
ಪಯೋನಿಧಿ—ಸಮುದ್ರ ೧೪-೬೬
ಪರಮ—ಶ್ರೇಷ್ಠ ೧-೯
ಪರಮೆ—ತುಂಬಿ ೨—೫೮
ಪರಶು—ಕೈಗೊಡಲಿ ೯-೬; ೧೫-೩೫
ಪರಿಕಿಸು—ಪರೀಕ್ಷಿಸು ೧೨-೩೬
ಪರಿಚರ್ಯೆ—ಸೇವೆ ೫-೨೭
ಪರಿಜನ—ಸೇವಕರು ೩-೨೦
ಪರಿತಾಪ—ದುಃಖ ೧೦-೨೫
ಪರಿತೋಷ—ಆನಂದ ೮-೨೨
ಪರಿಭವ—ಸೋಲು, ಅಪಮಾನ ೪-೩೭
ಪರಿಪರಿಸು—ದೂರಮಾಡು ೮-೩೫
ಪರುಷ—ಸೋಂಕಿದುದನ್ನು
ಬಂಗಾರವಾಗಿಸುವ ಕಲ್ಲು ೪-೧೧
ಪಲಂಬು—ದುಃಖಿಸು, ಹಲುಬು ೨-೧೯
ಪಲಾಯನ—ಓಡಿ
ಹೋಗೋಣ ೧೯-೬೩
ಪಲ್ಮೊರೆ—ಹಲ್ಲುಕಡಿ,
ಸಿಟ್ಟಿಗೇಳು ೧೯-೬೩
ಪಲ್ಲವಿಸು—ಚಿಗುರು, ಹಬ್ಬು ೮-೧೩
ಪವಣು—ಅಳತೆ, ಔಚಿತ್ಯ,
ಸಮ ೮-೩೬

ಪಶುಪತಿ—ಶಿವ ೯-೧೪
ಪಸೆ—ಹಾಸುಗೆ ೪-೫
ಪಳಿ—ಪ್ರತಿ, ಸಮಾನ ೮-೩೫
ಪಳಿಕೈ—ನಿಂದಿಸು, ತಿರಸ್ಕರಿಸು ೧೬-೨೧
ಪಳುಕು—ಸ್ಫಟಿಕ ೨-೫೮
ಪಾಡು—ಹಣ್ಣಾಗಲು ಹದಕ್ಕೆ ಬಂದಿರುವಿಕೆ, ಅಂದ ೧೦-೩೨
ಪಾತಕ—ಪಾಪ ೯-೪೩
ಪಾರ್ವ—ಬ್ರಾಹ್ಮಣ ೧೦-೫೧
ಪಾಲ್ಗಡಲು—ಹಾಲಿನಸಮುದ್ರ ೨-೧೦
ಪಾವುಡ—ಉಡುಗೊರೆ ೧೯-೧೬
ಪಾಳೆಯ—ಶಿಬಿರ, ತಾಣ್ಯ, ಪಾಳ್ಯ ೬-೧
ಪಿಕ—ಕೋಗಿಲೆ ೩-೯
ಪಿಚ್ಛ—? ೨-೩೬
ಪಿತೃಪಕ್ಷ—ಪಿತೃಗಳಿಗೆ ಪಿಂಡವನ್ನು ಅರ್ಪಿಸುವಕಾಲ ೧೯-೧೮
ಪಿಂತೆ—ಹಿಂದೆ, ಪೂರ್ವದಲ್ಲಿ ೧೬-೩೫
ಪಿಪಾಸಾ—ನೀರುದಾಹ ೬-೩
ಪಿರಿಯಕೇರಿ—ಮಾದಿಗರ ಓಣಿ ೧೭-೫೪
ಪುಗು—ಪ್ರವೇಶಿಸು ೨-೭
ಪುಂಜ—ಸಮೂಹ, ಗುಂಪು ೧-೧೧; ೭-೨೨
ಪುಟವೇರು—ಜಿಗಿ, ಹಾರು ೮-೧೦
ಪುಟವೇಳು—ಜಿಗಿ, ಹಾರು ೧೩-೧೧
ಪುದಿ—ತುಂಬು ೧೫-೬೯
ಪುನೀತ—ಪವಿತ್ರವಾದ ೯-೨೫
ಪುರಮಥನ—ಶಿವ ೪-೬
ಪುರಹರ—ಶಿವ ೫-೪೨; ೮-೫೬
ಪುರಹೂತ—ಇಂದ್ರ ೧-೨೩
ಪುರ್ಬು—ಹುಬ್ಬು ೮-೧೫
ಪುಲ್ಲೆ—ಚಿಗರೆ ೧೨-೨೩
ಪುವ್ವು—ಹೂ ೧೦-೫೨
ಪುಷ್ಪಕ—ದೇವಲೋಕದ ವಿಮಾನ ೮-೬೫
ಪುಷ್ಪವಾಟಿ—ಹೂದೋಟ ೨-೧; ೧೪-೫೮
ಪುಸಿ—ಸುಳ್ಳು ೯-೧೯
ಪುಸಿಕ—ಸುಳ್ಳುಹೇಳುವವ ೪-೨೦
ಪುಳಕ—ರೋಮಾಂಚ ೮-೬೧
ಪುಳಿಂದ—ಬೇಡ ೧೦-೧
ಪೂತಾಂಗ—ಪವಿತ್ರವಾದ ದೇಹ ೯-೧೬
ಪೂತುರೆ—ಹೊಗಳಿಕೆಯ ಶಬ್ದ ೧೦-೭೪
ಪೆಂಪು—ಘನತೆ, ಹಿರಿಮೆ ೭-೧
ಪೆರೆ—ಚಂದ್ರ ೫-೪೮
ಪೆರೆಗತ್ತಿ—ಚಂದ್ರಾಯುಧ ? ೫-೪೩
ಪೆರೆಸೂಡಿದ—ಶಿವ ೨-೩೬
ಪೆರ್ಚು—ಹೆಚ್ಚು ೧೦-೪೭
ಪೆರ್ಚುಗೆ—ಹೆಚ್ಚಳ, ಹೆಚ್ಚುವಿಕೆ ೨-೬೪
ಪೆರ್ಮೆ—ಹೆಮ್ಮೆ, ಘನತೆ ೧-೧೬
ಪೊಗಳ್ಕೆ—ಹೊಗಳಿಕೆ ೧-ಸೂಚನೆ
ಪೊಡಮಡು—ನಮಸ್ಕಾರ ಮಾಡು ೮-೩೩
ಪೊಡೆ—ಹೊಟ್ಟೆ ೮-೩೩; ೬-೧೫
ಪೊಣ್ಮು—ಹೊರಹೊಮ್ಮು ೪-೩೬; ೯-೨೪
ಪೊಯ್—ಹೊಡೆ ೯-೨೨
ಪೊರಮಡು—ಹೊರಹೊರಡು ೬-೧೬
ಪೊಳಲು—ಪಟ್ಟಣ ೪-೧
ಪ್ರಕರ—ಸಮೂಹ ೧-೧೯
ಪ್ರಕ್ಷಾಳನ—ತೊಳೆಯುವಿಕೆ ೭-೧೧
ಪ್ರಘೋಷ—ಗರ್ಜನೆ, ಮೊರೆತ ೭-೩೧
ಪ್ರದಾತ—ಕೊಡುವವ ೧೫-೬೧
ಪ್ರಾಗ್ಗಿರೀಶ್ವರ—ಪೂರ್ವದಿಕ್ಕಿನ ಶ್ರೇಷ್ಠಬೆಟ್ಟ ೧೯-೧೦

ಪ್ರಾಜ್ಞ—ಅತ್ಯಂತ ಬುದ್ಧಿವಂತ, ಜಾಣ ೧-೧೪

ಫ

ಫಳಕ—ಢಾಲು—ಗುರಾಣಿ ೫-೩೯
ಫಣಿ—ಹಾವು ೯-೩೩
ಫಣಿಕುಂಡಲ—ಹಾವುಗಳನ್ನು ಆಭರಣಗಳನ್ನಾಗಿ ಮಾಡಿಕೊಂಡವ, ಶಿವ ೫-೧೨
ಫಾಲ—ಹಣೆ ೧೩-೫೪
ಫುಲ್ಲಶರ—ಮನ್ಮಥ ೩-೩; ೨೦-೫೫

ಬ

ಬಗೆ—ಸೀಳು ೧೭-೧೭
ಬಟ್ಟೆ—ದಾರಿ ೯-೪೫
ಬಡಗಲು—ಉತ್ತರದಿಕ್ಕು ೧೬-೨೮
ಬಡಿಶ—ಮೀನು ಹಿಡಿಯುವ ಗಾಳ ೧೮-೨೬
ಬಂಟ—ಯೋಧ, ಸೇವಕ ೧೦-೧೬
ಬಂಡುಣಿ—ತುಂಬಿ ೩-೯
ಬರಗು—ಒಂದು ಧಾನ್ಯ ೨-೨೩
ಬರತ—ಒಣಗಿದ, ಸಾರವಿಲ್ಲದ ೧೯-೬೦
ಬರಿದೆ—ವ್ಯರ್ಥವಾಗಿ ೪-೨೨
ಬರಿಸ—ವರ್ಷ ೪-೬
ಬಲಗೊಳ್ಳು—ಪ್ರದಕ್ಷಿಣೆಹಾಕು: ಶಕ್ತಿವಂತನಾಗು ೧-೮
ಬಲವರು—ಪ್ರದಕ್ಷಿಣೆ ಹಾಕು ೨-೧೮; ೧೨-೩೫; ೧೯-೫೫
ಬಲ್ಲಹ—ಗಂಡ, ಒಡೆಯ ೩-೨೮
ಬವರ—ಯುದ್ಧ ೯-೪೫
ಬಸಿರು—ಹೊಟ್ಟೆ ೮-೨೯
ಬಸುರು—ಹೊಟ್ಟೆ ೪-೨೭
ಬಳ್ಳಿವರಿ—ಹರಡು, ಹಬ್ಬು ೧೩-೧೫
ಬಳ್ಳು—ನರಿ ೧೫-೪
ಬಾಯ್ಬಿಡು—ದೈನ್ಯದಿಂದ ಹೇಳಿಕೊಳ್ಳು, ಒಳಗಿಂದೊಳಗೇ ಸಂಕಟಪಡು ೪-೧೪
ಬಾಲಾರ್ಕ-ಎಳೆಯ ಸೂರ್ಯ ೨-೨೬
ಬಾಲೇಂದುಧರ—ಶಿವ ೫-೨೬
ಬಾವನ್ನ—ಶ್ರೀಗಂಧ ೧೨-೪೫
ಬಾಸಣಿಸು—ಮುಚ್ಚು ೧೦-೨೦
ಬಾಹುಲೇಯ—ಷಣ್ಮುಖ ೧೦-೭೨
ಬಾಳ್ಕೆ—ಜೀವನ ೯-೩೮
ಬಿಜ್ಜಣಿಗೆ-ಬೀಸಣಿಗೆ ೩-೩
ಬಿಜಯಂಗೈ—ಬರು ೪-೯
ಬಿಟ್ಟಿ—ಪುಕ್ಕಟೆ ಮಾಡುವ ಕೆಲಸ ೧೯-೬೦
ಬಿತ್ತರ—ವಿಸ್ತಾರ, ಹರಹು ೧-೧೮
ಬಿದಿರು—ಬೀಸಾಡು, ಬಿರಿಯು ೧೬-೨೬, ೨೮
ಬಿದಿರ್ಚು—ಬಿಡಿಸು, ಸಡಲಿಸು ೧೪-೬೦
ಬಿನುಗು—ಕೀಳು, ಹೀನ ೪-೮, ೧೯-೬೫
ಬಿಯ್ಯಗ—ಬೀಗ ೧೦-೩೧, ೧೫-೩೯
ಬಿಸಿಗಣ್ಣು—ಹಣೆಗಣ್ಣು, ಉರಿಗಣ್ಣು ೮-೬೧
ಬೀಡೆ—ಬಿರುಕು ೧೨-೧೨
ಬೀಸರ—ನಾಶ, ಹಾಳು ೫-೩೦
ಬೀಳುಡಿಗೆ—ಉಟ್ಟುಬಿಟ್ಟಬಟ್ಟೆ, ಹಳೆಯ ಬಟ್ಟೆ ೧೦-೭೫, ೧೪-೧೩
ಬೀಳ್ನುಡಿ-ಪೊಳ್ಳು ನುಡಿ? ೭-೫
ಬುಧ—ಪಂಡಿತ ೧೫-೨
ಬೆಕ್ಕಸ—ಬೆರಗು ೪-೩೩

ಬೆಬ್ಬುಳಿಗೊಳ್ಳು—ಅಂಜು ೬-೨೦
ಬೆಂಬಳಿ—ಬೆನ್ನಹಿಂದೆ ೨-೬೩
ಬೆರಗುವಡು—ಆಶ್ಚರ್ಯ-ಹೊಂದು ೧೦-೬೬
ಬೆರಂಗು—ಆಶ್ಚರ್ಯ ೨-೫೦
ಬೆಸನ—ಚಿಂತೆ ೮-೫೯; ೧೦-೩
ಬೆಸಲು—ಹೆರಿಗೆ ೧೬-೯
ಬೆಸಸು—ಅಪ್ಪಣೆಕೊಡು ೨-೬
ಬೆಳವಿಗೆ—ಬೆಳವಣಿಗೆ ೧೪-೩೩
ಬೆಳಸು—ಬೆಳೆ ೬-೪
ಬೇತಾಳ—ಒಂದುಬಗೆಯ ಭೂತ ೧೫-೪
ಬೊಮ್ಮ—ಬ್ರಹ್ಮ ೮-೨೪
ಬೈಗು—ಸಾಯಂಕಾಲ ೧೨-೨೪
ಬೈಚಿಡು—ಅಡಗಿಸಿಡು, ಬಚ್ಚಿಡು ೮-೨೯

ಭ

ಭಕ್ತ್ಯಾರಂಭ—ಭಕ್ತಿಯೆಂಬ ಒಕ್ಕಲುತನ ೬-೩
ಭಂಗ-ಸೋಲು, ನಾಶ ೧-೧
ಭಂಜನ—ನಾಶಮಾಡುವಿಕೆ ೧-೨
ಭಟ—ಶೂರ ೨-೪೩
ಭರ್ಗ—ಶಿವ ೧೮-೪೩
ಭರ್ಮ—ಬಂಗಾರ ೧೨-೩೪; ೧೯-೧೦
ಭಲ್ಲೆಯ—ಈಟಿ, ಬರ್ಚಿ ೪-೩೦
ಭವಿ—ಭಕ್ತನಲ್ಲದವ; ಮತ್ತೆ ಮತ್ತೆ ಹುಟ್ಟುವವ ೯-೨
ಭಸನ—ತುಂಬಿ ೧೪-೪೪
ಭಸಿತ—ಭಸ್ಮ, ವಿಭೂತಿ ೭-೧೫
ಭಾಪುರೆ—ಭಲೆ ಎಂಬ ಹೊಗಳಿಕೆಯ ಶಬ್ದ ೧೦-೭೪
ಭಾರಣೆ—ಒಜ್ಜೆ ೯-೩೨
ಭಾವಭವ—ಮನ್ಮಥ ೧೪-೪೫
ಭಾಸುರ—ಹೊಳೆಯುವ, ಸುಂದರ ೨-೧
ಭಾಳ—ಹಣೆ ೯-೧೧
ಭಾಳಲೋಚನ—ಶಿವ ೫-೩೩
ಭಾಳಾಕ್ಷ—ಶಿವ ೪-೩೩
ಭಾಳೇಕ್ಷಣ—ಶಿವ ೧೬-೪೮
ಭೀರು—ಅಂಜುಗುಳಿ ೪-೩೮
ಭುಂಜಿಸು—ಊಟ ಮಾಡು ೧೯-೨೩
ಭುವನ—ಲೋಕ ೧-ಸೂಚನೆ
ಭೂತನಾಥ—ಶಿವ ೧೩-೪೨
ಭೂತಿ—ವಿಭೂತಿ ೨-೧೮
ಭೂತೇಶ—ಶಿವ ೨-೧೪
ಭೂವರ—ರಾಜ. ೫-೨೦
ಭೂಸುರ—ಬ್ರಾಹ್ಮಣ ೧೦-೬೧
ಭೃಂಗ—ಭ್ರಮರ, ತುಂಬಿ ೧-೧
ಭೃಂಗಿ—ಶಿವಗಣದಲ್ಲಿ ಒಬ್ಬ ೧-೧
ಭೃತ್ಯ—ಸೇವಕ ೯-೨೦
ಭೇಕ—ಕಪ್ಪೆ ೧-೧೯
ಭೇಕಿ—ಹೆಣ್ಣು ಕಪ್ಪೆ ೧-೧೯
ಭೇರೀ—ದೊಡ್ಡ ನಗಾರಿ ೯-೨೪
ಭೋಗಿ—ಹಾವು ೧೨-೨೧
ಭೋಗಿಭೂಷಣ—ಶಿವ ೧೫-೩೨
ಭೋಂಕನೆ—ಕೂಡಲೆ ೧೩-೫೨

ಮ

ಮಕರ—ಮೊಸಳೆ ೧-೧೯
ಮಕರತೋರಣ—ಹೊತ್ತು ತಿರುಗುವ ತೋರಣ ೧೧-೩೨
ಮಕುಟವರ್ಧನ—ರಾಜ, ಚಕ್ರವರ್ತಿ ೧೧-೩೫

ಮಖ–ಯಜ್ಞ ೫-೪೦
ಮಗುಳು–ಹೊರಳಿಬೀಳು ೧-೧೮
ಮಗುಳು–ಮತ್ತೆ, ಪುನಃ ೪-೪
ಮಚ್ಚರ–ಹೊಟ್ಟೆಕಿಚ್ಚು ೯-೫೦
ಮಚ್ಚು–ಮೆಚ್ಚುಗೆ ೧-೧೫
ಮಜ್ಜನ–ಸ್ನಾನ ೧೦-೫೦
ಮಝುಭಾಪು–ಭಲರೆ ಎಂಬ ಹೊಗಳಿಕೆಯ ಶಬ್ದ ೧೦-೭೪
ಮಂಜುಳ–ಮಧುರವಾದ ೧-೨
ಮಡಗು–ಇಡು ೪-೧೦
ಮಂಡಿಸು–ಮಲಗು, ಕೂಡ ೨-೫೮
ಮಥನ–ಕಡೆಯುವುದು ೧-೯
ಮದನ–ಕಾಮ ೨-೫೮
ಮಧುಕರ–ಗಂಡುತುಂಬಿ ೨-೫೭
ಮನಗೆಡು–ಉತ್ಸಾಹಕುಂದು ೧೩-೭
ಮನವಾರೆ–ಮನಸ್ಸುತುಂಬಿ ೧೨-೩೯
ಮನಸಿಜ–ಮನ್ಮಥ ೧೪-೧೦
ಮನಸಿಜಮದಾಪಹರ–ಶಿವ ೧೪-೧೦
ಮನು–ಮಂತ್ರ ೧೩-೨೧
ಮನೋರಥ–ಇಚ್ಛೆ ೨-೩
ಮಂಪರಾದ್ರಿ–ಒಂದುಪರ್ವತ ೧೮-೨೬
ಮಂದಾರ–ದೇವಲೋಕದ ಹೂ, ಪಾರಿಜಾತ ೨೧-೧೧
ಮಯೂರ–ನವಿಲು ೩-೯
ಮರುತ–ಗಾಳಿ ೨೩-೨೧
ಮರುಳು–ದೆವ್ವ, ಹುಚ್ಚು ೧೫-೫೫
ಮರುಳ್ಗೊಂಕು–ದೆವ್ವಹಿಡಿ ೧೫-೩೫
ಮರೆವೊಗು–ಶರಣಾಗತನಾಗು ೧೨-೩೫
ಮರ್ತ್ಯ–ಸಾವುಳ್ಳವ, ಮನುಷ್ಯ, ಭೂಮಿ ೨-೪
ಮರ್ಬು–ಕತ್ತಲೆ ೬-೧೦
ಮಲಯಜ–ಶ್ರೀಗಂಧ ೫-೧೦
ಮಸಗು–ವಿಜೃಂಭಿಸು, ಆಗು ೯-೩೮
ಮಸ್ತಕ–ತಲೆ ೭-೧೧
ಮಹಿ–ಭೂಮಿ ೨-೪
ಮಹಿತ–ಶ್ರೇಷ್ಠ ೧೯-೧೯
ಮಳಲು–ಉಸುಕು ೧೪-೩೯
ಮಾಗಿ–ಚಳಿಗಾಲ, ಸುಗ್ಗಿ ೫-೪
ಮಾಜು–ಅಡಗಿಸು, ಮುಚ್ಚಿಡು, ವಂಚಿಸು ೪-೧೦; ೧೬-೧೨
ಮಾಟ–ಕೆಲಸ, ಕಾಯಕ ೧೦-೪೬
ಮಾಣು–ಬಿಡು, ಹೋಗಲಾಡಿಸು ೮-೩೪; ೧೨-೩೧
ಮಾತಂಗ–ಆನೆ ೧೫-೪೧
ಮಾನಸ–ಮನಸ್ಸು ೧೨-೩೨
ಮಾಂದೆಯ (ಮಂದೇಹರ)–ಸೂರ್ಯನ ವೈರಿಯಾದ ರಕ್ಕಸರು, ಕತ್ತಲೆ ೩-೧೪
ಮಾಮರ–ಮಾವಿನಮರ ೩-೪
ಮಾರಾಂಕ–ಇದಿರಾಳಿ, ಶತ್ರು ೯-೩೫
ಮಾರಾರಿ–ಶಿವ ೧೦-೫೧
ಮಾವಂತ–ಮಾವಟಿಗ, ಆನೆ ನಡೆಸುವವ ೨-೧೫
ಮಾಸಾಳು–ವೀರ ೧೬-೪೫
ಮಿಂಡ–ವೀರ, ತರುಣ ೫-೩೪
ಮಿಸುನಿ–ಬಂಗಾರ ೮-೬
ಮುಕುರ–ಕನ್ನಡಿ ೧೬-೨೧
ಮುಗುಳು–ಮೊಗ್ಗೆ ೨-೧೬
ಮುಂಗುಲಿ–ಮುಂಗುಸಿ, ಹಾವಿನ ವೈರಿಯಾದ ಒಂದು ಪ್ರಾಣಿ ೧೨-೨೩
ಮುಂಗುಡಿ–ಮುಂಚಿನ, ಮುಂದಿನ ೮-೨೬
ಮುಡುಹು–ಹೆಗಲು, ಮೇಲ್ಭುಜ ೧೦-೪೨

ಮುಂಡಾಡು—ಅಪ್ಪಿಕೊಳ್ಳು, ಮುದ್ದಾಡು ೮-೫
ಮುದ್ರಿಸು—ಮುಚ್ಚು ೧೨-೪೭
ಮುಂಬರಿ—ಹೆಚ್ಚಾಗು, ಮುಂದೆ ಹೋಗು ೨-೨
ಮುವ್ವಾಯಿಲರು—ಮೂರು ಜನ ನ್ಯಾಯ ನಿರ್ಣಾಯಕರು ೪-೧೫
ಮುಸುಡು—ಮೋರೆ ೬-೧೦
ಮೂಡೆ—ಗಂಟುಮೂಟೆ ೧೩-೫; ೧೩-೪೪
ಮೂರ್ತಿಗೊಳ್ಳು—ರೂಪಾಗು ೨-೧೦
ಮೂರ್ಧಾಘ್ರಾಣ—ತಲೆಯನ್ನು ಮೂಸುವುದು ೨-೩೪; ೫-೫೦
ಮೃಗಯಾತ್ರಾ—ಬೇಟೆ ೧೦-೧
ಮೃಗಯಾತ್ರಾವಿನೋದ—ಯಾವಾಗಲೂ ಬೇಟೆಯಾಡುವ ಲವಲವಿಕೆ ೧೦-೧
ಮೃಡ—ಶಿವ ೮-೧೭
ಮೆಳೆ—ದಟ್ಟವಾಗಿ ಬೆಳೆದ ಗಿಡಗಳ ಗುಂಪು ೧೦-೧೨
ಮೇರು—ಭಾರತದ ಉತ್ತರ ದಿಕ್ಕಿನಲ್ಲಿರುವ ಒಂದು ಪರ್ವತ ೧-೮
ಮೈಗರೆ—ಅಡಗು, ಮೈಮರೆಸು ೮-೬೧
ಮೈಯಿಕ್ಕು—ನಮಸ್ಕರಿಸು ೨-೩೯
ಮೈವೆರ್ಚು—ಉತ್ಸಾಹಗೊಳ್ಳು ೧೪-೬೦
ಮೊತ್ತ—ರಾಶಿ; ಸಮೂಹ ೧-೧೮
ಮೊಮ್ಮ—ಮೊಮ್ಮಗ ೨-೬೩
ಮೊರೆ—ಧ್ವನಿಮಾಡು ೮-೬೧
ಮೊರೆಯಿಡು—ದೈನ್ಯದಿಂದ ಹೇಳಿಕೊಳ್ಳು; ಆಶ್ರಯ ಬೇಡು ೧೩-೧೫
ಮೊಲ್ಲೆ—ದುಂಡು ಮಲ್ಲಿಗೆ ೨-೨೦
ಮೊಳೆವಿತ್ತು—ಮೊಳಕೆಯೊಡೆದ ಬೀಜ ೬-೧೭
ಮೋದ—ಸಂತೋಷ ೪-೨೪
ಮೋಹರ—ಸೈನ್ಯ ೨೦-೩೪
ಮೌಕ್ತಿಕ—ಮುತ್ತು ೫-೧೨
ಮೌಳಿ—ಮುಖಂಡ, ಶ್ರೇಷ್ಠ ೪-೪೩

## ಯ

ಯಕ್ಷ—ದೇವತೆಗಳಲ್ಲಿ ಒಂದು ಬಗೆ ೧-೨೩
ಯಾಚನೆ—ಭಿಕ್ಷೆ ಬೇಡುವಿಕೆ ೧೮-೧೨
ಯುಗ—ಜೋಡು ೮-೬೪

## ರ

ರಘಟಾ—ರಗಳೆ, ಒಂದು ಬಗೆಯ ಪದ್ಯಜಾತಿ ೧-೧೪
ರಘುಜ—ರಾಮ ೨-೨೧
ರಚ್ಚೆ—ಬಯ್ಯುವಿಕೆ ೨-೩೬
ರಚ್ಚೆಗಿಡು—ಬಯ್ಯು ೪-೨೮
ರಜ—ಧೂಳಿ, ಕಸ ೮-೫೯; ೧೫-೪೫
ರಜತಗಿರಿ, ರಜತಾಚಳ—ಕೈಲಾಸ ಪರ್ವತ ೬-೨೪
ರಜನಿ—ರಾತ್ರಿ ೬-೧೦
ರಜ್ಜು—ಹಗ್ಗ ೬-೨; ೧೧-೭
ರತ್ನಾಕರ—ಸಮುದ್ರ ೧-೧೯
ರಥಿಕ—ರಥದಲ್ಲಿಕುಳಿತು ಯುದ್ಧ ಮಾಡುವವ ೫-೪೧

ರಂಭ—ಬಾಳೆಯಗಿಡ ೩-೪
ರವ—ಧ್ವನಿ ೩-೨; ೪-೩೬
ರಸನೆ—ನಾಲಗೆ ೧೫-೬೩
ರಸಿಕ—ವಿಲಾಸಪ್ರಿಯ ೮—೧೩
ರಹಸ್ಯ—ಗುಟ್ಟು ೭-೧೨
ರಾಮಣೀಯಕ—ಸುಂದರವಾದ ೨-೧೯
ರಾವುತ—ಕುದುರೆಯನ್ನೇರಿ
ಕಾದುವ ಸೈನಿಕ ೫-೪೧
ರಾಸಭ—ಕತ್ತೆ ೧೪-೩
ರಾಹಿತ್ಯ—ಇಲ್ಲದಿರುವಿಕೆ ೧೪-೩೯
ರೂಢಿ—ಭೂಮಿ ೨-೫
ರೂಹು—ರೂಪು ೨-೬೧,೮-೯,೮-೬೩
ರೇಣು—ಧೂಳು, ಹೂವಿನಪುಡಿ ೧-೨

ಲ

ಲಂಚಗೂಳಿ—ಕೈಯಾಸೆ
ಮಾಡುವವ ೩-೬
ಲಲ್ಲೆ—ಮುದ್ದು, ಪ್ರೀತಿ ೧೭—೩೮
ಲವಲವಿಕೆ—ಹುರುಪು, ಆತುರ ೪-೩೯
ಲಾಕುಳ—ಯೋಗದಂಡ ೪-೩೫
ಲುಬ್ಧಕ—ಲೋಭಿ ೧೦-೫೫
ಲೆತ್ತ—ಪಗಡೆಯಾಟ ೧೮-೩೦
ಲೋಗರು—ಜನಸಾಮಾನ್ಯರು ೮—೩೭
ಲೋಚನತ್ರಯ—ಶಿವ ೧೮-೪೩

ವ

ವತ್ಸರ—ವರ್ಷ ೮-೧೩
ವದನ—ಮುಖ ೧೨—೨೧
ವನಜ—ಕಮಲ ೮-೫೫
ವನಜೋದ್ಭವಾಂಡ—
ಬ್ರಹ್ಮಾಂಡ ೬-೧೦
ವನಧಿ—ಸಮುದ್ರ ೧-೧೦
ವಂದಿ—ಹೊಗಳುಭಟ್ಟ ೩-೨; ೧೧-೩೭
ವಪು—ದೇಹ ೨೦-೩೫
ವರಹ—ಚಿನ್ನದ ನಾಣ್ಯ ೪-೨೪
ವರ್ಣಕ—ಹಾಡುಗಬ್ಬ;
ವರ್ಣನಾಮಯವಾದ
ಕಾವ್ಯ ೧-೧೩
ವಲ್ಲಭ—ಗಂಡ ೫-೪೭
ವರ್ಷಾಕಾಲ—ಮಳೆಗಾಲ ೨-೫೬
ವಸನ—ಬಟ್ಟೆ ೮-೫೬; ೧೧-೩
ವಸುಧೆ—ಭೂಮಿ ೧-೧೨; ೧೦-೩
ವಸುಂಧರಾ—ಭೂಮಿ ೧೯-೫೨
ವಸುಮತಿ—ಭೂಮಿ ೨-೯
ವಾಚಾಧಿಪತಿ—ಬ್ರಹ್ಮ ೧೪-೨೪
ವಾಚಿಸು—ಹೇಳು ೧೪-೨೪
ವಾಜಿ—ಕುದುರೆ ೫-೪೧
ವಾಂಛಿತ—ಇಚ್ಛಿಸಿದ ೧೮-೯
ವಾಮ—ಎಡ ೧-೨೫; ೧೧-೬
ವಾರಾಂಗನೆ—ವೇಶ್ಯೆ ೪-೩
ವಾರ್ಧಿ—ಸಮುದ್ರ ೧-೭
ವಾಸವ—ಇಂದ್ರ ೧-೩
ವಾಸಿಪಂಥ—ಛಲ, ಪ್ರತಿಜ್ಞೆ,
ಪಂತ ೫-೩೦
ವಾಸುದೇವ—ಕೃಷ್ಣ ೪-೩೮
ವಿಕಲತೆ—ಹೌಹಾರುವಿಕೆ,
ಬಾಡುವಿಕೆ ೩-೬
ವಿಕ್ರಮ—ಸಾಮರ್ಥ್ಯ ೫-೨
ವಿಕ್ರಯಿಸು—ಮಾರು ೧೮-೨೪
ವಿಗಡ—ಭೀಕರ, ಶ್ರೇಷ್ಠ ೧೫-೪೧
ವಿಗ್ರಹ—ಮೂರ್ತಿ ೪-೨
ವಿಟ—ವಿಲಾಸಿ ೫-೧೫
ವಿತತಿ—ಸಮೂಹ ೩-೧೮, ೧೧-೨೦

## ಷ

ಷಡ್ರಸ—ಮಧುರ, ಆಮ್ಲ, ಕಟು, ತಿಕ್ತ, ಕಷಾಯ, ಲವಣ, ಎಂಬ ಆರು, ಬಗೆಯ ರುಚಿಗಳು ೧೭-೪೬
ಷೋಡಶ—ಹದಿನಾರು ೧೩-೫

## ಸ

ಸಕುತಿ—ಶಕ್ತಿ ೧೪-೯
ಸಂಕಲೆ—ಸರಪಳಿ, ಬೇಡಿ ೮-೪೫; ೧೦-೩೧
ಸಂಕುಳ—ಸಮೂಹ, ಗುಂಪು ೧೫-೯
ಸಂಘಾತ—ಕೊಲ್ಲುವಿಕೆ ೧-೧
ಸಚರಾಚರ—ಅಡ್ಡಾಡುವ ಮತ್ತು ಅಡ್ಡಾಡದಿರುವ ವಸ್ತು ೧೨-೨೪
ಸಜ್ಜೆ—ಮಲಗುವವಮನೆ, ಲಿಂಗದಕಾಯಿ ೧೮-೨೯; ೨೦-೧೨
ಸಂಚಕಾರ—ಮುಂಗಡಹಣ ೧೩-೩೯
ಸಂಜಾತ—ಹುಟ್ಟಿದ ೧-೧೨
ಸತ್ತಿಗೆ—ಕೊಡೆ ೧೧-೩೪
ಸದ್ಮ—ಮನೆ ೪-೧೬
ಸಂತತ—ಸದಾ ೧-೩
ಸಂತತಿ—ಸಮೂಹ ೬-೪
ಸಂತವಿಡು—ಸಮಾಧಾನಗೊಳಿಸು ೧೯-೨೭
ಸಂತಾನ—ಪೀಳಿಗೆ, ಸಮೂಹ ೧-೨೩
ಸಂದೆಗ—ಸಂಶಯ ೧೦-೧೭
ಸಂದೋಹ—ಸಮೂಹ ೧-೧೯; ೧೦-೨೧
ಸಪರ್ಯ—ಸೇವೆ ೧೭-೧೦; ೧೮-೨೯
ಸಂಮಿಳಿತ—ಕೂಡಿದ ೧-೨೧
ಸಂಭವಿಸು—ಉಂಟಾಗು, ಒದಗು ೫-೩೧
ಸಮರ—ಕಾಳಗ, ಯುದ್ಧ ೯-೪೭
ಸಂಪದ—ಭಾಗ್ಯ, ಐಶ್ವರ್ಯ ೧-೨೨, ೮-೧
ಸಮುದಯ—ಗುಂಪು ೧-೩
ಸಮ್ಮ—ತೊಗಲು ೯-೨೦; ೧೬-೩೦
ಸಮ್ಮಾರ್ಜನ—ತೊಳೆಯುವುದು ೧೮-೨೧
ಸರ—ಧ್ವನಿ ೬-೧೩
ಸರಸಿ—ಕೆರೆ, ಸರೋವರ ೧೦-೬೮
ಸರಸಿಜ—ಕಮಲ ೩-೯
ಸರಸಿಜಜ—ಬ್ರಹ್ಮ ೪-೩೮
ಸರಳು—ಬಾಣ ೨-೫೭; ೧೬-೨೧
ಸರ್ಪಭೂಷ-ಶಿವ ೧೩-೧೨
ಸರ್ವಮಂಗಳೆ—ಪಾರ್ವತಿ ೧-೨೪
ಸಲ್ಲಾಪ—ಸಲುಗೆಯ ಮಾತುಕತೆ ೫-೧೯
ಸವಣ—ಜೈನ ಸಂನ್ಯಾಸಿ ೯-೭; ೧೫-೫, ೨೦-೨೦
ಸವನ—ಹೋಮ, ಯಜ್ಞ ೨೦-೪೫
ಸಸಿ—ಮೊಳಕೆ, ಚಂದ್ರ ೨-೨೫; ೩-೪, ೬-೩
ಸಸಿನೆ—ಚೆನ್ನಾಗಿ, ನೆಟ್ಟಗೆ ೧೦-೫೭
ಸಾಗಿಸು—ಪೋಷಿಸು, ನಿರ್ವಹಿಸು ೧೦-೬೮
ಸಾತಿಶಯ—ಹೆಚ್ಚಳ ೧೫-೨
ಸಾನುರಾಗ—ಪ್ರೀತಿ ೮-೧೪
ಸಾಯುಜ್ಯ—ಮುಕ್ತಿ, ಪರಮಾತ್ಮನಲ್ಲಿ ಕೂಡಿಕೊಳ್ಳುವಿಕೆ ೫-೫೧
ಸಾಲ್ಗು—ಸಾಕು ೫-೨೩
ಸಿಗ್ಗು—ನಾಚಿಕೆ ೪-೧೪; ೧೯-೩೧

ಸಿಂಗ_ಸಿಂಹ ೨-೧೫
ಸಿಡಿಮಿಡಿಗೊಳ್ಳು_ತಳ
ಮಳಿಸು, ಚಡಪಡಿಸು ೪-೫
ಸಿಂಧ_ಪತಾಕೆ, ಬಾವುಟ ೧೩-೪೭
ಸಿಂಧು_ಸಮುದ್ರ ೧೩-೨೭
ಸಿಂಧೂರ_ಆನೆ ೧೭-೩೧
ಸಿರಿ_ಲಕ್ಷ್ಮಿ ೨-೬೩
ಸೀ_ಕರಿಕಾಗು ೧೫-೧೧
ಸೀಕರ_ತುಂತುರು, ಹನಿ
ಹನಿ ಬೀಳುವುದು ೩-೧೦
ಸೀಗುರಿ_ಒಂದುಬಗೆಯ
ಚಾಮರ ೨-೪೩;೧೩-೪೭
ಸೀಳು_ಸಿಳ್ಳು ೧೦-೪೩
ಸುಕೃತ_ಪುಣ್ಯ, ಭಾಗ್ಯ ೧-೧೩
ಸುಖನಾಸಿ_ಗರ್ಭಗುಡಿಯ
ಮುಂದಿನ ಕೋಣೆ ೧೦-೩೧
ಸುಗಿ_ಹೆದರು ೭-೧೯
ಸುಂಟಿಗೆ_ಸುಟ್ಟ ಮಾಂಸ ೧೦-೧೯
ಸುಂಟಿಗೆಗೋಲು_ಮಾಂಸ
ಸುಡಲು ನೆಟ್ಟ ಕಂಬ ೧೦-೧೯
ಸುದತಿ_ಚೆಲುವೆ ೧೧-೭
ಸುಧಾಕರ_ಚಂದ್ರ ೧೪-೪೫
ಸುಧಾಂಗ_ಚಂದ್ರ ೪-೩೮
ಸುಧೆ_ಅಮೃತ ೯-೪೯
ಸುಪ್ರತೀಕ_ಈಶಾನ್ಯ
ದಿಕ್ಕಿನ ಆನೆ ೧-೧೯
ಸುಮನ_ಒಳ್ಳೆಯ ಮನಸ್ಸು ೧೪-೩೯
ಸುಮ್ಮಾನ_ಆನಂದ,
ಮೌನ ೫-೨೭; ೮-೨೪
ಸುಯಿ_ಉಸಿರಿಡು,
ನಿಟ್ಟುಸಿರು ಹಾಕು ೪-೧೨
ಸುಯ್ಗರೆ_ನಿಟ್ಟುಸಿರು ಹಾಕು ೨-೨

ಸುಯಿಧಾನ_ಎಚ್ಚರ,
ಕಾವಲು ೧೪-೩೫; ೧೫-೩೭
ಸುರ_ದೇವತೆ ೧೩-೧೫
ಸುರಕುಜ_ಕಲ್ಪವೃಕ್ಷ ೧-೩
ಸುರಧೇನು_ಕಾಮಧೇನು ೧೫-೫೪
ಸುರನದಿ_ದೇವಗಂಗೆ ೧೮-೪೩
ಸುರಪ_ದೇವೇಂದ್ರ ೧೩-೧೯
ಸುರಭಿ_ಕಾಮಧೇನು,
ಆಕಳು ೩-೪; ೮-೩೮; ೨೦-೯
ಸುರಾಪಾಗೆ_ಗಂಗಾನದಿ ೫-೧೨
ಸುರುಚಿರ_ಮನೋಹರ
ವಾದ ೨-೯; ೫-೧೩
ಸುಲಿಪಲ್ಲು_ಶುದ್ಧವಾದಹಲ್ಲು ೫-೧೫
ಸುವರ್ಣ_ಬಂಗಾರ ೮-೧೨
ಸುಶೀಲತೆ_ಒಳ್ಳೆಯ ನಡತೆ ೫-೨
ಸೂಡು_ಧರಿಸು ೭-೮; ೧೨-೩೪;
೧೭-೫೧
ಸೂನೆಗಾರ_ಕಟುಕ ೧೦-೨೮
ಸೂರ_ಸೂರ್ಯ ೧೨-೧೧
ಸೂಸು_ಮುಂದೆಬರು, ಕಾಣು ೫-೧೪
ಸೆಲದಿ_ಜೇಡಹುಳು ೨೦-೨೨
ಸೈಗೆಡೆ_ಎರಗು, ನಮಸ್ಕಾರ
ಮಾಡು ೩-೨೨; ೭-೧೮; ೯-೨೦;
೧೧-೩೯; ೧೯-೨೨
ಸೈತಿಡು_ರಮಿಸು,
ಸುಮ್ಮನಿರಿಸು ೭-೨೧
ಸೈಗಣೆ_ತಾಳ್ಮೆ ೧೭-೪೮
ಸೈವೆರಗು_ಅತ್ಯಾಶ್ಚರ್ಯ ೭-೨೯
ಸೊಡರು_ದೀಪ ೫-೬; ೧೩-೯
ಸೊಂಪು_ಬೆಡಗು, ಚೆಲುವಿಕೆ ೧೩-೩
ಸೊಲ್ಲು_ಮಾತು ೧೧-೨೩

ಸೋಗೆಮುಡಿ—ನವಿಲುಗರಿಯಿಂದ ಸಿಂಗರಿಸಿದ ಮುಡಿ ೧೧-೩೬
ಸೋಂಕು—ಮುಟ್ಟು ೪-೨೮;೯-೨೨
ಸೋಜಿಗ—ಆಶ್ಚರ್ಯ ೫-೧೭
ಸೋಪಾನ—ಪಾವಟಿಗೆ ೪—೭
ಸೋಮ—ಚಂದ್ರ ೨೦—೩೭
ಸೋರ್ಮುಡಿ—ನೇತಾಡುವ ಮುಡಿ, ಸಡಿಲುಮುಡಿ ೧೧-೩೦
ಸೋಹು—ಬೇಟೆಯನ್ನು ಹುಡುಕುವಿಕೆ ೧೦-೫
ಸ್ತಂಭ—ಕಂಬ, ಆಸರೆ ೮-೪೪
ಸ್ತವನ—ಸ್ತೋತ್ರ ೨೧-೧೧
ಸ್ತೂಯಮಾನ—ಕೀರ್ತಿಸಲ್ಪಡುತ್ತಿರುವ ೧-೫
ಸ್ಫುರಿಸು—ಹೊಳೆ ೮-೬೫
ಸ್ಮರ—ಮನ್ಮಥ ೧೬—೨೧

ಹ

ಹಂಸತೂಲ—ಹಂಸಪಕ್ಷಿಯ ತುಪ್ಪುಳ ೧೧-೧೪
ಹಂಸತೂಲತಲ್ಪ—ಹಂಸದ ತುಪ್ಪುಳದಿಂದ ಮಾಡಿದ ಹಾಸಿಗೆ ೨—೨೨
ಹಗರಣ—ಒಣ ಒಯ್ಯಾರ, ಜಂಭ, ನಿಂದೆ ೮-೧೮; ೨೦-೨೬
ಹಡಪಿಗ—ಸೇವಕ, ತಾಂಬೂಲದವ ೭-೧೭
ಹಡಿಕೆ—ದುರ್ಗಂಧ ೧೫-೪
ಹರಣ—ಜೀವ ೬-೭;೯-೩೭
ಹರತಿ—ಅಪವಾದ ೧೭-೬೧
ಹರವರಿ—ಪ್ರದರ್ಶನ, ಪ್ರಕಟನೆ ೮-೬೧;೧೫-೨೦;೧೬-೩೭
ಹರಹಿಗ—ಹರಡುವವ ೯-೪೫
ಹರಿ—ಕುದುರೆ ೧೩-೪೮
ಹರಿಗೆ—ಢಾಲು ೯-೫೦
ಹರಿಬ—ಯುದ್ಧ ೧೬-೪೪
ಹರಿವಾಣ—ಗಂಗಾಳ ೫-೬
ಹಲುವೊರೆ—ಹಲ್ಲುಕಡಿ, ಸಿಟ್ಟಿಗೇಳು ೯-೩೨
ಹಲ್ಲೆ—ತಕ್ಕಡಿಯ ಪರಡಿ ೮-೪೩
ಹವಣು—ಪ್ರಮಾಣ, ಅಳತೆ ೮-೩೪
ಹಸರಿಸು—ಹರಡು ೧೦—೩೩
ಹಸಲೆ—ಹುಲ್ಲುಗಾವಲು ೧೨—೨೦
ಹಸಿತ—ನಕ್ಕ, ಅರಳಿದ ೧೮-೩೦
ಹಸು—ಹಂಚು, ಪಾಲುಮಾಡು ೧೦-೧೮
ಹಸೆ—ಹಾಸಿಗೆ, ಮಂಚ ೩—೩
ಹಸ್ತಿ—ಆನೆ ೨-೨೬
ಹಾವಸೆ—ಪಾಚಿ ೧೦—೧೨
ಹಾವುಗೆ—ಪಾದುಕೆ, ಕಟ್ಟಿಗೆಯ ಮೆಟ್ಟು
ಹುಲು—ಕ್ಷುಲ್ಲಕ ೮-೩೧
ಹುಲ್ಲೆ—ಚಿಗರೆ ೨-೫೨
ಹುಸಿಕ—ಸುಳ್ಳುಹೇಳುವವ ೧೪-೧೮
ಹುಳ್ಳಿ—ಒಣಗಿದ ಕಟ್ಟಿಗೆ, ಉರುವಲು ೧೦-೨೨
ಹೆಮ್ಮಗ—ಹಿರಿಯ ಮಗ ೨-೬೩
ಹೆರೆಮೆಡು—ಹಿಂಜರಿ ೭-೨೦
ಹೆರೆಹಿಂಗು—ಹಿಂಜರಿ, ಕೊರತೆಯಾಗು ೧೦-೨೬
ಹೇರಂಬ—ಗಣಪತಿ ೧೦-೭೨
ಹೇವರಿಸು—ಅಸಹ್ಯಪಡು ೧೫-೫೮
ಹೊರೆಯೇರು—ಸಂತೋಷಪಡು ೫-೧೦

## ಪಾರಿಭಾಷಿಕ ಶಬ್ದಗಳು

( ಇಲ್ಲಿಯ ಸಂಖ್ಯೆಗಳು ಸಂಧಿ, ಪದ್ಯಗಳನ್ನು ಸೂಚಿಸುತ್ತವೆ )

**ಅಂಗನ್ಯಾಸಗಳು :** ಸೃಷ್ಟಿನ್ಯಾಸ, ಸ್ಥಿತಿನ್ಯಾಸ, ಸಂಹಾರನ್ಯಾಸ. ಷಡಕ್ಷರ ಮಂತ್ರಗಳನ್ನು ದೇಹಕ್ಕೆ ಸಂಬಂಧಿಸುವ ವಿಧಿಗಳು ಇವು. ೭-೧೫

**ಅರಿವರ್ಗ:** ಆರು ಶತೃಗಳು : ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ೭-೨; ೧೫-೯, ೧೬-೪೩

**ಅಷ್ಟಸಿದ್ಧಿಗಳು :** ಅಣಿಮಾ, ಲಘಿಮಾ, ಗರಿಮಾ, ಮಹಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ ೪-೨೭

**ಆಗಮ :** ೨೮ ಆಗಮುಗಳು : ಕಾಮಿಕಾಗಮ, ಯೋಗಜಾಗಮ, ಚಿಂತ್ಯಾಗಮ, ಕಾರಣಾಗಮ, ಅಜಿತಾಗಮ, ದೀಪ್ತಾಗಮ, ಸೂಕ್ಷ್ಮಾಗಮ, ಸಹಸ್ರಾಗಮ, ಅಂಶುಮಾನಾಗಮ, ಸುಪ್ರಬೋಧಾಗಮ, ವಿಜಯಾಗಮ, ನಿಶ್ವಾಸಾಗಮ, ಸ್ವಯಂಭುವಾಗಮ, ಅನಿಲಾಗಮ, ವೀರಾಗುಮ, ರೌರವಾಗಮ, ಮಕುಟಾಗಮ, ವಿಮಲಾಗಮ, ಚಂದ್ರಜ್ಞಾನಾಗಮ, ಬಿಂಬಾಗಮ, ಪ್ರೋದ್ಗಿತಾಗಮ, ಲಲಿತಾಗಮ, ಸಿದ್ಧಾಗಮ, ಸಂತಾನಾಗಮ, ಸರ್ವೋಕ್ತಾಗಮ, ಪಾರಮೇಶ್ವರಾಗಮ, ಕಿರಣಾಗಮ, ವಾತುಲಾಗಮ. ೭-೧೨

**ಚತುರೋಪಾಯ :** ಸಾಮ, ದಾನ, ಭೇದ, ದಂಡ ೭-೭

**ಚತುರ್ವಿಧ ಪದವಿ :** ಸಾಲೋಕ್ಯ, ಸಾಮೀಪ್ಯ, ಸಾರೂಪ, ಸಾಯುಜ್ಯ ೪-೧೧

**ಚಾತುರಂಗ ಬಲ :** ಆನೆ, ರಥ, ಕುದುರೆ, ಕಾಲಾಳು ೩-೧

**ಚಾತುರ್ದಿಶಾ :** ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ೩-೧

**ಚಾತುರ್ವರ್ಗ :** ಧರ್ಮ, ಅರ್ಥ, ಕಾಮ, ಮೋಕ್ಷ

**ತನುತ್ರಯ :** ಸ್ಥೂಲತನು, ಸೂಕ್ಷ್ಮತನು, ಕಾರಣತನು ೧೪-೨೦

**ತಾಪತ್ರಯ :** ಆಧ್ಯಾತ್ಮಿಕ, ಆಧಿ ದೈವಿಕ, ಆಧಿ ಭೌತಿಕ ೭-೨

**ತ್ರಿವಿಧ ಜಂಗಮ ಲಿಂಗ :** ಸ್ವಯ, ಚರ, ಪರ ೧೯-೩೯

**ತ್ರಿವಿಧ ಮಲ :** ಆಣವಮಲ, ಮಾಯಾಮಲ, ಕಾರ್ಮಿಕಮಲ ೧೧-೧೨

**ತ್ರಿವಿಧ ಲಿಂಗಗಳು :** ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ೪-೧೧

**ದಶವಾಯು :** ಪ್ರಾಣ, ಅಪಾನ, ವ್ಯಾನ, ಸಮಾನ, ಉದಾನ ಇವು ಮುಖ್ಯ ಪ್ರಾಣಗಳು. ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ ಇವು ಉಪಪ್ರಾಣಗಳು ೭-೨

**ಪಂಚಭೂತ :** ಪೃಥ್ವಿ, ಅಪ್, ತೇಜ, ವಾಯು, ಆಕಾಶ ೧೬-೨೪

**ಪಂಚಾಕ್ಷರಿಮಂತ್ರ :** ಶಿವಾಯನಮಃ ೧೩-೧೯

**ಪಂಚಾಮೃತ :** ಕ್ಷೀರ, ಘೃತ, ದಧಿ, ಮಧು, ಶರ್ಕರ.

**ಪಾದೋದಕ :** ಗುರುಲಿಂಗಜಂಗಮಗಳು ತನ್ನಲ್ಲಿ ಒಳಕೊಳ್ಳುವ ರೀತಿಯನ್ನು ತಿಳಿಸಿಕೊಡುವ ಕ್ರಿಯೆ; ಇದು ಸಂಪೂರ್ಣ ಭಾವನಾಮವಾದ ವಿಧಿಯು. ಪಾದೋದಕದ ಮೂಲಕ ಭಕ್ತನು ಗುರುಲಿಂಗಜಂಗಮಗಳನ್ನು ಹೊಂದಿ ಸರ್ವಾಂಗಲಿಂಗಿಯಾಗುತ್ತಾನೆ. ಪಾದೋದಕ ಎಂದರೆ ಪಾದ ತೊಳೆದ ನೀರು ಎಂದು ಅರ್ಥವಲ್ಲ; ಇದು ಸಾಮರಸ್ಯ ಸ್ಥಿತಿಯನ್ನು ಹೊಂದುವ ರೀತಿಯನ್ನು ತಿಳಿಸುವ ವಿಧಾನ೧. ೭-೧೧; ೧೧-೨೧

**ಪ್ರಸಾದ :** ೨ಯಾವ ಫಲಪದವನ್ನಪೇಕ್ಷಿಸದೆ ಲಿಂಗಕಾರ್ಯಕ್ಕೋಸ್ಕರ ಕ್ರಿಯೆಗಳನ್ನು ಮಾಡುತ್ತ ತಾನು ಅನುಭವಿಸುವುದೆಲ್ಲವೂ ಪರಮಾತ್ಮನದೆಂದು ಭಾವಿಸಿ ಮಾಡುವುದು ಅರ್ಪಣವು; ಹೀಗೆ ಅರ್ಪಿಸಿ ಅನುಭವಿಸಲ್ಪಟ್ಟುದು ಪ್ರಸಾದವು೨

**ಮೂಜಗ :** ಸ್ವರ್ಗ, ಮರ್ತ್ಯ (ಪೃಥ್ವಿ), ಪಾತಾಳ ೧೩-೯

**ಮೂಲಪ್ರಣಮ :** ೩ಓಂಕಾರವೆಂಬ ಆದಿಪ್ರಣವದ ನೆನಹು ಮಾತ್ರದಿಂದ ಆದಿ ಅಕಾರ, ಆದಿಉಕಾರ, ಆದಿಮಕಾರಗಳು ಉಂಟಾಗುತ್ತವೆ. ಇವು ಅನುಕ್ರಮವಾಗಿ ಚಿನ್ನಾದ, ಚಿದ್ಬಿಂದು, ಚಿತ್ಕಲೆಗಳಾಗಿವೆ. ಇವು ಮೂರು ಮತ್ತು ಮೂಲಚಿತ್ತು ಇವು ಕೂಡಿದಲ್ಲಿ ಓಂಕಾರ ಪ್ರಣಮ ಉಂಟಾಗುತ್ತದೆ. ಇದೇ ಆದಿ ಪ್ರಣಮ.೩ ೧೨-೧೬

**ಷಡ್ರಸ :** ಮಧುರ, ಆಮ್ಲ, ಲವಣ, ತಿಕ್ತ, ಕಟು, ಕಷಾಯ ೧೭-೪೩

**ಷಣ್ಮತ :** ಶೈವ, ಶಾಕ್ತ, ವೈಷ್ಣವ, ಗಾಣಪತ್ಯ, ಸೌರ, ಕಾಪಾಲಿಕ.

---

೧ ಡಾ। ಪಿ. ಜಿ. ಹಳಕಟ್ಟಿ : ಶಿವಾನುಭ ಶಬ್ದಕೋಶ ಪುಟ ೧೦೧.೧೦೨

೨ ,, ,, ,, ,, ೧೦೫

೩ ,, ,, ,, ,, ೧೪೦

## ವ್ಯಕ್ತಿವಾಚಕ ಪದಗಳು

( ಇಲ್ಲಿಯ ಸಂಖ್ಯೆಗಳು ಸಂಧಿ, ಪದ್ಯಗಳನ್ನು ಸೂಚಿಸುತ್ತವೆ )

### ಅ



### ಆ



### ಇ

## ಪ

## ವ



## ಶ



## ಸ

## ಹ



## ಋಷಿಗಳು, ಪುರಾಣವ್ಯಕ್ತಿಗಳು

## ಸ್ಥಳವಾಚಕ ಪದಗಳು

( ಇಲ್ಲಿಯ ಸಂಖ್ಯೆಗಳು ಸಂಧಿ—ಪದ್ಯಗಳನ್ನು ಸೂಚಿಸುತ್ತವೆ )

## ದೇಶ–ಪ್ರದೇಶ



## ದೇವಾಲಯಗಳು–ಲಿಂಗಗಳು



## ಬೆಟ್ಟಗಳು

## ನದಿ–ತೀರ್ಥ



## ಬಟ್ಟೆಗಳು

